ಮನೆಮಂದಿಗೆಲ್ಲ ಮುದ ನೀಡುವ ಮಾಸಿಕ

# ಕಸ್ತೂರಿ

ಫೆಬ್ರುವರಿ ೧೯೯೫



ಬೆಲೆ: ರೂ. ೬-೦೦

ಬೇಂದ್ರೆ

ನ್ಮಶತಮಾನೋತ್ಸವ ವರ್ಷಾರಂಭ



ಇಂದಿರಾ ಜತೆಗಿನ ನನ್ನ ವರ್ಷಗಳು



ಚಿತ್ರಕೃಪೆ: ನ್ಯಾಶನಲ್ ಜಿಯೊಗ್ರಫಿಕ್

ಕಪ್ಪು-ಬಿಳಿ ಚಿತ್ರದಲಿ ವರ್ಣರಂಜಿತ ಕನಸು




# ಕಸ್ತೂರಿ

ಕನ್ನಡ ಡೈಜೆಸ್ಟ್

ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎನ್.ವಿ. ಜೋಶಿ

ಸಹಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ
ಎಂ.ಎಸ್. ಶಶಿಧರ

ಮುಖಪುಟ:
ವರಕವಿ ಬೇಂದ್ರೆ
ಚಿತ್ರ:
'ಕಸ್ತೂರಿ'ಯ ಸಂಗ್ರಹದಿಂದ

ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ-೫೮೦ ೦೨೦.


## ಚಿಂತನ

*'ಕುಣಿಯೋಣು ಬಾರಾ.... ಕುಣಿಯೋಣು ಬಾ....' ಎಂದು ಶಬ್ದಗಳನ್ನೂ ಸಾಹಿತ್ಯಾಸಕ್ತರನ್ನೂ ಏಕಕಾಲಕ್ಕೆ ಕುಣಿಸಿದ 'ಅಂಬಿಕಾತನಯದತ್ತ'ರ ಜನ್ಮ ಶತಮಾನೋತ್ಸವ ವರ್ಷವಿದು.*

*ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರಿಗೆ ಕನ್ನಡದ ಯಾವುದೆ ಸಾಹಿತ್ಯ ಪ್ರಕಾರ ಹೊರತಾಗಿ ಉಳಿಯಲಿಲ್ಲ. ಅನುವಾದ, ಕಥೆ, ನಾಟಕ, ಹರಟೆ, ವಿಮರ್ಶೆ, ಉಪನ್ಯಾಸ, ಕಾವ್ಯ ಮೊದಲಾದ ಕ್ಷೇತ್ರಗಳಲ್ಲಿ ಅವರು ಕೃಷಿ ಮಾಡಿದ್ದರು. ಭಾವಗೀತೆಗಳೆಂದರೆ ವಿಶೇಷ ಒಲವು. ಶಬ್ದಗಳಿಗೆ ಗೆಜ್ಜೆ ಕಟ್ಟಿ ಅವನ್ನು ಗಮಕದ ಗತ್ತಿನಿಂದ ತಾಳಬದ್ಧವಾಗಿ ನಲಿಸುವ ಕಲೆ ರಸೋಪಾಸಕ ಬೇಂದ್ರೆಯವರಿಗೆ ಸಿದ್ಧಿಸಿತ್ತು.*

*ಬೇಂದ್ರೆಯವರು ಎಂದೂ ದಂತಗೋಪುರದ ಕವಿಯಾಗಲಿಲ್ಲ. ಅವರೊಬ್ಬ ಸಂತೆಯ ಕವಿ. ಸಂತ ಕವಿಯೂ ಹೌದು. ಬದಲಾವಣೆ ಅವರ ಸಾಹಿತ್ಯಕ ಸಿದ್ಧಾಂತ. ನಿರಾಶಾವಾದಿಯಲ್ಲಿ ಭರವಸೆಯನ್ನೂ, ಪುಕ್ಕಲನಲ್ಲಿ ಧೈರ್ಯವನ್ನೂ ತುಂಬಬಲ್ಲಂಥ ಶಕ್ತಿ ಅವರ ಕೃತಿಗಳಲ್ಲಿದೆಯೆಂದರೆ ಅತ್ಯುಕ್ತಿಯಲ್ಲ.*

*ಕರ್ನಾಟಕದ ಏಕೀಕರಣ ಸೇರಿದಂತೆ ಕನ್ನಡ ಪರ ಆಂದೋಲನಗಳಲ್ಲಿ ಬಿಗಿದ ಮುಷ್ಟಿಯನ್ನು ಮೇಲೆತ್ತಿದ ಬೇಂದ್ರೆಯವರು ದೇಶಾಭಿಮಾನವನ್ನು ಪ್ರಕಟಿಸಿ ಸೆರೆಮನೆವಾಸವನ್ನು ಅನುಭವಿಸಿದವರು. ಗೆಳೆಯರ ಗುಂಪಿಗೆ ಬೀಜಾರೋಪಣ ಮಾಡಿ ಸಮಾನ ಮನಸ್ಕ ಸಾಹಿತಿಗಳೊಂದಿಗೆ 'ಜಯ ಕರ್ನಾಟಕ'ದಂಥ ಪತ್ರಿಕೆಯನ್ನೂ ನಡೆಸಿದವರು.*

*ಅಪೂರ್ವ ದಾರ್ಶನಿಕ, 'ಕವಿವರ' ಬೇಂದ್ರೆ ಮಾಸ್ತರರ ಬೀಜ ಸಿದ್ಧಾಂತಗಳೆಂದರೆ ಒಲವು, ಗೆಳೆತನ, ಸಾಮರಸ್ಯ, ದೈವಿಕತೆ ಮತ್ತು ಹೃದಯ ವಿವೇಕ. ಇವನ್ನು ನಮ್ಮಲ್ಲಿಯೂ ರೂಢಿಸಿಕೊಳ್ಳುವ ಮೂಲಕ ಆ ಮಹಾಚೇತನಕ್ಕೆ ಗೌರವ ಸಲ್ಲಿಸುವಾ.*

• ವ್ಯವಸ್ಥಾಪಕ ಸಂಪಾದಕ




ಜನ ಮನ ಜಾಗೃತಿ

ಜನವರಿ-೯೫ರ 'ಕಸ್ತೂರಿ'ಯಲ್ಲಿ ಪ್ರಕಟಗೊಂಡ ವೃಷಭೇಂದ್ರಯ್ಯ ಅವರು ಬರೆದ 'ಭ್ರಷ್ಟಾಸುರ ಸಂಹಾರ ಸಾಧ್ಯವೇ?' ಲೇಖನ ಜಾಗೃತಿ ಮೂಡಿಸುವಲ್ಲಿ ಸಾಫಲ್ಯ ಹೊಂದಿದೆ.

ಕಮತ್ತ್ರಹಳ್ಳಿ ಪ್ರೊ. ಶಿವಕುಮಾರ ಕಲ್ಲೂರ

ಹೊಸ ಬೆಳಕಿನಂತೆ

ಜನವರಿ ೧೯೯೫ರ ಸಂಚಿಕೆ ಹೊಸ ಬೆಳಕು ನೀಡುವಂತೆ ಬಂದಿದೆ. ಐದು ಮಿನಿ ಕಥೆಗಳು, ಕುವೆಂಪು ಕುರಿತಾದ ಲೇಖನಗಳು ಸೊಗಸಾಗಿದ್ದವು. ರಾಷ್ಟ್ರದ ಪ್ರಾಮಾಣಿಕ ಮಾಜಿ ಪ್ರಧಾನಿ ನಂದಾ ಅವರ ಪರಿಚಯ ಇಂದಿನ ಜನತೆಗೆ ಬಹಳಷ್ಟು ಅಗತ್ಯವಿತ್ತು.

ಮುಂದಿನ ಸಂಚಿಕೆಗಳಲ್ಲೂ ಪ್ರಸಿದ್ಧ ಕವಿಗಳನ್ನು ಮತ್ತು ಸಚ್ಚಾರಿತ್ರ್ಯವುಳ್ಳ ರಾಜಕಾರಣಿಗಳನ್ನು ಪರಿಚಯಿಸುವಿರಾ?

ಬೆಂಗಳೂರು ಎನ್. ಲಕ್ಷ್ಮೀನಾರಾಯಣ

ಖೇದಕರ

ವಾಸುಕಿ ಬರೆದ 'ಮಾಜಿ ಪ್ರಧಾನಿ ಮೌನ ಮುರಿದಾಗ' ಲೇಖನ ಹೃದಯಸ್ಪರ್ಶಿಯಾಗಿದೆ. ನಿಸ್ಪೃಹ ರಾಜಕಾರಣಿ, ಮಾಜಿ ಪ್ರಧಾನಿ ಗುಲಜಾರಿಲಾಲ ನಂದಾ ಈಗ ಅಜ್ಞಾತವಾಸದಲ್ಲಿರುವುದು ಅವರ ಅಭಿಮಾನಿಗಳಿಗೆ ಖೇದಕರ. ೨೫-೮-೧೯೭೮ ರಂದು ಕುರುಕ್ಷೇತ್ರದಲ್ಲಿ ಗೀತಾ ಮಂದಿರ ಉದ್ಘಾಟನೆ ಮಾಡಿ ಏಕಾಂಗಿಯಾಗಿ ತಮ್ಮ ನಿವಾಸಕ್ಕೆ ಹಿಂತಿರುಗುತ್ತಿದ್ದ ನಂದಾ ಅವರನ್ನು ಹಿಂಬಾಲಿಸಿ ವಿನಂತಿಸಿಕೊಂಡಾಗ (ಸಮಾರಂಭದಲ್ಲಿ ಭಾಗವಹಿಸಿದ್ದವರಿಗೆಲ್ಲ ಕೊಟ್ಟಿದ್ದ) ಶ್ರೀ ಮದ್ಭಗವದ್ಗೀತೆಯ ಪುಸ್ತಿಕೆಯ ಮೇಲೆ ಅವರು ಅಂಕಿತ ಹಾಕಿಕೊಟ್ಟರು. ಆ ಪುಸ್ತಿಕೆ ನನ್ನ ಹೆಮ್ಮೆಯ ವಸ್ತುವಾಗಿದೆ.

ಬೆಂಗಳೂರು ಪಿ.ಜಿ. ಅಗ್ನಿಹೋತ್ರಿ

ಗುಲಜಾರಿಲಾಲ ನಂದಾ ಅವರ ಪ್ರಾಮಾಣಿಕತೆ, ಶಿಸ್ತು ಮತ್ತು ಕಾರ್ಯದಕ್ಷತೆಯ ಗುಣಗಳನ್ನು ನಮ್ಮ ದೇಶದ ಇಂದಿನ ರಾಜಕಾರಣಿಗಳು ಅಳವಡಿಸಿಕೊಂಡಿದ್ದೇ ಆದರೆ ಭಾರತವು ಒಂದು ಪ್ರಬಲ ರಾಷ್ಟ್ರವಾಗಿ ಹೊರಹೊಮ್ಮುವುದರಲ್ಲಿ ಸಂದೇಹ ವಿಲ್ಲ.

ಹೂಲಿಹಳ್ಳಿ ಎಚ್.ಎಂ. ಬಸವರಾಜ

ಲೇಖನವು ಭಾರತ ರಾಜಕಾರಣದ ಹಲವು ಮಜಲುಗಳ ದರ್ಶನ ಮಾಡಿಸಿದೆ. ಶಾಸಕರಾದರೇನೇ ಕೋಟ್ಯಂತರ ರೂಪಾಯಿ ಮೌಲ್ಯದ ಆಸ್ತಿ-ಪಾಸ್ತಿ ಮಾಡಿಕೊಳ್ಳುವಂಥ ವ್ಯವಸ್ಥೆಯಲ್ಲಿ ದೇಶದ ದಿಕ್ಸೂಚಿಯಾಗಿ ಕಾರ್ಯ ನಿರ್ವಹಿಸಿದ ನಂದಾರವರ ಈಗಿನ ಸ್ಥಿತಿ ನೋಡಿದರೆ ಪ್ರಾಮಾಣಿಕ ರಾಜಕಾರಣಕ್ಕೆ ಈ ನಾಡು ನೀಡುತ್ತಿರುವ ಮರ್ಯಾದೆ ಇದೇ ಏನು ಎಂದು ಮರುಕ ಹುಟ್ಟುತ್ತದೆ. ದಿಲ್ಲಿಯ ತಮ್ಮ ವಾಸದ ಮನೆಯಿಂದ ಹೊರಹಾಕಲ್ಪಟ್ಟ ನಂದಾ ಅವರು ಅನುಭವಿಸಿದ ಅಪಮಾನ ತಿರಸ್ಕಾರ ಅಪಾರ. ಗಾಂಧಿಯ ಪಳೆಯುಳಿಕೆಯಂತಿರುವ ಅವರು ನಮ್ಮ ರಾಜಕಾರಣದ ಅಪರೂಪದ ವ್ಯಕ್ತಿಗಳಲ್ಲೊಬ್ಬರು. ಅಂಥವರ ಸಂತತಿ ಕ್ಷೀಣಿಸುತ್ತಿರುವುದು ಅಪಾಯಕರ.

ಚಾಮರಾಜನಗರ ಎಸ್. ಲಕ್ಷ್ಮೀನರಸಿಂಹ

ಇಂದಿರಾ ಗಾಂಧಿಯ ಸರ್ವಾಧಿಕಾರತ್ವ ಹಾಗೂ ತುರ್ತುಪರಿಸ್ಥಿತಿಯ ವಿರುದ್ಧ ಸಿಡಿದೆದ್ದುದನ್ನು ಓದಿದಾಗಲಂತೂ ನಂದಾ ಅವರ ಪ್ರಜಾತಂತ್ರ ಮೌಲ್ಯಗಳ ಬಗ್ಗೆ ಬೀಗಿದೆ.

ಲಾಲಬಹಾದ್ದೂರ ಶಾಸ್ತ್ರಿ, ರಾಜೀವಗಾಂಧಿ ಅವರ ಪರಿವಾರಕ್ಕೆ ಮತ್ತು ಮೊರಾರ್ಜಿ ದೇಸಾಯಿಯವರಿಗೆ ಸರಕಾರ ನಿಃಶುಲ್ಕ ಮನೆಗಳನ್ನು ನೀಡಿದುದುಂಟು. ಆದರೆ ನಂದಾರಿಗೆ?

ಗೋಹತ್ಯಾ ಚಳುವಳಿಯಲ್ಲಿ ಗೂಂಡಾ ಜನರು

ನುಸುಳಿಕೊಂಡಿದ್ದರ ಪರಿಣಾಮವಾಗಿ ನಂದಾ ಗೃಹ ಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಿದಾಗ ವಾಜಪೇಯಿ ಉದ್ಗರಿಸಿದ್ದರು- "ಇಂದಿರಾ ಮಂತ್ರಿಮಂಡಲದ ಒಂದು 'ಗೋವು' ಗೋಹತ್ಯಾ ಚಳವಳಿಯ ಷಡ್ಯಂತ್ರದಿಂದಾಗಿ ರಾಜೀನಾಮೆ ಕೊಟ್ಟು ಹೊರ ಬಂತು."

**ಹುಬ್ಬಳ್ಳಿ ವಾಸುದೇವ ಕಲಘಟಗಿ**

**ಕವಿ ಸ್ಮರಣೆ**

೧೯೯೪ರ ಮೊದಲ ಸಂಚಿಕೆ ನಾವೀನ್ಯವಾಗಿ ಮೂಡಿ ಬಂದಿದೆ. 'ಕಾಡಿನ ಕವಿ' ಕುವೆಂಪು ವ್ಯಕ್ತಿತ್ವವನ್ನು ಡಾ. ಶಿವರುದ್ರಪ್ಪ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಇಂಗ್ಲೀಷ್ ಸಾಹಿತ್ಯ ಪರಂಪರೆಯಿಂದ ಕನ್ನಡ ಸಾಹಿತ್ಯಕ್ಷೇತ್ರವನ್ನು ಶ್ರೀಮಂತಗೊಳಿಸಿದುದು ಈ ಯುಗದ ಕವಿಯ ವೈಶಿಷ್ಟ್ಯವಾಗಿದೆ. 'ಕುವೆಂಪು ಕೆಲವು ಪ್ರಸಂಗಗಳು' ಮೆಲುಕು ಹಾಕುವಂತಿವೆ.

**ಹಂಪೆ ನಾಗೇಂದ್ರ ಕಾಸರವಳ್ಳಿ**

'ಕಾಡಿನ ಕವಿ' ಲೇಖನ ಹೃದಯ ತಟ್ಟುವಂತಿತ್ತು.

**ಮೋಟೆಬೆನ್ನೂರು ಮಂಜುನಾಥ ಕುಂಕೆ**

ರಸಋಷಿಯ ಮುಖಪುಟದೊಂದಿಗೆ ಬಂದ 'ಕಸ್ತೂರಿ' ಮುದ ನೀಡಿತು. ಐದು ಮಿನಿ ಕಥೆಗಳು ಸೊಗಸು.

**ಬಿಂಡಿಗನವಿಲೆ ಜೆ. ಕೋಮಲ**

**ಮನೋಜ್ಞ**

ಜಿ.ಎಸ್. ಶಿವರುದ್ರಪ್ಪ ಬರೆದ 'ಕಾಡಿನ ಕವಿ' ಮತ್ತು ಚಂದ್ರಾನಾಯ್ಡು ಬರೆದ 'ನನ್ನ ತಂದೆ ಸಿ.ಕೆ. ನಾಯ್ಡು' ಬರಹಗಳು. ಮನೋಜ್ಞವಾಗಿದ್ದವು.

**ಗದಗ ಟಿ.ಎ. ಹೊಂಬಳ**

ಕುವೆಂಪು-ಒಂದು ಮುಗಿಯದ ಕಥೆ. ಅವರ ದಿವ್ಯ ಗ್ರಂಥ 'ಶ್ರೀ ರಾಮಾಯಣ ದರ್ಶನಂ'ಗೆ ಬೆಲೆ ಕಟ್ಟೋಕಾಗುತ್ತಾ?

**ಹಾರೂಗೇರಿ ಕಲ್ಲೇಶ ಕುಂಬಾರ**

**ಅರ್ಥಗರ್ಭಿತ**

ಕನ್ನಡದ ಹಿರಿಯ ಚೇತನ, ಯುಗದ ಕವಿ, ರಸಋಷಿ ಕುವೆಂಪು ಬಗ್ಗೆ ಜಿ.ಎಸ್. ಶಿವರುದ್ರಪ್ಪ ಬರೆದ 'ಕಾಡಿನ ಕವಿ ಕುವೆಂಪು' ಲೇಖನ ಅರ್ಥಗರ್ಭಿತ.

**ಹಳೇಹಳ್ಳಿ ಎಚ್.ಎನ್. ಕಿರಣ್‌ಕುಮಾರ್**

**ವಿವರ ಮಾಹಿತಿ**

ಜನವರಿ 'ಕಸ್ತೂರಿ'ಯ 'ವೈದ್ಯರಿಲ್ಲದ ಹೊತ್ತಿನಲ್ಲಿ' (ಆರೋಗ್ಯದಂಗಳ) ಲೇಖನ ತುಂಬಾ ಉಪಯುಕ್ತವಾಗಿತ್ತು. ಶೇಕಡಾ ೭೦ರಷ್ಟಿರುವ ಗ್ರಾಮೀಣ ಜನರಿಗೆ ಅನುಕೂಲವಾಗುವಂಥ ಪ್ರಾಥಮಿಕ ಉಪಚಾರಗಳ ವಿವರವಾದ ಮಾಹಿತಿ ನೀಡಿದ್ದಕ್ಕೆ ಧನ್ಯವಾದಗಳು.

**ವಿಣಗಿ ಬಸಾಪುರ ಉ.ಶಾ. ಬಸವಣ್ಣಪ್ಪ**

ಅತ್ಯುಪಯುಕ್ತ ಲೇಖನ. ನಮ್ಮ ಜೀವನದ ಯಾವುದೇ ಕ್ಷಣದಲ್ಲಿ ನಾವು ಅಪಾಯಕ್ಕೆ ಈಡಾಗಬಹುದಾದ್ದರಿಂದ ಪ್ರತಿಯೊಬ್ಬನೂ ಪ್ರಾಥಮಿಕ ಉಪಚಾರದ ವಿಧಾನವನ್ನು ತಿಳಿದುಕೊಳ್ಳಬೇಕು. ವೈದ್ಯರಿಲ್ಲದ ಹಳ್ಳಿಗಳ ಜನರಿಗೆ ಸೂರ್ಯಕಲಾ ಅವರು ಬರೆದಿರುವ ವೈದ್ಯಕೀಯ ಬರಹ ಧೈರ್ಯ ನೀಡುವಂತಿದೆ.

**ಅಸ್ಕಿಹಾಳ ಸಂಗಣ್ಣ ತೆಲಗಾಣಿ**

**ಚನ್ನಗಿರಿ ಕೆ.ಪಿ.ಎಂ. ಅಣ್ಣಯ್ಯಸ್ವಾಮಿ**

ಹೆಚ್ಚುತ್ತಿರುವ ಜನಸಂಖ್ಯೆಯ ಈ ದಿನಗಳಲ್ಲಿ ಇಂಥ ಲೇಖನಗಳು ಸ್ವಾಗತಾರ್ಹ. ಗ್ರಾಮೀಣ ಜನರಿಗೆ 'ವೈದ್ಯರಿಲ್ಲದ ಹೊತ್ತಿನಲ್ಲಿ,' ಬರಹ ಉತ್ತಮ ಸಲಹೆಗಳನ್ನು ನೀಡುವಂತಿದೆ.

**ಅನವಾಲ ಶ್ರೀಪಾದ ಜೋಶಿ**

**ರೋಚಕ**

'ತೋಳ-ಮಾನವರ ರೋಚಕ ಪ್ರಕರಣಗಳು' (ಅರುಣ) ಲೇಖನ ರೋಮಾಂಚನಕಾರಿ. ಐದು ಮಿನಿಕಥೆಗಳ ಸಂಗ್ರಹ ಉತ್ತಮವಾಗಿತ್ತು.

**ಮೋಟೆಬೆನ್ನೂರು ಪ್ರಕಾಶ ಮನ್ನಂಗಿ**

(ಆರನೇ ಪುಟಕ್ಕೆ)

# ಅಂತರಂಗ


ಬುದ್ಧಿ ಎಂಬ ಇದ್ದಿಲು (ನೀತಿ ಕಥೆ) ............... ೭
* ಭೀಮಸೇನ
ನನ್ನ ನಾ ಕಂಡಂತೆ ............................... ೧೦
* ದ.ರಾ. ಬೇಂದ್ರೆ
ಗೆಳೆಯರು ಕಂಡಂತೆ ಬೇಂದ್ರೆ ..................... ೧೪
* ವಿವಿಧ ಲೇಖಕರು
ಅಣ್ಣಾ ಅವರ ಪ್ರಾಣಿ ಪ್ರೀತಿ .................... ೨೦
* ವಾಮನ ಬೇಂದ್ರೆ
ಬ್ರಾಡ್ಮನ್, ಬೇರ್ನ್ಸ ದ್ವಿಶತಕ
ಇಂಗ್ಲೆಂಡ್ ತಂಡಕ್ಕೆ ಸೂತಕ
(ಕ್ರಿಕೆಟ್ ಪುಟ) ................................ ೨೬
* ಅಮೋಘವರ್ಷ
ಪ್ರಾಮಾಣಿಕ ಕಳ್ಳ (ಕಥಾನುವಾದ)............... ೩೦
* ದಾಸ್ತೊವಸ್ಕಿ
ಅಧಿಕಮಾಸ ಏಕೆ ಬರುತ್ತದೆ? ................ ೫೧
* ಶ್ರೀವತ್ಸ ಎಸ್.ವಟಿ
ಹೀಗಿತ್ತು ಒಂದು ಚೇತನ ...................... ೫೮
* ಎಸ್ಕೆ ಹಳೆಯಂಗಡಿ
'ಉತ್ತರ ಕನ್ನಡದ ಮೂಗುತಿ'
ಮಿರ್ಜಾನ ಕೋಟೆ ...................... ೬೧
* ಆರ್.ಜೆ. ಶ್ಯಾನಭಾಗ
ನುಡಿಚಿತ್ರಗಳ ಮೋಡಿಗಾರ ಎಚ್ಚೆಸ್ಕೆ ............ ೬೬
* ಎ. ಮಾಧವ ಉಡುಪ
ಅದ್ಭುತ ಪ್ರಗತಿ (ಹರಟೆ) ...................... ೭೩
* ಎಂ.ಡಿ. ಗೋಗೇರಿ
ಭಾರತೀಯ ಅಂಚೆಚೀಟಿಗೆ
೧೪೦ ವರ್ಷ.................................. ೭೮
* ಎಂ.ಎಂ. ಇನಾಮದಾರ


೯



೭೮




೧೦೯



ಅದೃಶ್ಯ ತೈಲ (ಕಥೆ) .............................. ೮೪
* ಪಿ. ಶಿವರಾಮ
ಮೊಯಿಲಿಯವರ
ಕಾದಂಬರಿಗಳು (ಸಮೀಕ್ಷೆ) .................... ೮೯
* ಪ್ರೊ. ಸುನೀತಾ ಶೆಟ್ಟಿ
ಬೆನ್ನು ಹತ್ತಿದ ಭೂದೇವಿ
(ಲಲಿತ ಪ್ರಬಂಧ) ............................ ೯೮
* ಡಾ. ಎಂ.ಆರ್. ಮಂದಾರವಲ್ಲಿ
ಬೋರ್ಡೋ ದ್ರಾವಣದ
ಆಜೇಯ ಶತಕ ............................ ೧೦೯
* ಸೋಮಶೇಖರ ರುಳಿ

## ಸ್ಥಿರ ಶೀರ್ಷಿಕೆಗಳು

ಜ್ಞಾನ ನಿಧಿ ........................................... ೪೩
ನಿಮ್ಮ ಶಬ್ದ ಭಾಂಡಾರ ಬೆಳೆಯಲಿ ............. ೪೯
ಮಾತು ಮಾಣಿಕ್ಯ ................................... ೬೪
ನೆನಪು ನೆರಳಿನಲ್ಲಿ ................................ ೮೨
ನಮ್ಮ ಊರಿನ ಪುಣ್ಯ ಜೀವಿಗಳು ............. ೯೬
ಅಚ್ಚಳಿಯದ ಪುಟಗಳು ......................... ೧೦೬



ಇಂದಿರಾ ಜತೆಗಿನ ನನ್ನ ವರ್ಷಗಳು
ಪುಪುಲ್ ಜಯಕರ್
೧೧೩

# ಬೆಳಕಿಂಡಿ

ಅನುಭವಗಳ ಒಂದು ದೊಡ್ಡ ಸಂತೆಯೇ ಜೀವನ

**ಡಾ. ಶಿವರಾಮ ಕಾರಂತ**

ಈ ಬಣ್ಣ ಬಣ್ಣದ ಹಕ್ಕಿ, ಮರ, ನಿಸರ್ಗ, ಪ್ರಾಣಿ, ಹೂ-ಸಸ್ಯಗಳೆಲ್ಲ ಇಲ್ಲದಿರುತ್ತಿದ್ದರೆ ನಮ್ಮ ಜೀವನ ಎಷ್ಟು ನೀರಸ, ವರ್ಣಹೀನವಾಗಿರುತ್ತಿತ್ತು!

**ಜವಾಹರಲಾಲ ನೆಹರೂ**

ರಾತ್ರಿ ಹೂಗಳನ್ನು ಗುಟ್ಟಾಗಿ ಅರಳಿಸುತ್ತದೆ ಮತ್ತು ಹಗಲಿಗೆ ಧನ್ಯವಾದಗಳನ್ನು ಪಡೆಯಲು ಅನುವು ಮಾಡಿಕೊಡುತ್ತದೆ.

**ರವೀಂದ್ರನಾಥ ಠಾಕೂರ**

ವಾತ್ಸಲ್ಯಮಯಿಯೊಡನೆ ಇರುವಾಗ ವರ್ಷಗಳೂ ಕ್ಷಣದಂತೆ ಭಾಸವಾಗುತ್ತವೆ.

**ಕ್ಷಾತ್ರ ಚೂಡಾಮಣಿ**

ಜಗತ್ತಿನಲ್ಲಿ ಅತಿ ಹೆಚ್ಚು ಭಾರ ಹೊರುವ ಪ್ರಾಣಿ ಯಾವುದು? ಎನ್ನುವುದಕ್ಕೆ ಪುಟ್ಟ ಬರೆದ- "ತಂದೆ".

**ಎಂಆರ್‌ಎಸ್**

ಆರೋಗ್ಯದಂಗಳ
ಅಲರ್ಜಿ ನಿಮಗೂ ಕಾಡುತ್ತಿದೆಯೇ ?
● ಶ್ರೀಕಾಂತರಾವ್
೧೨೫

(ಮೂರನೇ ಪುಟದಿಂದ)

### ಬಯಲಿಗೆಳೆದಿವೆ

ಐದು ಮಿನಿ ಕಥೆಗಳನ್ನು ಓದಿ ಸಿಹಿಜೇನು ಉಂಡಷ್ಟು ಖುಷಿಯಾಯಿತು. 'ಕಥಾಮೋದಕ'ದ ನೆನಪು ಹಸಿರಾಗಿರುವಾಗಲೇ ಮತ್ತೊಮ್ಮೆ ಆಸಕ್ತಿಕರ ಕಥೆಗಳನ್ನು ಪ್ರಕಟಿಸಿದ್ದೀರಿ. ಎಲ್ಲ ಕಥೆಗಳು ಸಮಾಜದ ಡೊಂಕನ್ನು ಬಯಲಿಗೆಳೆದಿವೆ.

**ಜಾಲೀಹಾಳ — ನಾಗರಾಜ ಮೇಟಿ**

### ಹೀಗಿರಬೇಕು

ಜನವರಿ 'ಕಸ್ತೂರಿ'ಯ ಪುಟ ೪೫ರಲ್ಲಿ ೧೨೩೪೫೬೭೮೯X೯ = ೧೧೧೧೧೧೧೧೧ ಎಂದಾಗಿದೆ. ಅದು ೧೧೧೧೧೧೧೧೦೧ ಎಂದಾಗಿರಬೇಕಿತ್ತಲ್ಲವೆ ?

**ದಾವಣಗೆರೆ — ಎಸ್. ಎಸ್. ಸೀತಾರಾಮರಾವ್**

**(ಹೌದು. ವಾಸ್ತವವಾಗಿ ಆ ಸಂಖ್ಯೆ ೧೨೩೪೫೬೭೯ ಎಂದಿರಬೇಕಿತ್ತು. ಕಣ್ತಪ್ಪಿನಿಂದಾಗಿ ೯ರ ಹಿಂದೆ ೮ ಸೇರಿಕೊಂಡು ಈ ಅವಾಂತರಕ್ಕೆ ಕಾರಣವಾಯಿತು. ಆದಕ್ಕಾಗಿ ವಿಷಾದಿಸುತ್ತೇವೆ. - ಸಂಪಾದಕ)**

### ವಿಷಾದ

ವೃಷಭೇಂದ್ರಯ್ಯ ಅವರು ಬರೆದ 'ಭ್ರಷ್ಟಾಸುರ ಸಂಹಾರ ಸಾಧ್ಯವೆ ?' ಲೇಖನದಲ್ಲಿ ಪ್ರಕಟವಾದ 'ಎಮ್ಮೆಗಳಿಗೂ ಏರ್ ಕಂಡೀಶನ್' ಉಪಶೀರ್ಷಿಕೆಯ ಬರಹವನ್ನು ಓದಿ ವಿಷಾದವಾಯಿತು. ದೇಶದ ಅತ್ಯುನ್ನತ ಸ್ಥಾನದಲ್ಲಿರುವ ರಾಜಕಾರಣಿ'ಗಳು ಇಂಥ ಮಟ್ಟಕ್ಕೆ ಇಳಿದಿದ್ದರಿಂದಲೇ ದೇಶದ ಸ್ಥಿತಿ ಚಿಂತಾಜನಕವಾಗಿದೆ.

**ಮಳ್ಳಿ — ಶ್ರೀಕಾಂತರಾವ್ ಸರ್ನಾಡ**

**ದಾವಣಗೆರೆ — ರವಿಕುಮಾರ ಬಿ.**

### ಪ್ರಕಟಿಸಲಿಲ್ಲವೇಕೆ ?

ಜನವರಿ ಸಂಚಿಕೆಯಲ್ಲಿ ವೀರಪ್ಪ ಮೊಯ್ಲಿಯವರ 'ಕೊಟ್ಟ' ಕಾದಂಬರಿಯನ್ನು ಪುಸ್ತಕ ವಿಭಾಗದಲ್ಲಿ ಸಂಗ್ರಹಿಸಿ ಪ್ರಕಟಿಸುವುದಾಗಿ ತಿಳಿಸಿದ್ದಿರಿ. ಆದರೆ ಜನವರಿ ಕಸ್ತೂರಿಯಲ್ಲಿ 'ಕೊಟ್ಟ' ಕೈ ಕೊಟ್ಟಿದೆ. ಅದು ಏಕೆ ಪ್ರಕಟವಾಗಲಿಲ್ಲ ಎಂದು ತಿಳಿಸುವ ಸೌಜನ್ಯವನ್ನು ನೀವು ತೋರಿಲ್ಲವೇಕೆ ? ಮೊಯ್ಲಿ ಅವರ ಖುರ್ಚಿ ಬದಲಾದೊಡನೆ ಅವರ ಕಾದಂಬರಿಗೂ ಹೀಗಾಗಬೇಕೆ ?

**ಜಾಲಹಳ್ಳಿ — ಎಚ್. ಗೋಪಾಲಕೃಷ್ಣ**

**(ಈ ಸಂಚಿಕೆಯ ೯೫ನೇ ಪುಟವನ್ನು ನೋಡಿ. ಅಲ್ಲಿ ವಿವರವಿದೆ. -ಸಂಪಾದಕ)**

### ಸಾರ್ಥಕಗೊಳಿಸಿ

'ಕಸ್ತೂರಿ'ಯ ಇತ್ತೀಚಿನ ಸಂಚಿಕೆಗಳಲ್ಲಿ ವ್ಯಂಗ್ಯ ಚಿತ್ರಗಳು ಕಡಿಮೆಯಾಗುತ್ತಿರುವುದು ನನಗಂತೂ ಹೆಮ್ಮೆ ಎನಿಸಿದೆ. ವ್ಯಂಗ್ಯ ಚಿತ್ರಗಳ ಸ್ಥಾನದಲ್ಲಿ ಅರ್ಥಪೂರ್ಣ ಕಿರುಬರಹ, ಪ್ರಚಲಿತ ವಿಷಯ, ಪ್ರಸಿದ್ಧರ ಉಕ್ತಿಗಳನ್ನು ಪ್ರಕಟಿಸಿ. ಏಕೆಂದರೆ 'ಕಸ್ತೂರಿ' ಮಸಾಲೆ ಪತ್ರಿಕೆಯಲ್ಲ; ಅದು ಜ್ಞಾನದ ಆಗರ.

**ಬಾದಾಮಿ — ಶಂಕರಗೌಡ ವೈ. ಪಾಟೀಲ**

### ಸ್ಪೆಶಲ್ ಟ್ರೈನ್ ?

ಡಿಸೆಂಬರ್ ೯೪ರ ಸಂಚಿಕೆಯಲ್ಲಿ 'ಮಥುರೆಗೆ ಪಯಣ'ದ ಲೇಖಕರು (ಶಿವರಾಮ ಜೋಶಿ) ಗೋವಾ-ನಿಜಾಮುದ್ದೀನ್ ಗಾಡಿಯಲ್ಲಿ (ಹುಬ್ಬಳ್ಳಿಯಿಂದ ದಿಲ್ಲಿಗೆ) ಹೋದವರು ಹಿಂದಿರುಗುವಾಗ ಸೊಲ್ಲಾಪುರಕ್ಕೆ ಹೋಗುವ ಸಂದರ್ಭವಾದರೂ ಹೇಗೆ ಬರುತ್ತದೆಯೋ ಗೊತ್ತಾಗುವುದಿಲ್ಲ. ಬಹುಶಃ ಅದು ಜೋಶಿಯವರ ಸ್ಪೇಶಲ್ ಟ್ರೈನೇ ಇರಬೇಕು.

ಕಲ್ಪನೆಯ ಲೇಖನಗಳನ್ನು ಬರೆಯುವಾಗಲೂ ಭೂಗೋಳದ ಅರಿವನ್ನು ಮನಸ್ಸಿನಲ್ಲಿಟ್ಟುಕೊಳ್ಳುವುದು ಮೇಲಲ್ಲವೆ ?

**ಪುಣೆ — ಡಾ. ಗೋಪಾಲ ಕಾರ್ಕಳ**

**(ಲೇಖನವು ಕಾಲ್ಪನಿಕವಲ್ಲ; ಸ್ವಂತ ಅನುಭವವನ್ನಾಧರಿಸಿದ್ದು. ದಿಲ್ಲಿಯಿಂದ ಹೊರಡುವ ಕರ್ನಾಟಕ ಎಕ್ಸ್‌ಪ್ರೆಸ್ಸಿನ ದಾರಿಯಲ್ಲಿ ಸೊಲ್ಲಾಪುರ ಬರುತ್ತದೆ. -ಸಂಪಾದಕ)**

ಕಸ್ತೂರಿ

ವರ್ಷ: ೩೯ ಫೆಬ್ರುವರಿ ೧೯೯೫ ಸಂಚಿಕೆ: ೬

# ಬುದ್ಧಿ ಎಂಬ ಇದ್ದಿಲು

● ಪಿ. ಭೀಮಸೇನ

ಆತ ಇದ್ದಿಲು ತೇಯುತ್ತ ಕೈ ಮೈ ಎಲ್ಲವನ್ನೂ ಕಪ್ಪಾಗಿ ಮಾಡಿಕೊಂಡಿದ್ದ. ಆದರೂ ಏನೋ ಗುರಿ ಸಾಧಿಸುವವನಂತೆ ಆ ಇದ್ದಿಲನ್ನು ತೇಯುತ್ತಲೇ ಇದ್ದ.

ಇದನ್ನೆಲ್ಲ ದೂರದಿಂದಲೇ ಸಂತಜ್ಞಾನಿಗಳೊಬ್ಬರು ಗಮನಿಸುತ್ತಿದ್ದರು. ಅವರು ತನ್ನ ಬಳಿ ಬಂದಾಗ ಎಲ್ಲರೂ ನಮಸ್ಕರಿಸುವಂತೆ ಇವನೂ ನಮಸ್ಕರಿಸಿದ. ಈತನ ಮೈ ಕೈ ಎಲ್ಲ ಕಪ್ಪಾಗಿರುವುದನ್ನು ಕಂಡ ಜ್ಞಾನಿಗಳು, "ಅಲ್ಲಯ್ಯಾ ಏನಿದು ನಿನ್ನ ಅವತಾರ" ಎಂದು ಪ್ರಶ್ನೆ ಮಾಡಿದರು.

ಆತ "ಮಹಾಪ್ರಭುಗಳೇ ಈ ಇದ್ದಿಲನ್ನು ಬೆಳ್ಳಗೆ ಮಾಡಲು ಪ್ರಯತ್ನಿಸುತ್ತಿರುವೆ. ಇದನ್ನು ಮೊದಲು ಸಾಬೂನಿನಿಂದ ತಿಕ್ಕಿ ತೊಳೆದೆ. ಪ್ರಯೋಜನವಾಗಲಿಲ್ಲ. ಈಗ ಅದನ್ನು ಕಲ್ಲಿಗೆ ತೇಯ್ದು ಬೆಳ್ಳಗೆ ಮಾಡಬೇಕೆಂದರೆ ಅದು ಬರೀ ಕಪ್ಪು ಕಪ್ಪಾಗಿಯೇ ಬಿಡುತ್ತಿದೆ. ಈ ಇದ್ದಿಲನ್ನು ಬೆಳ್ಳಗೆ ಮಾಡಲೇಬೇಕೆಂದು ತೀರ್ಮಾನಿಸಿರುವೆ. ಇದನ್ನು ಬೆಳ್ಳಗೆ ಹೇಗೆ ಮಾಡಬೇಕೆಂದು ನೀವಾದರೂ ದಾರಿ ತೋರಿಸುವಿರಾ?" ಎಂದು ಆ ಜ್ಞಾನಿಗಳಲ್ಲಿ ಕೇಳಿಕೊಂಡ.

ಆಗ ಆ ಸಂತಜ್ಞಾನಿಗಳು "ಅಲ್ಲೋ ಮರುಳೇ ಈ ಇದ್ದಿಲು ತೇಯುವ ಬದಲು ನಿನ್ನ ಬುದ್ಧಿಯನ್ನು ತೇಯ್ದು ಸ್ವಚ್ಛ ಮಾಡಿದ್ದರೆ ಆಗುತ್ತಿತ್ತಲ್ಲ! ಸರಿ, ಇದನ್ನು ಬೆಳ್ಳಗೆ ಕೆಂಪಗೆ ಮಾಡಬೇಕು ತಾನೆ?" ಎಂದು ಕೇಳಿ, ಈ ಇದ್ದಿಲನ್ನೆಲ್ಲ ಕೂಡಿಹಾಕಿ ಅದರ ಕೆಳಗೆ ಬೆಂಕಿ ಮಾಡು ತೋರಿಸುತ್ತೇನೆ," ಅಂದರು.

ಜ್ಞಾನಿಗಳು ಹೇಳಿದಂತೆ ಆ ಮೂರ್ಖಇದ್ದಿಲಿಗೆ ಬೆಂಕಿ ಮಾಡಿದ. ಸ್ವಲ್ಪ ಸಮಯದಲ್ಲೇ ಅದು ನಿಗಿನಿಗಿ ಕೆಂಡವಾಗಿ ಈತನನ್ನು ನೋಡಿ ನಗಹತ್ತಿತು.

ಸಂತಜ್ಞಾನಿಗಳು, "ನೋಡಿದೆಯಾ! ಇದ್ದಿಲು ಹೇಗೆ ಕೆಂಪ

ಗಾಗಿ ನಗಹತ್ತಿದೆ. ಅದು ನಿಗಿನಿಗಿ ಕೆಂಡವಾದಂತೆಲ್ಲ ಬಿಳಿ ಬೂದಿಯಾಗಿ ಉದುರತೊಡಗಿದೆ. ನೀನು ಬಿಳಿಯಾಗುವದನ್ನು ಕಾಣಬೇಕೆಂದಿದ್ದಿಯಲ್ಲವೆ ? ಇಗೋ ನೋಡು" ಎಂದು ಬೂದಿಯತ್ತ ಕೈ ಮಾಡಿ ತೋರಿಸಹತ್ತಿದರು.

ಬಳಿಕ ಜ್ಞಾನಿಗಳು ಆ ಮೂರ್ಖನ ಮೈ ಸವರುತ್ತಾ "ನಿನ್ನ ತಲೆಯಲ್ಲಿರುವ ಬುದ್ಧಿಗೆ ಜ್ಞಾನ ಎಂಬ ದೀವಿಗೆಯಿಂದ ಬೆಂಕಿಮಾಡಿ ಅಜ್ಞಾನವನ್ನು ಸುಟ್ಟುಹಾಕಿ ಜ್ಞಾನ ಜ್ಯೋತಿ ಬೆಳಗಿಸು" ಎಂದು ಹರಸಿ ಹೊರಟು ಹೋದರು. ●

---

ಓದುಗರೆ,

ಈ ತಿಂಗಳು, 'ಎಕ್ಸ್-ರೇ ಕಣ್ಣಿನ ಮನುಷ್ಯ' ನಿಮ್ಮನ್ನು ಭೇಟಿಯಾಗುತ್ತಿಲ್ಲ. ಆದಕಾರಣ ಅವನ ಪರವಾಗಿ ಕ್ಷಮೆಯಾಚಿಸುತ್ತಿದ್ದೇವೆ.

–ಸಂಪಾದಕ

---

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು–ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ–ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಫುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

### ಪತ್ರವ್ಯವಹಾರ ವಿಳಾಸ:

ಪ್ರಸ್ಥಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ–೫೮೦ ೦೨೦.

### ಚಂದಾ ದರಗಳು

| | |
|---|---|
| ಬಿಡಿ ಸಂಚಿಕೆ | ರೂ. ೬–೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫–೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೭೦–೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦–೦೦ |

ಬೇಂದ್ರೆ
ಜನ್ಮಶತಮಾನೋತ್ಸವ ನಿಮಿತ್ತ
ಲೇಖನಗಳು

# ನನ್ನ ನಾ ಕಂಡಂತೆ

• ದ. ರಾ. ಬೇಂದ್ರೆ

'ಕಸ್ತೂರಿ' ಪ್ರತಿನಿಧಿಯೊಡನೆ
ಮಾತುಕತೆಗಳಲ್ಲಿ ವ್ಯಕ್ತವಾದಂತೆ

ನನ್ನ ನಾ ಕಂಡಂತೆ ಎಂಬ ಶೀರ್ಷಿಕೆಯಲ್ಲಿ ನಾನು ಬರೆಯಬೇಕೆಂದು ಕೇಳಿಕೊಂಡಿದ್ದೀರಿ. ನಾನು ಬರೆದ ಸಾಹಿತ್ಯದ ವಿಸ್ತಾರವೇ ಜನರ ಮುಂದೆ ಇದೆ. ಅದೆಲ್ಲವೂ ನನ್ನ ನಾ ಕಂಡದ್ದೇ. ಅದನ್ನು ಓದಿ ನನ್ನ ನಾ ಹೇಗೆ ಕಾಣುತ್ತೇನೆಂದು ಅರಿಯಲಾರದವರಿಗೆ ಮತ್ತೆ ಅದೇ ವಿಷಯವಾಗಿ ಬೇರೆ ಬರೆದರೆ ಹೆಚ್ಚು ಅರ್ಥವಾದೀತೇ ? ಹಾಗೆ ಕೇಳಿದರೆ ನನ್ನ ನಾ ಕಾಣುವುದು ಇನ್ನೂ ಮುಗಿದೇ ಇಲ್ಲ. ನಿರಂತರವಾಗಿ ನಾನು ಪ್ರಯತ್ನಿಸುತ್ತಲೇ ಇದ್ದೇನೆ.

ಮೇಲಾಗಿ ನನ್ನ ನಾ ಕಂಡಂತೆ ಇತರರಿಗೆ ಹೇಳಬೇಕಾದರೆ, ಇತರರು ನನ್ನನ್ನು ಹೇಗೆ ಕಾಣುತ್ತಾರೆ ಎಂದು ನನಗೆ ಗೊತ್ತಾಗಬೇಕು. ಆಗ ಅದು ತಪ್ಪಾಗಿದೆಯೆನಿಸಿದರೆ, ಅದನ್ನು ತಿದ್ದಿ, ಇದು ಹೀಗೆ ಅದು ಹಾಗೆ ಎಂದು ಹೇಳಿಯೇನು. ಈವರೆಗಂತೂ ನನ್ನನ್ನು ನಾನು ಕಾಣುವುದನ್ನೇ ಮುಗಿಸಿರದ ನನಗೆ, ಇತರರು ನನ್ನನ್ನು ಹೇಗೆ ಕಾಣುತ್ತಾರೆಂಬ ಬಗ್ಗೆ ಶೋಧನೆ ನಡೆಸಲು ಸಮಯವೇ ಸಿಕ್ಕಿಲ್ಲ. ಒಟ್ಟಿನ ಮೇಲೆ ಜನ ನನ್ನನ್ನು ಚೆನ್ನಾಗಿಯೇ ಕಂಡಿದ್ದಾರೆ. ನನ್ನ ಐವತ್ತನೇ ವರ್ಷಕ್ಕೇ ನನಗೊಂದು ಗೌರವ ಸಮಾರಂಭ ಏರ್ಪಡಿಸಿದರು. ಅನಂತರವೂ ಅವರು ನನ್ನನ್ನು ತುಂಬ ದಾಕ್ಷಿಣ್ಯದಿಂದಲೇ ನಡೆಸಿಕೊಂಡಿದ್ದಾರೆ. ಆದ್ದರಿಂದ ಅವರೆಲ್ಲ ನನ್ನನ್ನು ಸರಿಯಾಗಿಯೇ ಕಂಡಿರಬೇಕು ಎಂದು ನಾನು ಗೃಹೀತವಾಗಿಟ್ಟುಕೊಳ್ಳುತ್ತೇನೆ. ನನ್ನನ್ನು ಗೌರವಿಸಿದವರು ದಡ್ಡರು ಎಂದು ಹೇಳುವ ಕೃತಘ್ನ ನಾನಾಗಲಾರೆ.

ಅಂದಾಕ್ಷಣ ನನ್ನನ್ನು ತಪ್ಪು ತಿಳಿದವರೇ ಇಲ್ಲವೆಂದು ನನ್ನ ಸಾಧನೆಯಲ್ಲ. ಅವರು ತಮ್ಮ ತಿಳಿವಳಿಕೆಯನ್ನು ವ್ಯಕ್ತಪಡಿಸಿದಾಗೆಲ್ಲ, ನಾನು ಅವರಿಗೆ ಉತ್ತರ ಕೊಡಲು ಪ್ರಯತ್ನಿಸಿದ್ದೇನೆ. ಇದಕ್ಕಾಗಿ ಅವರು ನನ್ನ ಮೇಲೆ ಸಿಟ್ಟಾಗಿದ್ದೂ ಉಂಟು. ನನ್ನ ಮೇಲೆ ಆಕ್ಷೇಪ ಬಂದಾಗ, ನನ್ನ ತಿಳಿವಳಿಕೆಯಂತೆ ಉತ್ತರ ಕೊಡುವ ಹಕ್ಕು ನನಗಿಲ್ಲವೇ, ಎಂದು ನಾನು ಸೋಜಿಗಪಟ್ಟಿದ್ದೇನೆ. ಆದರೆ ಅವರ ಮೇಲೂ ನನಗೆ ಕೋಪವಿಲ್ಲ. ಸಾಹಿತ್ಯವನ್ನು ಅರ್ಥ ಮಾಡಿಕೊಳ್ಳುವ ಪ್ರಕ್ರಿಯೆ, ಒಂದು ಸಜೀವ ವಿಕಾಸ ಪ್ರಕ್ರಿಯೆ. ಅದಕ್ಕೆ ಶತಮಾನಗಳೂ ಬೇಕಾಗಬಹುದು. ನನ್ನನ್ನು ಪೂರ್ತಿ ಅರ್ಥ ಮಾಡಿಕೊಳ್ಳುವುದು ಭವಿಷ್ಯತ್ತಿನಲ್ಲಿದೆ ಎಂದು ನಾನು ನಂಬುತ್ತೇನೆ.

ನನ್ನ ನಾ ಕಾಣುವ ಬಗ್ಗೆ ಇಷ್ಟು ಮಾತು. ಆದರೆ ನನ್ನ ಜೀವನ ಮತ್ತು ಸಾಹಿತ್ಯದ ಸಿಂಹಾವಲೋಕನ ಬೇಕಾದರೆ ನಿಮಗಾಗಿ ಮಾಡೇನು. ನಾನು

('ಕಸ್ತೂರಿ' ೧೯೭೩ರ ಡಿಸೆಂಬರ್ ಸಂಚಿಕೆಯಿಂದ)

## ಇಲ್ಲಿ ಬೇಂದ್ರೆ 'ಸ್ವಾತ್ಮ ದರ್ಶನ' ಮಾಡಿಕೊಂಡಿದ್ದಾರೆ

ಹುಟ್ಟಿದ್ದು ೧೮೯೬ ಜನೇವರಿ ೩೧. ನಾನು ಬರೆಯಲು ಬಹಳ ಬೇಗ, ಇನ್ನೂ ಹೈಸ್ಕೂಲಿನಲ್ಲಿದ್ದಾಗಲೇ ಪ್ರಾರಂಭಿಸಿದೆ. ಅದು 'ಉಡಾಳ' ಹುಡುಗನೆನಿಸಿದವನೊಬ್ಬನು ಶಿಕ್ಷಕರ ಟೀಕೆಗಳಿಗೆ ತೋರಿಸಿದ ಪ್ರತಿಕ್ರಿಯೆಯಾಗಿತ್ತು. ಶಾಲೆಯ ಪ್ರಥಮ ತರಗತಿಗಳಲ್ಲಿ ನಾನು ಮೇಲ್ತರದ ವಿದ್ಯಾರ್ಥಿಗಳಲ್ಲೊಬ್ಬನೆನಿಸಿದ್ದರೂ ಕೊನೆಕೊನೆಗಾಗುವಾಗ, ಶಿಕ್ಷಕರಿಂದ 'ವಿಕ್ಷಿಪ್ತ' ಎಂಬುದಾಗಿ ಆಕ್ಷೇಪಕ್ಕೊಳಗಾಗಿದ್ದೆ.

ನಾನು ಎರಡೂ ಅರ್ಥಗಳಲ್ಲಿ 'ಖಿಲಾಡಿ'ಯಾಗಿದ್ದನೆಂಬುದು ಸುಳ್ಳಲ್ಲ. ನನ್ನ ವಿಷಯದಲ್ಲಿ ಇತರರು ಪಡುವ ಅಭಿಪ್ರಾಯಗಳ ಬಗ್ಗೆ, ಇಂದಿನಂತೆ ಅಂದೂ ನಾನು ತಲೆ ಕೆಡಿಸಿಕೊಂಡವನಲ್ಲ. ಧಾರವಾಡದ ಕಾಮನಕಟ್ಟೆಯಿಂದ ಸ್ಟೇಶನ್ ವರೆಗೂ, ತಾನುಟ್ಟದ್ದು ಲಂಗೋಟಿ ಮಾತ್ರವೆಂಬ ಪರಿವೆ ಇಲ್ಲದೆ, ಆಡುತ್ತ ತಿರುಗುವ ಹೈಸ್ಕೂಲು ಹುಡುಗನನ್ನು ನೋಡಿ, ಶಿಸ್ತುವಾದಿ ಶಿಕ್ಷಕರು ಮೂಗು ಮುರಿದರೇನಾಶ್ಚರ್ಯ? ಸಾಲದ್ದಕ್ಕೆ, ನಾನು ಶಾಲೆಯ ಜೂನಿಯರ್ ಫುಟ್‌ಬಾಲ್ ಟೀಮಿನ ಕ್ಯಾಪ್ಟನ್ನನಾದ ಸಿನೀಯರ್ ಹುಡುಗನಾಗಿದ್ದೆ.

ಮುಂದೆ ಕಾಲೇಜಿನಲ್ಲೂ ನಾನು ಕ್ರಿಕೆಟ್, ಫುಟ್‌ಬಾಲ್ ಪ್ರಿಯನಾಗಿದ್ದೆ. ನಾನು ಫಾರ್ವರ್ಡ್‌ನಲ್ಲಿ ಮತ್ತು ಶ್ರೀ ದಿವಾಕರ ರಂಗರಾಯರು ಹಾಫ್‌ಬ್ಯಾಕ್‌ನಲ್ಲಿ ಆಡುತ್ತಿದ್ದುದು ಈಗಲೂ ನೆನಪಿದೆ. (ಹಾಗೇ, ನಾನು ಫುಟ್‌ಬಾಲ್ ಆಟವನ್ನೇ ಸಂಕೇತ ಮಾಡಿಕೊಂಡ 'ಗೋಲ್' ಎಂಬ ನಾಟಕ ಕೂಡ ಬರೆದೆ.) ಇವೆಲ್ಲ ಚಟುವಟಿಕೆಗಳ ನಡುವೆ ನನಗೆ ಶಾಲಾ ಪುಸ್ತಕಗಳನ್ನೋದಲು ಸಮಯವೆಲ್ಲಿ? ಅಂತೂ ಬಡ ಹುಡುಗ ಹಾಳಾಗುತ್ತಾನೆ ಎಂದು ಶಿಕ್ಷಕರು, ಅದರಲ್ಲೂ ಶಿಸ್ತಿನ ಮೂರ್ತಿಗಳಾಗಿದ್ದ ರಂಗಾಚಾರ್ಯ ಗುತ್ತಲ ಮಾಸ್ತರರು ಆಕ್ಷೇಪಪೂರ್ವಕ ವ್ಯಥೆ ವ್ಯಕ್ತಪಡಿಸುತ್ತಿದ್ದರು. ನಾನು ಬಡ ಹುಡುಗ ನಿಜ. ಆದರೆ ಬಡತನದ ಪ್ರಜ್ಞೆ, ದೈನ್ಯ ನನ್ನಲ್ಲಿರಲಿಲ್ಲ.

ಅಂತೂ ೧೯೧೨ರಲ್ಲಿ ಮ್ಯಾಟ್ರಿಕ್ಕಿಗೆ ಕೂಡ್ರಬೇಕಾಗಿದ್ದ ನನಗೆ, ಕೆಲ ತಿಂಗಳು ಅಂಡರ್‌ಏಜ್ ಎಂದು ಫಾರ್ಮು ನಿರಾಕರಿಸಲ್ಪಟ್ಟಾಗ, ನನ್ನ ಖಿಲಾಡಿಬುದ್ಧಿಗೆ ಇದು ಪೂರ್ವಕ ಛತೂರಿ ಎನಿಸಿತು.

ಅದಕ್ಕೇ ನಾನು, ಬರೆಯತೊಡಗಿದೆನೆಂದು ತೋರುತ್ತದೆ. ಶಾಲಾ ಪುಸ್ತಕಗಳನ್ನು ಓದಲು ಪುರಸೊತ್ತಿಲ್ಲದಿದ್ದರೂ, ರಾತ್ರಿಯೆಲ್ಲ ನಮ್ಮ ಮನೆಯ ಬಳಿ ಇದ್ದ ಫಾಟಕ, ಆಲೂರ್ ಲೈಬ್ರರಿ (ಭಾರತ ಪುಸ್ತಕಾಲಯ- ಇದು ಆ ಕಾಲದ ಶ್ರೇಷ್ಠತಮ ಲೈಬ್ರರಿಗಳಲ್ಲೊಂದಾಗಿತ್ತು.)ಯಲ್ಲಿ ಸಿಕ್ಕಿದ ಎಲ್ಲ ಇಂಗ್ಲೀಷ್, ಸಂಸ್ಕೃತ, ಮರಾಠಿ ಪುಸ್ತಕಗಳನ್ನೂ ಪತ್ರಿಕೆಗಳನ್ನೂ ಓದುತ್ತಿದ್ದೆ. ಮರಾಠಿಯ ನವಸಾಹಿತ್ಯ ನನ್ನನ್ನು ತುಂಬಾ ಸೆಳೆದಿತ್ತು. ಆ ಪ್ರಭಾವದಿಂದ ನಾನು, ಒಂದು ಕಲ್ಪನಾವಿಲಾಸವನ್ನು ಬರೆದೆ. ಶಾಲೆಯಲ್ಲಿ ಉಡಾಳ ಎನಿಸಿದ್ದ ನಾನು, ವಿವೇಕಾನಂದ ಸ್ವಾಮಿಗಳಂತೆ ಸಂನ್ಯಾಸಿಯಾಗಿ, ದೇಶ-ವಿದೇಶಗಳನ್ನು ಸುತ್ತಿ, ಅಸೀಮ ಕೀರ್ತಿಯನ್ನು ಸಂಪಾದಿಸಿ ಭಾರತಕ್ಕೆ ಮರಳಿ, ಒಂದು ದಿನ ಅಹಮದಾಬಾದಿನಲ್ಲಿ ಭಾಷಣ ಕೊಡುತ್ತಿದ್ದಾಗ, ಶ್ರೋತೃವೃಂದದಲ್ಲಿದ್ದ ಗುತ್ತಲ ರಂಗಾಚಾರ್ಯರು ಬೆರಗಾದರು ಎಂಬುದು ಅದರ ಸಾರವಾಗಿತ್ತು. ಅದಕ್ಕೆ "ಮಿತ್ರೋದಯ"ವೆಂದು ಹೆಸರಿಟ್ಟೆ. ಅದು ಅಚ್ಚು ಕಾಣಲಿಲ್ಲ. ಆದರೆ ನಾನೇ ಸಂಪಾದಿಸುತ್ತಿದ್ದ ಕೈ ಬರಹದ ಮಾಸಪತ್ರಿಕೆಯಲ್ಲಿ ಪ್ರಕಟಿಸಿದೆ. ಆ ಪತ್ರಿಕೆಯನ್ನು, ಪ್ರತಿಗೆ ಒಂದಾಣೆಯಂತೆ ಮಾರಿ, ಕಾಗದ ಕೊಳ್ಳುತ್ತಿದ್ದೆ ನಾನು.

ಇದು ನನ್ನ ಪ್ರಥಮ ಕೃತಿ. ಬರೆದದ್ದು ೧೯೧೨ರಲ್ಲಿ, ಹದಿನಾರನೇ ವಯಸ್ಸಿನಲ್ಲಿ. ಇದು ಕನ್ನಡದಲ್ಲಿ. ಆದರೆ ನನ್ನ ಮೊದಲ ಕವಿತೆ ಕನ್ನಡದಲ್ಲಲ್ಲ. ನನ್ನ ಮಾತೃಭಾಷೆಯಾದ ಮರಾಠಿಯಲ್ಲಿ ಬಂದದ್ದು. ಅದೊಂದು ಸಾನೆಟ್. "ಝಾಲೀ ವೀಸ ವಯಾಸ ಆಜ; ತರಿ ಹೀ ಝಾಲೀ ನ ಕಾರ್ಯೇ ಅಶಿ-" ಎಂದು ಪ್ರಾರಂಭವಾಗುತ್ತದೆ. ಇಪ್ಪತ್ತನೇ ವಯಸ್ಸಿನಲ್ಲಿ ಬರೆದದ್ದು. ಅಯ್ಯೋ, ಇಪ್ಪತ್ತಾಗಿ

ಹೋಯಿತು, ಇನ್ನೂ ನನ್ನಿಂದ ಏನೂ ಕೆಲಸವಾಗಿಲ್ಲ ಎಂದು ಹಳಹಳಿಸುವ ಈ ಪದ್ಯ ನಾನು ಪುಣೆಯಲ್ಲಿ ಫರ್ಗ್ಯುಸನ್ ಕಾಲೇಜಿಗೆ ಹೋಗುತ್ತಿದ್ದಾಗ ಬರೆದದ್ದು. Ben Ramson ಎಂಬ ಹೆಸರಿನಿಂದ ಇಂಗ್ಲೀಷಿನಲ್ಲಿಯೂ ಬರೆದಿದ್ದೆ. ಪುಣೆಯಲ್ಲಿ ನನ್ನ ಚಿಕ್ಕಪ್ಪ ಬಂಡೋ ಅಪ್ಪಾಜಿ ಬೇಂದ್ರೆಯವರಲ್ಲಿದ್ದು, ನಾನು ಕಲಿಯುತ್ತಿದ್ದೆ. ಅವರು ಸಾಹಿತ್ಯ ಪ್ರಿಯರು. ಅವರ ಮನೆಯಲ್ಲಿ "ಮುರಲಿ" ಎಂಬ ಕೈ ಬರಹದ ಮರಾಠಿ, ಸಂಸ್ಕೃತ, ಇಂಗ್ಲಿಷ್, ಕನ್ನಡದ ಪತ್ರಿಕೆ ಹೊರಡುತ್ತಿತ್ತು, ಈ ಉದ್ಯಮದಲ್ಲಿ ನನ್ನ ಮಿತ್ರರೊಡನೆ ನಾನೂ ಪಾಲುಗೊಂಡಿದ್ದೆ.

ಆ ವರೆಗೆ ನಾನು ಬರೆಯುತ್ತಿದ್ದರೂ, ನನಗೆ ನಾನೊಬ್ಬ ಕವಿ, ಕವಿಯಾಗುವುದೊಂದು ಹಿರಿಮೆ ಎಂಬ ಮಾತಿನ ಅರಿವೇ ಇರಲಿಲ್ಲ. ಆಗ ನನ್ನೊಳಗಿನ ಮೊಳಕೆ ಏನೋ ಸ್ಪಂದಿಸಿದಂತಾಯಿತು. ನನ್ನ ಮನೆಮಾತು ಮರಾಠಿಯಾದರೂ, ಶಿರಹಟ್ಟಿಯ ತಲೆತಲೆಗಳಿಂದ ಮಾಸ್ತರರನ್ನು ಹಡೆದ, ಮನೆತನದಲ್ಲಿ ಹುಟ್ಟಿದ್ದರಿಂದ, ಧಾರವಾಡದಲ್ಲಿ ಹುಟ್ಟಿ ಬೆಳೆದದ್ದರಿಂದ, ಕನ್ನಡದ ಮೇಲೊಂದು ಅಪೂರ್ವ ಮಮತೆ ಜಾಗೃತವಾಗಿತ್ತು. ಜೈಮಿನಿ ಭಾರತ ಓದಿ ಮುಗ್ಧನಾಗಿದ್ದೆ. ಧಾರವಾಡದ ಯಾವ ಮೂಲೆಯಲ್ಲಿ ದೊಡ್ಡಾಟ, ಬೈಲಾಟ, ಲಾವಣಿ ಕೂಟಗಳಾದರೂ, ಹಾಜರಾಗಿ ಕನ್ನಡದ ನಾಡು ನುಡಿಯ ಮಾಧುರ್ಯವನ್ನು ರಕ್ತಗತ ಮಾಡಿಕೊಂಡಿದ್ದೆ. ಇಂಗ್ಲೀಷಿನಲ್ಲಿ ಕೀಟ್ಸ್, ಶೆಲ್ಲಿ ಮುಂತಾದವರ ಕವಿತೆಗಳನ್ನೋದಿದಾಗ, ಹೀಗೆ ಕನ್ನಡದಲ್ಲಿಯೂ ಬರೆಯಬಲ್ಲೆ ಎಂಬ ಅಭಿಮಾನ, ಕನ್ನಡದಲ್ಲಿ ಇಂಥದು ಇಲ್ಲ ಎಂದರೆ ಅಸಹನೆ ಬಂದಿತ್ತು. ನಾನು ಕನ್ನಡದಲ್ಲಿ ಪದ್ಯ ಬರೆಯತೊಡಗಿದೆ.

ನಾನಿನ್ನೂ ಮುನ್ನೂರು ಪಂಕ್ತಿಗಳನ್ನು ಬರೆದಿದ್ದೆನಷ್ಟೇ, ಪುಣೆಯಲ್ಲಿ ಡೆಕ್ಕನ್ ಕಾಲೇಜಿನಿಂದ ಕನ್ನಡ ಗೆಸ್ಟ್ ಆಗಿ ನನಗೆ ಆಮಂತ್ರಣ ಬಂತು. ಅದು ೧೯೧೭. ನಾನು ಜೂನಿಯರ್ ಬಿ.ಎ. ಯಲ್ಲಿದ್ದೆ. ಕಾಂಚನ ವರ್ಮಾ ಎಂಬ ಆರ್ಯ ಸಮಾಜದ ಪ್ರಚಾರಕರೊಬ್ಬರು, ಧಾರವಾಡದಲ್ಲಿ ಭಾಷಣ ಬಿಗಿಯುವುದನ್ನು ಕೇಳಿ, ನಾನು ಭಾವಪೂರ್ಣವಾಗಿ ಭಾಷಣ ಕೊಡಲು ಕಲಿತಿದ್ದೆ. ಡೆಕ್ಕನ್ ಕಾಲೇಜಿನಲ್ಲಿ ಏನೇನು ಮಾತಾಡಿದೆನೋ ನೆನಪಿಲ್ಲ. ಆದರೆ ಅದು, ನನಗೆ ನಾನೊಬ್ಬ ಕವಿ ಎಂಬ ಆತ್ಮಪ್ರತೀತಿಯನ್ನು ತಂದು ಕೊಟ್ಟಿತು. ಮುನ್ನೂರು ಪಂಕ್ತಿಗೇ ಇಷ್ಟು. ಹೆಚ್ಚು ಬರೆದರೆ ಇನ್ನೇನೇನು ಬಂದೀತೋ!

ನನ್ನ ಮೊದಲ ಕನ್ನಡ ಕವಿತೆ- "ತುತ್ತೂರಿ." ಅದನ್ನು ಪುಣೆಯ ಮೋರೋಬಾ ದಾದಾವಾಡೆಯ ಕರ್ನಾಟಕ ಸಂಘದಲ್ಲಿ ಮೊದಲು ಓದಿದೆ. ೧೯೧೮ರಲ್ಲಿ ಅದನ್ನು ಧಾರವಾಡದಲ್ಲಿ ಕನ್ನಡದ ಏಕಮಾತ್ರ ಕವಿತಾಮಾಸಿಕವಾದ "ಪ್ರಭಾತ"ದಲ್ಲಿ ಯಶವಂತರಾವ್ ಜಠಾರರು ಮುದ್ರಿಸಿದರು. ಅದೇ ವರ್ಷ ಧಾರವಾಡದ ಸಾಹಿತ್ಯ ಸಮ್ಮೇಳನದಲ್ಲಿ ಬಂದವರ ಒಂದೆರಡು ಕೂಟಗಳಲ್ಲಿ ಅದನ್ನೋದಿದ್ದೆ. ಜನರನ್ನು ಮುಗ್ಧಗೊಳಿಸುವ ಕಂಠಸಂಪತ್ತು ಬಹುಶಃ ನನಗೆ ನನ್ನ ತಾಯಿಯಿಂದ ಬಂದ ಬಳುವಳಿಯಾಗಿರಬೇಕು. ಚಿಕ್ಕಂದಿನಲ್ಲೆ ನಾನು, ಲಗ್ನದ ಮನೆಯಲ್ಲಿ ಮರಾಠಿ ಹಾಡುಗಳನ್ನು ಅನ್ನತೊಡಗಿದರೆ, ಸಭೆ ಮುಗ್ಧವಾಗಿ ಕೇಳುತ್ತಿತ್ತು. ಸಮ್ಮೇಳನದಲ್ಲೂ ಅದೇ ಆಯಿತು. ಆ ಕೂಟಕ್ಕೆ ಬಂದಿದ್ದ ಗುತ್ತಲ ಮಾಸ್ತರರು, ಕೂಡಲೇ ನನ್ನನ್ನು ತಮ್ಮ ಶಾಲೆಗೆ ಸೇರಬಹುದೇ ಎಂದು ಕೇಳಿದರು. ನಾನು ಒಪ್ಪಿದೆ. ಒಂದೇ ವರ್ಷದಲ್ಲಿ ನನ್ನ ಪ್ರೊಬೇಶನ್ ಮುಗಿದು, ಕಾಯಂ ಆಯಿತು. ಹೀಗೆ ನಾನು 'ಬೇಂದ್ರೆ ಮಾಸ್ತರ್' ಆದೆ. ಅನಂತರ ಬಹುಕಾಲ ಕಳೆದು, ನಾನು ಹಲ ವರ್ಷ ಪ್ರೊಫೆಸರನೂ ಆಗಿದ್ದೆ. ಆದರೆ ನನ್ನ ಪರಿಚಿತರಿಗೆ ನಾನಿನ್ನೂ 'ಮಾಸ್ತರ'ನೇ. ಅಂಚೆ ವಿಳಾಸ ಪ್ರೊಫೆಸರ್ ಎಂದಿದ್ದರೂ, ನಾನು ಮಾಸ್ತರನಾಗಿಯೆ ಉಳಿದಿದ್ದೇನೆ.

ನನಗೆ ಕಾವ್ಯದ ಅಮಲು ಹಿಡಿಸಿದಾತ- ಸಂಸ್ಕೃತದ ಪಂಡಿತರಾಜ ಜಗನ್ನಾಥ. ಅವನ "ಗಂಗಾಲಹರಿ" ನನಗೆ ಚಿಕ್ಕಂದಿನಲ್ಲೇ ಪಾಠವಾಗಿ ಹೋಗಿತ್ತು. ಅನಂತರ "ಭಾಮಿನೀ ವಿಲಾಸ" ಓದಿದೆ. ಅವನ ನಾದ ಮಾಧುರ್ಯ ಬಹುಶಃ ನನ್ನ ಕಾವ್ಯದ ಮೇಲೆ ಅಚ್ಚಳಿಯದ ಪ್ರಭಾವ ಬೀರಿದೆ. ಸರ್ವಜ್ಞ, ಲಕ್ಷ್ಮೀಶರು ಕನ್ನಡದ ಕಡೆ ನನ್ನನ್ನು ಸೆಳೆದವರು. ಕಾಳಿದಾಸ, ವ್ಯಾಸ, ವಾಲ್ಮೀಕಿಗಳದು ಇನ್ನೂ ಮೇಲ್ತರದ ಕಾವ್ಯ ಎಂದು ಅರಿತದ್ದು ಮುಂದೆ, ಅಭಿರುಚಿ ಪಕ್ವವಾದ ನಂತರ. ಇಂಗ್ಲೀಷಿನಲ್ಲಿ ಕೀಟ್ಸ್ ನನ್ನ

# ಗೆಳೆಯರು ಕಂಡಂತೆ ಬೇಂದ್ರೆ

ಆವರನ್ನು ಒಮ್ಮೆ ಮಾತನಾಡಿಸಿ ನೋಡಬೇಕು. ಅವರ ಕನಸು ನೆನಸುಗಳೂ ಭಾವ ಭಾವನೆಗಳೂ ಗುರಿಪರಿಗಳೂ ಸಾವಿರ ಕಣ್ಣುಗಳೇ ಆಗಿ ನಮ್ಮನ್ನು ಸುತ್ತಿಬಿಡುವವು. ಮಾತನ್ನು ಒಡೆದು ವಿಷಯದ ವ್ಯಾಖ್ಯೆಯನ್ನು ಕಟ್ಟುವರು; ವ್ಯಾಖ್ಯೆಯನ್ನು ಕಡೆದು ತತ್ವದ ಬೆಣ್ಣೆಯನ್ನು ಎತ್ತುವರು; ತತ್ವಕ್ಕೆ ಇತಿಹಾಸದ ಒಪ್ಪವಿಡುವರು; ಅನುಭವದ ಪುಷ್ಪವಿಡುವರು, ಯೋಗದ ನುಡಿ ಸೇರಿಸುವರು; ಸಾಹಿತ್ಯದ ಗುಡಿ ಹಾರಿಸುವರು. ಆಗ ನೋಡಬೇಕು ಅವರ ವ್ಯಕ್ತಿತ್ವವನ್ನು; ಮಾತುಗಳಲ್ಲಿ ತಿಳಿಯುಂಟು; ಮೊಗದಲ್ಲಿ ಬೆಳಕುಂಟು; ಕಣ್ಣುಗಳಲ್ಲಿ ಬುದ್ಧಿ ಕುಣಿದಾಡುವುದು; ಅಂಗ ಭಂಗಿಗಳಲ್ಲಿ ಮೈಮರೆವು ಮೆರೆಯುವುದು- ಈ ವ್ಯಕ್ತಿತ್ವವು ನಮ್ಮ ಜನ್ಮಾಂತರಗಳಲ್ಲಿಯೂ ಮರೆಯದು.

● ಮ. ಗೋಪಾಲಕೃಷ್ಣರಾವ್

ಪರಮಾತ್ಮನು ಕವಿ, ಯೋಗಿ, ಹಾಗೂ ದೀನರಲ್ಲಿ ಪ್ರತ್ಯಕ್ಷನಾಗುವನೆಂದು ಪ್ರತೀತಿ. ಬೇಂದ್ರೆಯವರು ಕವಿ ಶ್ರೇಷ್ಠರಾಗಿಯೇ ಇದ್ದಾರೆ. ಅಲ್ಲದೆ ಯೋಗಿರಾಜ ಅರವಿಂದರ ಯೌಗಿಕ ದೃಷ್ಟಿಯಲ್ಲಿ ತನ್ಮಯರಾಗಿದ್ದಾರೆ. ಅದೂ ಅಲ್ಲದೆ ದೀನ ಹೃದಯದ ದೈವತವೂ ಆಗಿದ್ದಾರೆ. ಈ ಮುಬ್ಬಗೆಯ ದೃಷ್ಟಿಕೋಣಗಳಿಂದ ಮುಕ್ಕಣ್ಣನಾಗಿ 'ಕುಣಿಯೋಣ ಬಾರ, ಕುಣಿಯೋಣ ಬಾ' ಎಂಬ ಪದ್ಯಪರಂಪರೆಯನ್ನು ಪದುಳದಿಂದ ರಚಿಸಿ ಕುಣಿಕುಣಿದು ಕನ್ನಡ ನಾಡಿನಲ್ಲಿ ಕವಿ ನಟರಾಜನಾಗಿದ್ದಾರೆ.

● ಸ. ಪ. ಗಾಂವಕರ

ಇವರ ತೇಜಃಪುಂಜವಾದ ಮುಖವನ್ನು ಒಂದು ಸಲ ನೋಡಿದರೆ ಸಾಮಾನ್ಯವಾಗಿ ಮರೆಯುವುದು ಸಾಧ್ಯವಿಲ್ಲ. ವಿಶಾಲವಾದ ಹಣೆ; ಎತ್ತರವೂ ಕುಳ್ಳೂ ಅಲ್ಲದ ದೇಹ; ಹಾಸ್ಯದಿಂದಲೂ 'ಚಕಮಕ ಚಂಚಲ'ದಿಂದಲೂ ಜ್ಯೋತಿಯ ಕಿಡಿಯಂತೆ ಹೊಳೆಯುವ ಕಣ್ಣುಗಳು; ತಲೆಯ ಮೇಲೇರಿಸಿದ ಖಾದಿ ಅರಿವೆಯ ಟೋಪಿ, ಮುಖದಲ್ಲಿ ಒಂದು ವಿಧವಾದ ಧೈರ್ಯ ಕೆಚ್ಚು ತ್ಯಾಗ ಅನಾಸಕ್ತಿ; ಈ ಪ್ರಪಂಚವನ್ನು ಮರೆತು ಎಲ್ಲಿಯೋ ವಿಹರಿಸುತ್ತಿರುವಂತಹ ದೂರದ ನೋಟ; ಬೇರೆ ಯಾವುದೋ ಉತ್ತಮವಾದ ಲೋಕಕ್ಕೆ ಸೇರಿದವನು ಒಂದು ಗಳಿಗೆ ಬಂದು ನಮ್ಮಲ್ಲಿ ಮಿಳಿತವಾಗುತ್ತಿದ್ದಾನೇನೋ ಎಂಬ ಗಂಭೀರವಾದ ಯೋಗಿಯ ಮುಖಭಾವ. ಈ ನೈಜವಾದ ಗುಣಗಳಿಂದ ಬೇಂದ್ರೆಯವರು ಸ್ವಾಭಾವಿಕವಾಗಿ ಎಲ್ಲರ ಗಮನವನ್ನೂ ಎಳೆಯುತ್ತಾರೆ. ಅವರ ಸಾನ್ನಿಧ್ಯದಲ್ಲಿರುವಾಗ ಒಂದು ಅದ್ಭುತವಾದ ಸಾತ್ವಿಕವಾದ ಸ್ವಚ್ಛವಾದ ಶಕ್ತಿಯ ಎದುರಿಗೆ ಇರುವ ಮನೋಭಾವ ನಮಗೆ ಉಂಟಾಗುತ್ತದೆ.

● ಗೊರೂರು ರಾಮಸ್ವಾಮಿ ಅಯ್ಯಂಗಾರ



**ದ. ರಾ. ಬೇಂದ್ರೆಯವರಿಗೆ ಐವತ್ತು ತುಂಬಿದ ಸಂದರ್ಭದಲ್ಲಿ (೧೯೪೬ ಮೇ) ಸಮರ್ಪಿಸಲಾದ 'ಕವಿವರ ಬೇಂದ್ರೆ' ಅಭಿನಂದನಾ ಕಿರು ಹೊತ್ತಿಗೆಯಿಂದಾಯ್ದ ಭಾಗಗಳು.**



ಚಿಕ್ಕವನಿರುವಾಗಿನಿಂದಲೇ ಬೇಂದ್ರೆಯವರ ವಿಷಯದಲ್ಲಿ ನಾನು ಕೆಲವೊಂದು ಅಪೇ

ಕ್ಷೆಗಳನ್ನಿಟ್ಟುಕೊಂಡಿದ್ದೆ. ಅವು ನನ್ನ ಕಲ್ಪನೆಗೆ ಮೀರಿ ಫಲದ್ರೂಪವಾದದ್ದು ನಮಗೆ ಕಾಣುತ್ತಿದೆ. ಅವರು ಇದುವರೆಗೆ ಯಾವುದನ್ನೆಲ್ಲ ಬರೆದರೊ, ನುಡಿದರೊ ಮತ್ತು ಮಾಡಿದರೊ ಅದಕ್ಕೆ ಕನ್ನಡ ವಾಙ್ಮಯದಲ್ಲಿ, ಕರ್ನಾಟಕದ ಸಾಮಾಜಿಕ ಜೀವನದಲ್ಲಿ ಒಂದು ನಿಶ್ಚಿತ ಹಾಗು ಗೌರವದ ಸ್ಥಾನ ದೊರೆತಿದೆ. ಶತಕಾನುಶತಕಗಳು ಕಳೆದರೂ ಯಾವುದು ಸುಗಂಧ ವಳಿದು ಹಳಸಿ ಹಳೆಯದಾಗಲಿಕ್ಕಿಲ್ಲವೊ ಅಂಥ ಹೂ ಹಿಡಿದು, ಕಾಯಿ ಬಿಟ್ಟು, ಫಲಪ್ರದವಾಗಿ ಅವರ ಕಾವ್ಯಬಳ್ಳಿ ಕರ್ನಾಟಕದಲ್ಲಿಯ ಸಂತ ವಾಙ್ಮಯದ ಪರಂಪರೆ ಮುಗ್ಗದಂತೆ ನಡೆಸಿಕೊಂಡು ಬರಲಿ.

● ಚಂ. ಗ. ಕುಲಕರ್ಣಿ

ಬೇಂದ್ರೆಯವರಿಗೆ ಮಾತು ಒಂದು ಅದ್ಭುತ ಶಕ್ತಿ. ಆ ಮಾತಿನ ಎಳೆತದಿಂದ ಎಷ್ಟೋ ಜನರು ಮುಗ್ಧರಾಗಿಬಿಡುತ್ತಾರೆ. ಪರಾಂತಃಕರಣಪ್ರವೇಶಿಗಳಾದ ಕವಿಗಳಿಗೆ ಲೋಕಸಂಗ್ರಹಬುದ್ಧಿ ಎಷ್ಟು ಜಾಗೃತವಿರುತ್ತದೆಂಬುದನ್ನು ಕಾಣಬೇಕಾದರೆ ನಾವು ಬೇಂದ್ರೆಯವರನ್ನು ಕಂಡರೆ ತಿಳಿಯುತ್ತದೆ. ಅವರಿಗೆ ಕುತೂಹಲವೂ ಹೆಚ್ಚು; ವಿಷಯಗ್ರಹಣ ಶಕ್ತಿಯೂ ವಿಶೇಷವಾಗಿಯೇ ಇದೆ. ಇವರ ಪ್ರಾತಿಭ ಶಕ್ತಿಯು ಅವಗತವಾಗಬೇಕಾದರೆ ಅವರ ಕೃತಿಗಳನ್ನು ಸ್ವತಃ ಓದಿಕೊಂಡರೆ ಅಷ್ಟು ಕಾಣಬರುವದಿಲ್ಲ. ಬಾಯಿಯಿಂದಲೇ ಕೇಳಿದರೆ ಅಥವಾ ತಿಳಿದುಕೊಳ್ಳಲು ಯತ್ನಿಸಿದರೆ ಅದರ ಆಳವೆಷ್ಟಿದೆ ಎಂಬುದರ ಕಲ್ಪನೆಬಾರದಿರದು.

● ಗೋ. ವೆ. ಚುಳಕಿ

ನೀನಟ್ಟ ಭಾವಗಳ, ನಿನ್ನ ಮೊಗದೋಟದಲಿ<br>
ಹೂಬಿಟ್ಟ ಮುಗುಳ್ನಗೆಯ ಮರೆವನೆಂತು ?<br>
ನಾನಿಟ್ಟ ಕಣ್ಣೀರನಾದರಿಸಿ ಹೃದಯಕ್ಕೆ<br>
ನೀನಿತ್ತ ಶಾಂತಿಯನು ಬರೆವನೆಂತು ?

● ಬಿ.ಎಚ್. ಶ್ರೀಧರ

ಹೃದಯಕ್ಕೆ ಬಲು ಹತ್ತಿರದವನು. ಎ.ಈ. ಗಿಬ್ರಾನ್, ಠಾಕೂರರೂ ನನ್ನನ್ನು ಪ್ರಭಾವಿತಗೊಳಿಸಿದ್ದಾರೆ. ಆದರೆ ಅದಕ್ಕೂ ಹೆಚ್ಚಾಗಿ ನನ್ನನ್ನು ಪ್ರಭಾವಿತಗೊಳಿಸಿದವರು ಶ್ರೀ ಅರವಿಂದರು. ಬಹಳ ತಾರುಣ್ಯದಲ್ಲೇ (೧೯೧೭-೧೯) ನಾನು 'ಆರ್ಯ'ದಲ್ಲಿ ಅವರ ಕಾವ್ಯ ಮೀಮಾಂಸೆಯನ್ನೋದಿ, ಕಾವ್ಯ ಪ್ರಜ್ಞೆಯನ್ನು ಪಡೆದೆ. ಕೀಟ್ಸ್‌ನ ಕಾವ್ಯವನ್ನು ಕುರಿತು ಬರೆಯುತ್ತ, ಅವರು ಪ್ರತಿಪಾದಿಸಿದ ಚತುರ್ಮುಖ ಸೌಂದರ್ಯದ- ಇಂದ್ರಿಯ ಸೌಂದರ್ಯ, ಭಾವಾತ್ಮಕ ಸೌಂದರ್ಯ, ಬೌದ್ಧಿಕ ಸೌಂದರ್ಯ ಮತ್ತು ಆದರ್ಶ ಸೌಂದರ್ಯ ತತ್ವ- ಇಂದಿಗೂ ನನ್ನ ಮನದಲ್ಲಿ ನಟ್ಟಿದೆ.

ಭಾವಗೀತೆಗಳಲ್ಲಿ ನಾನು ಗತಾನುಗತಿಕ ಪಟ್ಟದಿಗಳನ್ನೂ ಬಳಸಿದೆ; ಸಂಗಡವೇ ಹೊಸ ಛಂದಸ್ಸುಗಳ ಪ್ರಯೋಗವನ್ನೂ ಮಾಡಿದೆ. ಮುಂದೆ ಮಾಸ್ತಿಯವರಿಗೂ ನನಗೂ ಗಹನ ಸ್ನೇಹಕ್ಕೆ ದಾರಿ ಮಾಡಿಕೊಟ್ಟ, ಮೊದಲು "ಸ್ವಧರ್ಮ"ದಲ್ಲಿ ಬೆಳಕು ಕಂಡ ಮತ್ತು "ಗರಿ"ಯಲ್ಲಿ ಪ್ರಥಮಪದ್ಯವಾಗಿ ಮುದ್ರಿತವಾದ "ಬೆಳಗು" ("ಮೂಡಲ ಮನೆಯಾ ಮುತ್ತಿನ ನೀರಿನ") ಕವಿತೆಯೇ ಬಹುಶಃ ನನ್ನ ಮೊದಲ ನೂತನ ಛಂದಃಪ್ರಯೋಗ (೧೯೧೯). ಇದು ಹೊಸ ಛಂದಸ್ಸು. ಜನ ಹೇಗೆ ಮೆಚ್ಚುವರೋ ಎಂಬ ಭಯ ನನಗಿಲ್ಲದಿರಲಿಲ್ಲ. ಆದರಿಂದಲೇ ಅದನ್ನು "ಸದಾನಂದಿ ಜಂಗಮ" ಎಂಬ ಕಾವ್ಯನಾಮದಿಂದ ಪ್ರಕಟಿಸಿದ್ದೆ (೧೯೧೯). ನನ್ನ ಸಹಪಾಠಿಗಳೂ ಶಿಷ್ಯರೂ ಮೆಚ್ಚಿದರು. ಧೈರ್ಯ ಬಂತು.

ಆದರೂ ನಾನು ಹೊಸ ಛಂದಸ್ಸನ್ನು ಬುದ್ಧಿಪೂರ್ವಕವಾಗಿ, ಯೋಜನಾಬದ್ಧವಾಗಿ ಪ್ರಯೋಗ ಮಾಡಿದೆನೆಂದು ಹೇಳಲಾರೆ. ನಾನು ಯೋಜನಾಬದ್ಧವಾಗಿ ಏನನ್ನೂ ಮಾಡಲಾರೆ. ಬಹುಶಃ ಇಕ್ಕಟ್ಟಾದ ಮಾತ್ರಾ ಮಿತಿಗಳುಳ್ಳ ಪಟ್ಪದಿಗಳು ನನ್ನ ಸ್ವಾಭಾವಿಕ ಸ್ವಾತಂತ್ರ್ಯಪ್ರಿಯ ಆತ್ಮಕ್ಕೆ ಹಿಡಿಸಿರಲಿಕ್ಕಿಲ್ಲ. ಧಾರವಾಡದಲ್ಲಿ ಯಾವಾಗಲೂ ಕಿವಿದೆರೆದು ಓಡಾಡುವ ನನಗೆ, ದಾಸರ ಪದದಿಂದ ಗೊಲ್ಲರ ಹಾಡಿನವರೆಗೆ ಎಲ್ಲವನ್ನೂ ಕೇಳಿ ಕೇಳಿ, ಒಂದು ಸಂಸ್ಕಾರ ಬಂದಿರಬೇಕು. ಸಾಂಗತ್ಯ ಮತ್ತು ಲೋಕಗೀತಗಳ ಅಂಶಿಗಣಗಳು ಕೊಡುವ ಸ್ವಾತಂತ್ರ್ಯ, ಮಾಧುರ್ಯ



ಗಳು ರಕ್ತಗತವಾಗಿರಬೇಕು. ಇವೆಲ್ಲ ಸೇರಿ ಛಂದಸ್ಸುಗಳಲ್ಲಿ ನವನವೋನ್ಮೇಷಣೆ ನನಗೆ ಸಾಧ್ಯವಾಗಿರಬೇಕು. ಆದರೆ ನಾನು ನನಗೆ ಬಂದಂತೆ ಹಾಡಿದೆ ಎಂದೇನೇ ಹೊರತು, ಬಯಸಿ ಎಣಿಸಿ ಹೊಸ ಛಂದಸ್ಸುಗಳನ್ನು ನಿರ್ಮಿಸಿದೆ ಎನ್ನಲಾರೆ. ಮೊನ್ನೆ ನನ್ನ ಮೊದಲ ಕನ್ನಡ ಕವಿತೆಯನ್ನು ಓದಿದ ಮಿತ್ರರೊಬ್ಬರು, "ಎಂಟು ಮಾತ್ರೆಗಳ ನಿಖರ ಗಣಗಳನ್ನು ಉಪಯೋಗಿಸಿದರೂ ಅದರಲ್ಲಿ ಸಾಮಾನ್ಯವಾಗಿ ಉಪಯೋಗಿಸುವ ೪#೪ ರ ಗತಿಗೆ ಕಟ್ಟು ಬೀಳದೇ ೩#೫ರ ಗತಿಯನ್ನೂ (ಕನ್ನಡದಲ್ಲಿ ಮೊದಲನೇ ಸಲ ಇದ್ದಿರಲೂಬಹುದು) ಧಾರಾಳವಾಗಿ ಉಪಯೋಗಿಸಿ, ಹೊಸ ಲಯವೈವಿಧ್ಯವನ್ನು ಸೃಷ್ಟಿಸಿದ್ದೀರಿ ಇಲ್ಲಿ" ಎಂದರು. ನಾನು ನೋಡಿದೆ. ಹೌದು, ನಿಜ. ಆದರೆ ಅವರು ತೋರಿಸಿ ಕೊಡುವವರೆಗೂ, ನಾನೀ ಅಂಶವನ್ನು ಗುರುತಿಸಿದ್ದಿಲ್ಲ. ಅಷ್ಟುಮಟ್ಟಿಗೂ ನಾನು ಸ್ಫೂರ್ತಿಯ ಕೂಸು.

ಹೆಚ್ಚು ಬಿಗುವಾದ ಅಷ್ಪದಿ ಮತ್ತು ೧೨ ಸಾಲಿನ ಸೀಸ ಪದ್ಯಗಳಲ್ಲಿ ಕೂಡ ನಾನು ಶೇಕ್ಸ್‌ಪಿಯರಿಯನ್ ಅಥವಾ ಸ್ಪೆನ್ಸೋರಿಯನ್ ಮಾರ್ಗದಲ್ಲಿ ನಡೆದು, ಪದಾಂತಕ್ಕೆ ಶಬ್ದಾಂತವೂ ಆಗುವ ಹಾಗೆ ನೋಡಿಕೊಳ್ಳಲಿಲ್ಲೆಂದು ಕೇಳುವವರಿದ್ದಾರೆ. ಏಕೆಂದು ನಾನು ಹೇಳಲಾರೆ. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕಂದ, ವೃತ್ತ ಷಟ್ಪದಿಗಳಲ್ಲಿ ಕೂಡ ಪದಾಂತಯತಿಯನ್ನು ಕವಿಗಳು ಸ್ವೀಕರಿಸಲಿಲ್ಲವಷ್ಟೆ. ನನ್ನ ನಾದಪ್ರಜ್ಞೆಯೂ ಹಾಗೆ ಬಯಸಲಿಲ್ಲ. ನನ್ನ ಭಾವದೊಡನೆ ಛಂದಸ್ಸು ಕೂಡ ನಿಟ್ಟೋಟದಿಂದ ಎಂಟನೆ ಸಾಲಿನ ತುದಿಯಲ್ಲಿ ಬರುವ ಭಾವಾಂತರದ ಗುರಿಯವರೆಗೆ ಓಡಿದರೂ ತಪ್ಪೇನು, ಎನಿಸಿರಬೇಕು ಅದಕ್ಕೆ. ಆದರೆ ಇಲ್ಲಿಯೂ ನಾನು ಬೇಕೆಂದೇ ಹೀಗೆ ಮಾಡಲಿಲ್ಲ. ಅದು ಸ್ವತಂತ್ರ ಬೇಂದ್ರೆ ಪ್ರಜ್ಞೆಯ ಕಾರ್ಯ ಇರಬಹುದು.

ನನ್ನ ಜನಪದ ಶೈಲಿಯ ಮಾತೂ ಅಷ್ಟೇ. ನನ್ನ ಕಿವಿ ನನಗೆ ಪ್ರಮಾಣ. ಆದ್ದರಿಂದ 'ಗ್ರಾಂಥಿಕ' ಎನಿಸುವ ಶೈಲಿಯಲ್ಲಿ ಬರೆದಾಗಲೂ, ಜನಪದದ ಹಸುರು ಮಾತುಗಳು ಅಲ್ಲಲ್ಲಿ-ಮೊದಲಿಂದಲೂ ತಾವಾಗಿ ಬರುತ್ತವೆ. ಅದನ್ನು ಹೊರದಬ್ಬಲು ನಾನು ಇಷ್ಟಪಡುವುದಿಲ್ಲ. ಯಾವುದಕ್ಕೆ ಯಾವ ಶೈಲಿ ಯೋಗ್ಯವೊ, ಆ ಶೈಲಿಯಲ್ಲಿ ನನ್ನ ಹಾಡು ತಾನಾಗಿ ಬರುತ್ತದೆ.

ಇದಕ್ಕೆಲ್ಲ ವಿರೋಧ ಬರಲೇ ಇಲ್ಲವೆಂದಲ್ಲ. ಆದರೆ ಹಲವರು ಪ್ರಶಂಸಕರೂ ಸಿಕ್ಕಿದರು. ಆದರಿಂದಲೇ ನಾನು ತೃಪ್ತ. ನಾನೇನು ರಾಜಕುಲದವನೆ ? ನನ್ನ ಹೆಂಡತಿ, ನನ್ನ ಮಿತ್ರರು ಕೇಳಿ ನಲಿದರೆ ಸಾಕು. ಟೀಕಿಸುವವರನ್ನು ಬಹಳ ಲಕ್ಷಿಸುವುದು ನನ್ನ ಸ್ವಭಾವವೇ ಅಲ್ಲ. "ಇದು ನಿಮಗೆ ಹಿಡಿಸದಿದ್ದರೆ, ಸಾಲದಿದ್ದರೆ, ಹೋಗಿ ಮಹಾಭಾರತವನ್ನೋ ರಾಮಾಯಣವನ್ನೋ ಓದಿ. ನಾನು ಅವರಷ್ಟು ದೊಡ್ಡವ ಎಂದು ನಾನೆಲ್ಲಿ ಹೇಳಿಕೊಂಡಿದ್ದೇನೆ" ಎಂದು ಟೀಕೆಗಳನ್ನು ಬದಿಗೆ ಸರಿಸುತ್ತಿದ್ದೆ. ಇಂದಿಗೂ ನನ್ನ ದೃಷ್ಟಿ ಇದೇ. ವಾಗ್ವಾದಕ್ಕೆ ಬಂದರೆ ನಾನು ಒಂದೆರಡು ತಲೆ ಗಿರ್ರನಿಸುವ ಬಾಣಗಳನ್ನು ಬಿಡಬಲ್ಲೆನೆಂದು ನನ್ನ ಟೀಕಾಕಾರರೂ ಪ್ರಶಂಸಕರೂ ಬಲ್ಲರು. ಆದರೆ ಇದೆಲ್ಲ ನನ್ನನ್ನು ವಿಶೇಷ ವಿಚಲಿತಗೊಳಿಸುವುದಿಲ್ಲ. ನಾನು ನನ್ನ ದಾರಿಯಲ್ಲೇ ನಡೆಯುತ್ತೇನೆ.

ಸಾರ್ವಜನಿಕರಲ್ಲಿ ನಾನು ತುಂಬ ಯಶಸ್ವಿಯಾದೆನೆಂದೇ ಹೇಳಬೇಕು. ಅದು ನನ್ನ ಆತ್ಮವಿಶ್ವಾಸಕ್ಕೆ ಪುಟ ಕೊಟ್ಟಿರಬಹುದು. ೧೯೨೯ರಲ್ಲಿ ಬೆಳಗಾವಿ ಸಮ್ಮೇಳನದಲ್ಲಿ ನಡೆದದ್ದನ್ನು ನೋಡಿ, ಕವಿತೆಗಳನ್ನು ಇಂದು ಕನ್ನಡ ಸಾಹಿತ್ಯದಲ್ಲಿ ಹಿರಿಯರೆನಿಸಿದ ಒಬ್ಬಿಬ್ಬರು ಓದಿದ್ದರು. ಇನ್ನೂ ಪ್ರಥಿತಯಶಸ್ಕರಾ

ದವರು ಓದುವವರಿದ್ದರು. ನಡುವೆ ಒಂದು ವಿಷ್ಕಂಭಕದ ಹಾಗೆ, ನನ್ನ ಕವಿತಾವಾಚನ ಇತ್ತು. ನಾನು ಅದೇ ಹಿಂದಿನ ವರ್ಷ ಡಿಸೆಂಬರಿನಲ್ಲಿ ನನ್ನ ಒಬ್ಬ ಮಗ ಹುಟ್ಟಿದಾಗ ಬರೆದಿದ್ದ "ಹಕ್ಕಿ ಹಾರುತಿದೆ ನೋಡಿದಿರಾ?" ಓದಿದೆ. ಸಭೆ ಪುಲಕಿತವಾಗಿ ಕೇಳಿತು. ಹತ್ತಿರವೇ ಕುಳಿತಿದ್ದ (ಮುಂದೆ ಹೈಕೋರ್ಟಿನ ನ್ಯಾಯಮೂರ್ತಿಗಳಾದ) ನಾರಾಯಣರಾವ ಲೋಕೂರರು, "ಸಾರ್ವಭೌಮರಾ ನೆತ್ತಿಯ ಕುಕ್ಕಿ" ಎಂಬ ಪಂಕ್ತಿ ಬಂದಾಗ, ಕುಳಿತ ಕುರ್ಚಿಯಿಂದ ಒಮ್ಮೆ ದಿಗ್ಗನೆದ್ದು ಕುಳಿತರು. ಮಾಸ್ತಿಯವರು ಜನಗಣನಾ ವರದಿಯಲ್ಲಿ ಈ ಕವಿತೆಯನ್ನು ಉಲ್ಲೇಖಿಸಿದರು. ಮುಂದಿನ ಪ್ರಗಲ್ಭ ಕವಿತಾ ವಾಚನಗಳನ್ನು ಕೇಳುವ ಆಸಕ್ತಿಯನ್ನು ಸಭೆಯು ಪೂರ್ತಿ ಕಳೆದುಕೊಂಡಿದ್ದು ಈ ಕಾವ್ಯವಾಚನದ ಒಂದು ಅನಿರೀಕ್ಷಿತ ದುಃಖದಾಯಕ ಪರಿಣಾಮವಾಗಿತ್ತು.

ಕವಿತೆಯಲ್ಲದೆ ಇತರ ಸಾಹಿತ್ಯ ಪ್ರಕಾರಗಳಲ್ಲಿಯೂ ನಾನು ಸಾಕಷ್ಟು ಕೈಯಾಡಿಸಿದ್ದೇನೆ. ಬರೆದ ಅನೇಕ ಕಥೆಗಳು ಕಳೆದಿವೆ. ಉಳಿದವು 'ನಿರಾಭರಣ ಸುಂದರಿ'ಯಲ್ಲಿ ಬಂದಿವೆ. ನಾಟಕಗಳಲ್ಲಿಯೂ ನಾನು ಯಶಸ್ವಿಯಾದೆ. ನನ್ನ 'ತಿರುಕರ ಪಿಡುಗ'ನ್ನು ಮೊದಲು ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ನಾನೇ ಓದಿದೆ. ಅನಂತರ ಬರಲಿದ್ದ ಕರ್ನಾಟಕದ ಆಚಾರ್ಯ ಪುರುಷರೊಬ್ಬರ ಭಾಷಣ ಕೇಳಲಿಕ್ಕೆ, ಜನರಲ್ಲಿ ಕುತೂಹಲ ಉಳಿಯಲಿಲ್ಲ. ತಮ್ಮ ಭಾಷಣ ಕೊನೆಗೇ ಬರಬೇಕು ಎಂದು ಕಾರ್ಯಕ್ರಮದಲ್ಲಿ ತುದಿಗಿದ್ದ ಈ ನಾಟಕ ವಾಚನವನ್ನು, ಮಧ್ಯಕ್ಕೆ ವರ್ಗಾಯಿಸಿದ್ದ ಅವರಿಗೆ ಅದು ಸರಿಹೋಗಲಿಲ್ಲ ಎನಿಸಿತು. ಆದರೂ ನಾನು ನಾಟಕ, ನಗೆಬರಹಗಳಲ್ಲಿ ಬಹಳ ಕೃಷಿ ಮಾಡಲಿಲ್ಲ. ಇದಕ್ಕೆ ಒಂದು ಕಾರಣ, ಹಾಸ್ಯವು ಭೀಕರ ಪರಿಣಾಮಕ್ಕೆಳೆಯಬಹುದೆಂಬ ಪ್ರಜ್ಞೆ ನನಗೆ ಬಂದದ್ದು. ನಗುವ ಚಟ ಹಿಡಿಸಿದರೆ, ದೇಶಕ್ಕೆ ಕ್ಷೇಮ ಇಲ್ಲ ಎಂಬುದನ್ನು ಮಹಾರಾಷ್ಟ್ರದ ಅನುಭವದಿಂದ ನಾನು ಕಂಡೆ. ನಗೆ ಎಂಬುದೊಂದು ಎಚ್ಚರ. ಆ ಎಚ್ಚರ ಉಳಿಯದಿದ್ದರೆ, ಅದು ತಾಮಸವಾಗುತ್ತದೆ. ಅಲ್ಲದೆ ನಾಟಕ ಬರೆಯುವವರಿಗಿರುವ ಕಷ್ಟಗಳನ್ನು ನಾನು ಶ್ರೀರಂಗ ಮೊದಲಾದವರ ಅನುಭವದಿಂದ ಕಂಡಿದ್ದೆ. ನಾಟಕ ಒರೆಗೆ ಹತ್ತುವುದು ರಂಗದ ಮೇಲೆ. ರಂಗಕ್ಕೆ ಅದನ್ನು ತರಬೇಕಾದರೆ, ಅಗತ್ಯವಾದ ಸಂಘಟನಾ ಯತ್ನದ ಅಗಾಧತೆಯು ನನ್ನನ್ನು ಹಿಂಜರಿಯುವಂತೆ ಮಾಡಿತು.

ನನಗೆ ಏನು ಸ್ಫೂರ್ತಿ ಕೊಡುತ್ತದೆ? ಎಂದು ನಾನು ಸರಿಯಾಗಿ ಹೇಳಲಾರೆ. ಬಾಹ್ಯ ಪ್ರೇರಣೆ ಇರಬಹುದು. ಬಾಹ್ಯ ಉದ್ದೀಪನವಂತೂ ಇಲ್ಲವೆಂದು ತೋರುತ್ತದೆ. ನನ್ನದು ಅವಶ್ಯವಾಗಿ ಭಾವನಿಷ್ಠ subjetive ಕಾವ್ಯ. ನನ್ನ ಒಳಗಿನ 'ವ್ಯಕ್ತಿ' ಎಚ್ಚರಗೊಂಡಾಗಲೇ ಕಾವ್ಯ ಒಡಮೂಡಿ ಬರುತ್ತದೆ. ಬರುವಾಗ ಅದು, ಭಾವ ಭಾಷೆ ಶಬ್ದ ಲಯ ಗತಿಗಳನ್ನು ಸಂಗಡ ಕರೆದುಕೊಂಡೇ ಬರುತ್ತದೆ. ಬರೆಯಲು ನನಗೆ ಶಾಂತ ಆವರಣ ಬೇಕಿಲ್ಲ. ಏಕಾಂತತೆ ಮಾತ್ರ ಬೇಕು. ಏಕಾಂತತೆ ಗದ್ದಲದಲ್ಲಿಯೂ ಸಾಧ್ಯ. ಅದು ಇತರ ಗದ್ದಲವನ್ನು ಮುಳುಗಿಸುವ ಗದ್ದಲವಾಗಿದ್ದರಾಯಿತು. ಜಿ.ಐ.ಪಿ. ಗಾಡಿಯ ಸಪ್ಪಳ, ಸಾ ಮಿಲ್ಲಿನ ಕರಕರ, ಫ್ಯಾನಿನ ಗುಂಯಿ ನಾದ, ಇಂಥವು ಕೂಡ ನನ್ನನ್ನು ಏಕಾಂತದಲ್ಲಿ ನೂಕಲು ಸಮರ್ಥವಾಗುತ್ತವೆ. ಒಮ್ಮೆ ನೂಕಿಸಿಕೊಂಡ ನಂತರ, ಬಾಹ್ಯ ಪ್ರಪಂಚದ ಅರಿವು ಉಳಿಯುವುದಿಲ್ಲ. ಅನುಕೂಲ ಮಾಡಿಕೊಟ್ಟಷ್ಟೂ ಬರವಣಿ'ಗೆ ಕಡಿಮೆ. ಚಾ, ಕಾಫಿ, ಸಿಗರೇಟು ಯಾವುದೂ ನನಗೆ ಬೇಕಾಗಿಲ್ಲ. ಪೆಪ್ಪರ್‌ಮಿಂಟ್ ಚಟವೊಂದಿದೆ. ಆದರೆ ಅದೂ ಬರೆಯುವಾಗ ಬೇಡ. ಅತ್ಯಂತ 'ಪ್ರತಿಕೂಲ' ಸಂಧಿಗಳಲ್ಲಿ ನನ್ನ ಕವಿತೆ ಸ್ಫೂರ್ತಿ ಹೊಂದಿದ್ದುಂಟು. ಹೆಂಡತಿಯೊಡನೆ ಆ ಕಾರಣ ಜಗಳವಾಡಿದ ಒಂದು ಸಂಜೆ 'ಕುಣಿ'ಯೋಣು ಬಾರ' ಕವಿತೆ ಬರೆದೆ. ನನ್ನೊಡನೆಯೇ ನಾನು ರಾಜಿ ಮಾಡಿಕೊಳ್ಳುವ ಹಾದಿ ಇದಾಗಿತ್ತೇನೋ. ಗಾಡಿ ತಪ್ಪಿಸಿಕೊಂಡು ಮನೆಗೆ ಹಿಂದಿರುಗಿದ ದಿನ ಎಷ್ಟೋ ಕಾಲದಿಂದ ಬರೆಯಬೇಕೆಂದಿದ್ದ 'ಅಂಗ ವಿಠಲ'ವನ್ನು ಒಂದೇ ಉಸಿರಿಗೆ ಬರೆದು ಮುಗಿಸಿ ಮಲಗಿದೆ. ಒಂದು ಹರಕು ಕಾಗದದ ಚೂರು ಅಥವಾ ಹಳೆಯ ಪುಸ್ತಕ, ಇಲ್ಲವೆ ಲಕೋಟೆಯ ಬೆನ್ನು ಇಲ್ಲವೆ ಮುದ್ರಿತ ಪುಸ್ತಕದ ಖಾಲಿ ಅಂಚು ನನ್ನನ್ನು ಬರೆಯಲು ಪ್ರೇರಿಸುವುದುಂಟು. ಬರೆಯಬೇಕೆಂದು ಒಪ್ಪಿಕೊಂಡು, ಮುಂದೆ ಮುಂದೆ ಹಾಕುತ್ತ ಹೋಗುವುದು ನನಗೆ ಅಭ್ಯಾಸವಾಗಿ ಹೋಗಿದೆ. ಕೊನೆಗೆ ಬರೆಯಲು

# ಬೇಂದ್ರೆ ನೆನಪು

ಧರ್ಮಸ್ಥಳ ಸಾಹಿತ್ಯ ಸಮ್ಮೇಳನ ಸಂದರ್ಭ. ನಾಡಿನ ಮೂಲೆಮೂಲೆಗಳಿಂದ ಬಂದ ಸಾಹಿತ್ಯ ಪ್ರೇಮಿಗಳನೇಕರು ಕವಿ ಬೇಂದ್ರೆಯವರನ್ನು ಹತ್ತಿರದಿಂದ ನೋಡುವ ಕುತೂಹಲ ವ್ಯಕ್ತಪಡಿಸಬಹುದೆಂದು ಭಾವಿಸಿಯೋ ಏನೋ ಬಿಡುವಿನ ವೇಳೆಯಲ್ಲಿ ಒಂದು ದಿನ ಯಾರೋ, ಎತ್ತರದ ಬಯಲಲ್ಲಿ ಕುರ್ಚಿಯೊಂದನ್ನು ಹಾಕಿ ಅರವತ್ತರ ಬೇಂದ್ರೆಯವರನ್ನು ಕರೆತಂದು ಆರಾಮವಾಗಿ ಕೂರಿಸಿದ್ದರು. ನಿರೀಕ್ಷಿಸಿದ್ದಂತೆ ಏಳೆಂಟು ಜನರ ಗುಂಪು ಆಗಲೇ ಕವಿಯ ಸುತ್ತ ಜಮಾಯಿಸಿತ್ತು. ಕೆಲವರು ಅವರೊಂದಿಗೆ ಮಾತನಾಡುವ ತವಕವಿರಿಸಿಕೊಂಡಿದ್ದರೆ, ಮತ್ತೆ ಕೆಲವರು ಸುಮ್ಮನೆ ಮಿಕಿಮಿಕಿ ನೋಡುತ್ತ ನಿಂತವರು.

ದೂರದಲ್ಲಿ ಒಬ್ಬಾಕೆ ಬರುತ್ತಿರುವುದನ್ನು ಹುಬ್ಬಿಗೆ ಕೈಹಚ್ಚಿ ನೋಡುತ್ತ, "ಬರ್ತಾಳS. ಬರ್ಲಿಕ್ ಹತ್ತ್ಯಾಳSS ಬಂದ್ಳು.... ಬಂದ್ಳು..." ಎಂದು ಉದ್ಗರಿಸುತ್ತ, ಸುತ್ತಲಿದ್ದವರ ಗಮನವನ್ನೆಲ್ಲ ಆಕೆಯತ್ತ ಸರಿಸಿದರು. ಯಾರೋ ಕವಿಗೆ ಹತ್ತಿರದವರೇ ಇರಬೇಕೆಂದು ಭಾವಿಸಿದ ನೆರೆದವರೆಲ್ಲ ಲಗುಬಗೆಯಿಂದ ಪಕ್ಕಕ್ಕೆ ಸರಿದು ಆಕೆಗೆ ದಾರಿ ಮಾಡಿಕೊಟ್ಟರು. ಬಂದಾಕೆ ವಿಶಿಷ್ಟ ಭಂಗಿಯಲ್ಲಿ ಕವಿಯ ಮುಖದ ಹತ್ತಿರಕ್ಕೇ ತಲೆಬಾಗಿ ಇಳಿವಯಸ್ಸಿನ ಕವಿಗೆ ಕೇಳಿಸದು ಎಂಬಂತೆ ಬಾಗಿ, "ನಮಸ್ತೇ," ಎಂದು

---

ಕುಳಿತರೆ, ಹೆಚ್ಚಾಗಿ ಕುಳಿತ ಮೆಟ್ಟಿಗೆ ಮುಗಿಸುತ್ತೇನೆ. ದೀರ್ಘವಾಗಿ ಬರೆಯಲೇಬೇಕಾದರೆ ಬಾಗಿಲು ಹಾಕಿಕೊಂಡು ಕೂತು ಬರೆಯುತ್ತೇನೆ. ಕುಳಿತ ಮೆಟ್ಟಿಗೆ ಮುಗಿಯದೆ ಹೋದರೆ, ಆಮೇಲೆ ಅದನ್ನು ಮುಗಿಸಲು ಎಷ್ಟು ದಿನ, ಎಷ್ಟು ವರ್ಷ ಹಿಡಿದೀತೆನ್ನಲು ಬಾರದು. 'ಕಲ್ಪವೃಕ್ಷ ವೃಂದಾವನಂಗಳಲಿ' ಹಳೇ ನೋಟ್ ಬುಕ್ಕಿನಲ್ಲಿ ಅರ್ಧ ಬರೆದಿಟ್ಟಿದ್ದೆ. ವರ್ಷಗಳ ನಂತರ ಅದು ಸಿಕ್ಕಿದಾಗ, ಇದು ನಾನೇ ಬರೆದದ್ದೇ ಎಂದು ಗುರುತು ಸಿಕ್ಕದೆ ಹಾಗೇ ಉಳಿಯಿತು. ಒಂದು ದಿನ ಬೀದಿಯಲ್ಲಿ ನಡೆಯುವಾಗ ಎಲ್ಲಿಂದಲೋ ಸ್ಫೂರ್ತಿ ಬಂದು, ಅದನ್ನು ಮುಗಿಸಿದೆ. ಎರಡು ಸಾಲು ಬರೆದು ಹಾಗೇ ನಿಲ್ಲಿಸಿ, ಎಂಟು ವರ್ಷಗಳ ನಂತರ ಪೂರ್ತಿ ಮಾಡಿದ್ದುಂಟು. ೧೯೧೮ರಲ್ಲಿ ಪ್ರಾರಂಭಿಸಿದ ಒಂದು ನಾಟಕ, ಇನ್ನೂ ಮುಗಿಯದೇ ಇದೆ.

ನನಗೆ ಯಾವ ನೈತಿಕ, ಸಾಮಾಜಿಕ ಅಥವಾ ರಾಜಕೀಯ ಧ್ಯೇಯವೂ ಸ್ಫೂರ್ತಿ ಕೊಟ್ಟಿದೆಯೆನ್ನಲಾರೆ. ಬಡತನದ ಬಗ್ಗೆ ನಾನು ಬರೆದಿದ್ದೇನೆ. ವಿಧವೆಯ ದುಃಖವನ್ನೂ ವರ್ಣಿಸಿದ್ದೇನೆ. ದೇಶಾಭಿಮಾನವನ್ನು ಪ್ರಕಟಿಸಿದ್ದೇನೆ. ಹುಮ್ಮಸಿನ ದಿನಗಳಲ್ಲಿ ದೇಶಕ್ಕಾಗಿ ಸೆರೆಮನೆ-ದಿಗ್ಬಂಧನಗಳನ್ನೂ ಕಂಡಿದ್ದೇನೆ. ಆದರೆ ಬಡತನದ ಅನುಭವ ನನ್ನನ್ನು 'ತುತ್ತಿನ ಚೀಲ' ಬರೆಯಿಸಿತೆನ್ನಲಾರೆ. ತಂದೆ ಸದಾ ಅಸ್ವಸ್ಥರಾಗಿದ್ದು, ಹನ್ನೆರಡರಲ್ಲೇ ದೈವಾಧೀನರಾಗಿ ಅಜ್ಜಿಯ ಪೋಷಣೆಯಲ್ಲೇ ಬೆಳೆದವನಾದರೂ ನಾನು ನಿಜವಾದ ಬಡತನವನ್ನನುಭವಿಸಲಿಲ್ಲ. ನನ್ನ ಅಜ್ಜಿ ಬಡವಿ. ಜನರ ಮನೆಯಲ್ಲಿ ಅಡಿಗೆಗೆ ಹೋಗುತ್ತಿದ್ದರೂ, ಕಟ್ಟಭಿಮಾನಿ. ಯಾರಿಗೂ ದೇಹಿ ಎಂದವಳಲ್ಲ. ನಮಗೂ ಅದನ್ನು ಕಲಿಸಲಿಲ್ಲ.

ರಾಜಕೀಯ, ಸಾಮಾಜಿಕ ವಿಚಾರಗಳೂ ಹಾಗೆಯೆ. ನಾನು ಇವೆಲ್ಲವುಗಳಿಂದಲೂ ಪ್ರಭಾವಿತನಾಗಿದ್ದೇನೆ. ಆದರೆ ಅವುಗಳಿಗೆ ನನ್ನ ಕಲಾತ್ಮಕ ಪ್ರತಿಕ್ರಿಯೆ, ಸುಧಾರಣಾ ಧ್ಯೇಯ ಪ್ರೇರಿತವಲ್ಲ.

ನನ್ನದು ಅವಶ್ಯವಾಗಿ ಹೃದಯದ ಪ್ರತಿಕ್ರಿಯೆ. ನನ್ನ ಭಾವಗಳು ಒಳಗೊಳಗೇ ಮಥಿಸುತ್ತಿರುವಂತೆ ಕಾಣುತ್ತದೆ. ಅನಂತರ ಒಂದು ದಿನ ಹೊಟ್ಟೆಯಲ್ಲಿ ಬೆಳೆಯುತ್ತಿರುವ ಗರ್ಭದಂತೆ, ಇನ್ನು ಒಳಗೆ ಉಳಿಯಲಾರದೆ ಹೊರ ಬರುತ್ತವೆ. ಅದಕ್ಕೇ ನಾನು "ಭಾವ ನೋವ ತಾಳದೆ ಸ್ವಾತಂತ್ರ್ಯ ಪಡೆಯುವ ದಣ್ಣ" ಎನ್ನುತ್ತೇನೆ.

ನನಗೆ ನೈತಿಕ ಮುಂತಾದ ಆದರ್ಶ ಎಂಬುದೇನೂ ಇಲ್ಲ ಎಂದೆ. ಆದರೆ ನನ್ನ ತಾಯಿ ನನ್ನನ್ನು ಕಾಪಾಡುತ್ತಿದ್ದಾಳೆ. ತಾಯಿಗೆ ಕೆಡಕೆನಿಸುವಂಥ ಯಾವುದನ್ನೂ ಮಾಡಬಾರದೆಂದು ನನ್ನ ಆತ್ಮ ಎಚ್ಚರವಾಗಿರುತ್ತದೆ. ನನ್ನ ಕಾವ್ಯನಾಮ 'ಅಂಬಿಕಾತನಯದತ್ತ'- ನನ್ನ ತಾಯಿಯಿಂದ ಬಂದದ್ದು. ತಾಯಿ ಎಂಬ ಸೂತ್ರದಲ್ಲೇ ನನ್ನ ಜೀವನ ಪೂರ್ಣ ಇದೆ. ನನ್ನ ತಾಯಿ, ಧಾರವಾಡದ ನಗರದೇವತೆ 'ಧಾರವಾಡದ ತಾಯಿ', ಕನ್ನಡ ತಾಯಿ, ಭಾರತ

ಎರಡೂ ಕೈ ಜೋಡಿಸಿ ನಿಂತು, ಕವಿಯ ಪ್ರತಿಕ್ರಿಯೆಗೂ ಕಾಯದೇ ಒಂದೇ ಉಸುರಿಗೆ, ಉಕ್ಕುವ ಉತ್ಸಾಹದಲ್ಲಿ- "ಸಾರ್, ನಿಮ್ಮ 'ನಾದಲೀಲೆ' ಓದಿದೀನಿ; 'ಗರಿ' ಓದಿದೀನಿ; 'ಸಖೀಗೀತ' ಓದಿದೀನಿ..." ಅದನ್ನು ಓದಿದೀನಿ, ಇದನ್ನು ಓದೀದಿನಿ ಎಂದು ಒಂದೇ ಸಮನೆ ವರದಿ ಒಪ್ಪಿಸತೊಡಗಿದಳು. ಕೇಳಿಸಿಕೊಳ್ಳುತ್ತಿದ್ದ ಕವಿ ಹೂಂಗುಟ್ಟಿ ತಲೆ ಅಲ್ಲಾಡಿಸುತ್ತ, "ಹಾಂ, ಹಾಂ... ಓದ್ಯಾಳ, ಓದ್ಕೊಂಡಾಳ, ಭಾಳಾ ಓದ್ಕೊಂಡಾಳ...." ಎಂದು ಸುತ್ತಲಿದ್ದವರತ್ತ ನೋಡಿ ಮೆಚ್ಚುಗೆಯ ಮುಗುಳ್ನಗೆ ಸೂಸುತ್ತ ತಲೆ ಹಾಕುತ್ತಿದ್ದರೆ, ಆಕೆ ಒಂದು ಕ್ಷಣ ನಿಂತು, ಉಸಿರೆಳೆದುಕೊಂಡು ಕಣ್ಣು ಪಿಳಿಪಿಳಿ ಬಿಟ್ಟುಕೊಂಡು, "....ಗೊತ್ತಾ ಸಾರ್? ನಿಂ ಪುಸ್ತಕಾ ಒದ್ತಾ ಇದ್ರೆ ಟೈಮ್ ಹೋದದ್ದೇ ಗೊತ್ತಾಗುಲ್ಲ..." ಎಂದು ಹೇಳುತ್ತಿದ್ದ ಆಕೆಯ ಮಾತಿನ್ನೂ ಬಾಯಲ್ಲಿರುವಾಗಲೇ ಕವಿ ಕೈಚಾಚಿ ಆಕೆಯ ತಲೆಗೊಂದು ಸಣ್ಣ ಏಟು ಕೊಟ್ಟು, "ಥೂ ದಡ್ಡಿ, ಈ ಬೇಂದ್ರೆ ನಿನಗ ಹೊತ್ಗಳೆಯಾಕ ಪುಸ್ತಕಾ ಬರದಾನಂತಾ ತಿಳದಿಯೇನು?" ಎಂದು ಕೇಳಿದಾಗ ಸುತ್ತಲಿದ್ದವರೆಲ್ಲ ಗೊಳ್ಳೆಂದು ನಕ್ಕರು. ಕವಿಯ ಆ ಅನಿರೀಕ್ಷಿತ ಮಾತಿನ ಏಟಿಗೆ ತತ್ತರಿಸಿದ ಆ ದಿನ್ನಾಣಗಿತ್ತಿ ಕ್ಷಣಹೊತ್ತು ಪೆಚ್ಚಾಗಿ ನಿಂತಿದ್ದಳು ಅವಾಕ್ಕಾಗಿ- ತಪ್ಪು ಮಾಡಿದ ಹಸುಳೆಯಂತೆ. ನಂತರ ಆಕೆಯನ್ನು ಕವಿಯೇ ತಮ್ಮ ನವುರಾದ ಮಾತುಗಳಿಂದ ಸಮಾಧಾನಿಸಿದ್ದರು.

**ಈರಪ್ಪ ಎಂ. ಕಂಬಳಿ**

---

ಮಾತೆ, ಅನಂತರ ಇದೀಗ ಅರವಿಂದಾಶ್ರಮದ 'ಮದರ್.' ಹೀಗೆ ಮಾತೃಪ್ರೇಮದ ಆಹಾರ ವಿಹಾರ ಪ್ರಕಾರಗಳಿಂದ ನನ್ನ ಕಾವ್ಯ ಓತಪ್ರೋತವಾಗಿದೆ.

ಇನ್ನೊಂದೆಂದರೆ ಮಿತ್ರಭಾವ. ಸೇವ್ಯ ಸೇವಕ ವಾತ್ಸಲ್ಯ ಮೈತ್ರಿ ಮಧುರ ಭಾವಗಳಲ್ಲಿ ನನ್ನದು ಮೈತ್ರಿಭಾವ. ಈ ಭಾವದಿಂದಲೇ 'ಗೆಳೆಯರ ಗುಂಪು' ನನ್ನ ಕಲ್ಪನೆಯಲ್ಲಿ ಮೂಡಿದ್ದು. ಆಗ ನಾನು ಪುಣೆಯಲ್ಲಿದ್ದೆ. ಆ ದಿನಗಳಲ್ಲಿ ರಾಜಕೀಯ ದಿಗ್ಗಜಗಳಾದ ಗೋಖಲೆ-ಟಿಳಕರ ತಿಕ್ಕಾಟ ಪೂರ್ತಿ ಕಾವಿನಲ್ಲಿತ್ತು. ಗೋಖಲೆಯವರು ತೀರಿಕೊಂಡಾಗ, ನಾನಾ ತರಹದ ಸುದ್ದಿಗಳು ಹಬ್ಬಿದವು. ಯಾರೋ ಒಬ್ಬರು ಆಗ, "ಈ ಇಬ್ಬರು ಮಹಾಪುರುಷರು ಮಿತ್ರರಾಗಲು ಕಲಿಯಲಿಲ್ಲ," ಎಂದರು. ಅಂದು ನಾನು ಓಂಕಾರೇಶ್ವರದಲ್ಲಿ ಗೆಳೆಯರೊಡನೆ ಕುಳಿತಿದ್ದಾಗ, ಇದನ್ನೇ ಮೆಲುಕು ಹಾಕುತ್ತಿದ್ದೆ. ಏನಾಗಲಿ ಹೋಗಲಿ, ಗೆಳೆಯರಿದ್ದರೆ ಸಾಕು ಎಂದು ಹೊಳೆಯಿತು. ತಟ್ಟನೆ ಗೆಳೆಯರ ಗುಂಪಿನ ಯೋಜನೆ ಹೊರಟಿತು. ಮುಂದೆ ಇದು ಬೆಳೆಯಿತು, ಧಾರವಾಡದ ಸಾಹಿತ್ಯ ಚಟುವಟಿಕೆಗಳಿಗೆ ಕೇಂದ್ರವಾಯಿತು, 'ಜಯ ಕರ್ನಾಟಕ'ವನ್ನು ನಡೆಸಿತು, ಆಮೇಲೆ ಮುರಿಯಿತು. ಸಂಘಟನೆಗೆ ಬೇಕಾದ ಹಟ ನನ್ನಲ್ಲಿ ಇಲ್ಲದಿರುವುದು ಇದಕ್ಕೊಂದು ಕಾರಣವಾಗಿರಬಹುದು. ಆದರೆ ಈ ಗುಂಪಿನಲ್ಲಿ ಹಲವರು, ಈಗಲೂ ನನ್ನ ಗೆಳೆಯರಾಗಿ ಉಳಿದಿದ್ದಾರೆ. ಅಷ್ಟೇ ನನಗೆ ಸಾಕು.

ಕಾವ್ಯದ ಬಗ್ಗೆ ನನ್ನಲ್ಲಿ ಹೊಸ ಯಾವ 'ಥಿಯರಿ'- ಪ್ರಮೇಯವೂ ಇಲ್ಲ. ಇಂಥ ಕಾವ್ಯವೆ ಸರಿ, ಇಂಥದು ತಪ್ಪು ಎಂದು ನಾ ಹೇಳಲಾರೆ. ನಾನು ಹೇಳಿ ಕೇಳಿ 'ಮಾಸ್ತರ್'. ಮಾಸ್ತರ್ ಆದವನು, ಇದು ಹೀಗೆ ಇದು ಹಾಗೆ ಎಂದು ವಿವರಿಸುತ್ತಾನೆ ಹೊರತು, ಇದು ಮೇಲು ಇದು ಕೀಳು ಎಂದು ತೂಗಲು ಹೊರಟಿಲ್ಲ. ನವ್ಯ ಕಾವ್ಯದ ಬಗ್ಗೆ ನನ್ನ ದೃಷ್ಟಿಯೂ ಇದೇ. ಯಾವ ಕಾವ್ಯವೇ ಆಗಲಿ, ಕಾವ್ಯವಾಗಿದ್ದರೆ ಸರಿ ಎನ್ನುತ್ತೇನೆ. ಸಹಾನುಭೂತಿ, ಸ್ವಾನುಭೂತಿಗಳ ಮಿಶ್ರಣವೇ ನೈಜ ಕಾವ್ಯ ಎಂದು ನನ್ನ ಮಟ್ಟಿಗೆ ಹೇಳಬಲ್ಲೆ.

ಹಾಗೆಯೆ ನನ್ನ ಕಾವ್ಯಗಳಲ್ಲಿ ಅತಿ ಶ್ರೇಷ್ಠವಾದುದು ಯಾವುದು ಎಂದೂ ನಾನು ಹೇಳಲಾರೆ. ಹತ್ತು ಹದಿನೆಂಟು ಕವಿತೆಗಳನ್ನು ಆರಿಸಿ ಕೇಳಿದರೆ, ಇದು ಇದಕ್ಕಿಂತ ಒಳ್ಳೇದು ಎಂದು ವಿವರಿಸಬಹುದಷ್ಟೇ. ನಾನು ಬರೆದದ್ದರಲ್ಲಿ ಹಲವು ಕವಿತೆಗಳನ್ನು ಇಂದು ಪುನಃ ಓದುವಾಗ, ನಾನು ಮೊದಲಿನಷ್ಟೇ ಆನಂದದಿಂದ ಪುಲಕಿತನಾಗುತ್ತೇನೆ. ನಾನು ಬರೆದದ್ದೆಲ್ಲ ಶಾಶ್ವತ ಎಂದೂ ನಾನು ಸಾಧಿಸುವುದಿಲ್ಲ. ನನ್ನ ಎಲ್ಲ ಸಾಹಿತ್ಯ ನಷ್ಟವಾಗಿ ಹೋಗಿ, ಕೇವಲ ಎಂಟು ಹತ್ತು ಪಂಕ್ತಿ ಉಳಿದುಕೊಂಡು, ಅದರ ಕರ್ತನಾರೆಂಬುದು ಮರೆತು ಹೋದರೂ ಅಡ್ಡಿಯಿಲ್ಲ. ಅದನ್ನೋದಿದವರು ಹೊಂದುವ ಆನಂದ, ನನಗೆ ಸ್ವರ್ಗದಲ್ಲಿ ಮುಟ್ಟುತ್ತದೆಂದು ನಾನು ನಂಬಿದ್ದೇನೆ. ಅದು ಸಪ್ತ ಸ್ವರ್ಗಕ್ಕೂ ಹೆಚ್ಚು ತೂಕ. ●



# ಅಣ್ಣಾ ಅವರ ಪ್ರಾಣಿಪ್ರೀತಿ

• ಡಾ. ವಾಮನ ಬೇಂದ್ರೆ

ತಂದೆಯವರನ್ನು ಅಣ್ಣಾ ಎಂದೇ ನಾವು ಕರೆಯುತ್ತಿದ್ದೆವು. ಅಣ್ಣಾ ಅವರ ಪ್ರಾಣಿ ಪ್ರೀತಿ ಅತ್ಯಂತ ವಿಲಕ್ಷಣವಾಗಿತ್ತು. ಅಣ್ಣಾ ಅವರು ಏಳೆಂಟು ವರ್ಷದವರಿದ್ದಾಗ ಮನೆಯ ಅಂಗಳದಲ್ಲಿ, ಗಿಡದ ಬುಡಕ್ಕೆ, ಉಂಡಿ ತಿನ್ನುತ್ತ ಕುಳಿತಿದ್ದರಂತೆ. ಎಲ್ಲಿಂದಲೋ ಒಂದೆರಡು ಮಂಗಗಳು ಬಂದು, ಅವರ ಕೈಯಲ್ಲಿಯ ಉಂಡಿ ಕಸಿದುಕೊಳ್ಳಲು ಪ್ರಯತ್ನಿಸತೊಡಗಿದವು. ಮನೆಯ ಜನ ಅಂಜಿದರು. "ಅದಕ್ಕ ಉಂಡಿಕೊಟ್ಟು ಒಳಗೆ ಬಾ. ನಿನಗೆ ಬೇರೆ ಉಂಡಿ ಕೊಡತೇವಿ. ಅದು ಹೇಳೀ ಕೇಳೀ ಮಂಗ್ಯಾ. ನಿನ್ನನ್ನ ಪರಾಪರಾ ಚೂರಿಕೊಂಡಿತು," ಎಂದು ತಾಯಿ, ಅಜ್ಜಿ ಎಷ್ಟು ಕರೆದರೂ, ಅಣ್ಣಾ ಒಳಗೆ ಬರಲಿಲ್ಲ, ಅಂಜಲಿಲ್ಲ. ಆ ಎರಡೂ ಮಂಗಗಳನ್ನು ತಪ್ಪಿಸ್ಯಾಡುತ್ತ ಇಡೀ ಉಂಡಿ ತಾವೇ ತಿಂದರಂತೆ. ತಾಯಿ ಮಗನ ಈ ಪರಾಕ್ರಮ ಮೆಚ್ಚಿದಳು.

ಈ ಘಟನೆ ಅಣ್ಣಾ ಅವರಿಗೆ ೭೦ನೆಯ ವರ್ಷದ ಅನಂತರ ಮತ್ತೆ ಮತ್ತೆ ನೆನಪಾಗ ಹತ್ತಿತು. ಮಂಗಗಳಿಗೆ ಆಸೆ ತೋರಿಸಿ ಉಂಡಿ ತಿಂದಿದ್ದೇನೆ, ಈಗಲಾದರೂ ಮಂಗಗಳಿಗೆ ತಾನು ಏನಾದರೂ ಕೊಡಬೇಕು ಎಂಬ ವಿಚಾರ ಅವರಿಗೆ ಮತ್ತೆ ಮತ್ತೆ ಕಾಡುತ್ತಿರುವಾಗ, ಒಂದು ಮಂಗ ಪ್ರತಿದಿವಸ, ನಮ್ಮ ಈಗಿನ ಮನೆಯಾದ ಶ್ರೀಮಾತಾಕ್ಕೆ ಬಂದು ಅಣ್ಣಾ ಅವರು ತನಗೆ ಏನಾದರೂ ತಿನ್ನಲು ಕೊಡಬೇಕು ಎಂದು ಅಪೇಕ್ಷಿಸತೊಡಗಿತು. ಇದರಿಂದ ಖುಷಿ ಆದ ಅಣ್ಣಾ, ಪ್ರತಿದಿವಸ ಅದಕ್ಕೇನಾದರು ತಿನ್ನಲು ತಮ್ಮ ಕೈಯಿಂದ ಉಣಿಸುತ್ತಿದ್ದರು. ಏಳೆಂಟು ದಿವಸ ಅಣ್ಣಾ ಅವರ ಕಡೆಯಿಂದ ಅನೇಕ ಖಾದ್ಯ ಪದಾರ್ಥ ತಿಂದ ಮಂಗ, ಮುಂದೆ ಬರಲೇ ಇಲ್ಲ. ಅಣ್ಣಾ ಅವರಿಗೆ ಋಣಮುಕ್ತರಾದ ಸಮಾಧಾನವೂ ಲಭಿಸಿತು.

೧೯೭೨ರಲ್ಲಿ ಅಣ್ಣಾ ಅವರನ್ನು ಕುರಿತು ಸಾಕ್ಷಿ ಚಿತ್ರವನ್ನು ತಯಾರಿಸುವ ಸಂದರ್ಭದಲ್ಲಿ ಸಾಧನಕೇರಿಯ ದಂಡೆಯ ಮೇಲೆ ಚಿತ್ರೀಕರಣ ನಡೆದಿತ್ತು. ಒಮ್ಮೆಲೆ ಆ ಹಳೆಯ ಮಂಗ ಅಲ್ಲಿಗೆ ಬಂದು, ಅಣ್ಣಾ ಅವರಿಂದ ಬಿಸ್ಕೀಟು ಪಡೆದು ತೃಪ್ತವಾಯಿತು.

ಅಣ್ಣಾ ಅವರ ತಾಯಿ ಮತ್ತು ಅಜ್ಜಿಗೆ ಬೆಕ್ಕಿನ ಮೇಲೆ ಬಹಳ ಪ್ರೀತಿ. ಅವರು ಸಾಕಿದ ಒಂದು ಬೆಕ್ಕಿಗೆ ಏಕಾದಶಿ ಸರಿಯಾಗಿ ತಿಳಿಯುತ್ತಿತ್ತಂತೆ. ಆ

ದಿವಸ ಅದು ಬೆಳಗಿನಿಂದ ಉಪವಾಸ ಪ್ರಾರಂಭಿಸುತ್ತಿತ್ತು. ಯಾವ ದಿವಸ ಅದು ಬೆಳಗ್ಗೆ ಹಾಲು ಕುಡಿಯುವದಿಲ್ಲ, ಆ ದಿವಸ ಪಂಚಾಂಗ ತೆಗೆದು ನೋಡಿದರೆ, ಏಕಾದಶಿ ಇರುತ್ತಿತ್ತಂತೆ. ಹೀಗಾಗಿ ಏಕಾದಶಿ ಮಾಡುವ ಬೆಕ್ಕು ಮನೆಯಲ್ಲಿ ಎಲ್ಲರಿಗೂ ಪ್ರಿಯವಾಗಿತ್ತು. ಅಣ್ಣಾ ಮತ್ತು ಅವರ ತಾಯಿ ಯಾವುದೋ ಊರಿಗೆ ಹೋದಾಗ, ಈ ಬೆಕ್ಕು ಸತ್ತಿತು. ಈ ಸಮಾಚಾರವನ್ನು ಓಣಿ'ಯ ಒಬ್ಬ ಹುಡುಗ ಬಸ್‌ಸ್ಟ್ಯಾಂಡಿಗೆ ಬಂದು ತಿಳಿಸಿದನಂತೆ. ಆಗ ಅವರ ತಾಯಿ ಅತ್ತಷ್ಟು, ಅಣ್ಣಾ ಎಂದೂ ನೋಡಿರಲಿಲ್ಲವಂತೆ.

ನಾವು ಸೋಲ್ಲಾಪುರದಲ್ಲಿರುವಾಗ ತಾಯಿ-ಮಗಳು-ಮೊಮ್ಮಕ್ಕಳು ಮೊದಲಾಗಿ ಮೂರು ತಲೆಮಾರಿನ ಬೆಕ್ಕುಗಳು ನಮ್ಮ ಮನೆಯಲ್ಲಿದ್ದವು. ಅವು ಸಾಮಾನ್ಯವಾಗಿ ಅಣ್ಣಾ ಅವರ ಪುಸ್ತಕದ ಕೋಣೆಯಲ್ಲಿಯೇ ವಾಸ ಮಾಡುತ್ತಿದ್ದವು. ಎಲ್ಲಕ್ಕೂ ಹಿರಿಯ ಬೆಕ್ಕು, ಅಣ್ಣಾ ಅವರೊಂದಿಗೆ ಊಟ ಮಾಡುವ ಪದ್ಧತಿಯನ್ನು ಇಟ್ಟುಕೊಂಡಿತ್ತು. ಇದನ್ನು ನೋಡಿ ಆಶ್ಚರ್ಯಗೊಂಡ ಅಣ್ಣಾ ಅವರ ಶಕ್ಕಿ "ಈ ಬೆಕ್ಕು ನಿನ್ನ ಪೂರ್ವ ಜನ್ಮದ ಹೆಂಡತಿಯೇ ಇರಬೇಕು. ನಮ್ಮೆಲ್ಲರಿಂದ ಗೌರವದ ಸೇವೆ ಪಡಿಯೋ ರೀತಿ ನೋಡಿರಿ," ಎಂದು ಹೇಳಿ ಸಂತಸ ಪಡುತ್ತಿದ್ದರು. ಈ ಬೆಕ್ಕು ಪ್ರತಿ ದಿವಸ ರಾತ್ರಿ ಧ್ಯಾನ ಮಾಡುತ್ತದೆ. ಅದು ಉಸಿರಾಟ ಮಾಡುವ ರೀತಿ ತೀರಾ ಬೇರೆ ಎಂದು ಅಣ್ಣಾ ಕಂಡಿದ್ದರು. ಒಂದು ದಿವಸ, ನಮ್ಮ ಮನೆಗೆ ಪ್ರಭಾಕರ ಮಹಾರಾಜರು ಬಂದಾಗ, ಆ ಬೆಕ್ಕು ತನ್ನೆಲ್ಲ ಮರಿಗಳನ್ನು ಕರೆದು ಅವು ಅವರ ಪಾದಕ್ಕೆ ನಮಸ್ಕರಿಸುವಂತೆ ಮಾಡಿತು. ಇದನ್ನು ಕಂಡ ದಿವಸ, ನಮಗೆಲ್ಲ ಆ ಬೆಕ್ಕಿನ ಶ್ರೇಷ್ಠತೆ ಒಪ್ಪಿಗೆಯಾಯಿತು. ಈ ಬೆಕ್ಕು, ತನ್ನ ಎರಡು ಮೂರು ಬೆಕ್ಕುಗಳೊಂದಿಗೆ ಕೂಡಿಕೊಂಡು ನಾಯಿಯ ಮೇಲೆ ದಾಳಿ ಮಾಡಿ ಅವುಗಳನ್ನು ಓಡಿಸಿ ತನ್ನ ಮೊಮ್ಮಕ್ಕಳನ್ನು ನಡುದಾರಿಯಲ್ಲಿ ಆಡಿಸುತ್ತ ಕೂಡುತ್ತಿತ್ತು. ಇದನ್ನು ಕಂಡ ಪ್ರಭಾಕರ ಮಹಾರಾಜ ಅವರು, ಈ ಬೆಕ್ಕಿಗೆ 'ಝಾಂಸಿ ರಾಣಿ'' ಎಂದೇ ಕರೆಯುತ್ತಿದ್ದರು.

ಸಾಧನಕೇರಿಯ ನಮ್ಮ ಮನೆಯ ಸುತ್ತು ಸಾಕಷ್ಟು ಗಿಡಗಳು. ಸುತ್ತಾಡುತ್ತ ಪುಸ್ತಕ ಓದುವುದು ಅಣ್ಣಾ ಅವರ ರೂಢಿ. ಒಂದು ದಿವಸ ಒಂದು ಇಣಚಿ (ಅಳಿಲು) ಗಿಡದ ಮೇಲಿಂದ ದೊಪ್ಪೆಂದು ಬಿದ್ದಿತು. ಅದಕ್ಕೆ ಸರದಾಡಲೂ ಆಗುತ್ತಿರಲಿಲ್ಲ. ಎಲ್ಲಿಯೋ ಬಹಳ ಪೆಟ್ಟು ಕೂತಿತ್ತು, ಆಗ ಅಣ್ಣಾ ಅದನ್ನು ಎತ್ತಿಕೊಂಡು ಅದರ ಮೈ ಸವರುತ್ತ ಅದನ್ನು ಮನೆಯ ಎದುರಿಗಿನ ಶಿವಾಲಯಕ್ಕೆ ಒಯ್ದರು. ಅಲ್ಲಿಯ ಗಿಡದ ಮೇಲೆ ಈ ಇಣಚಿ ಸುರಕ್ಷಿತವಾಗಿ ಇರಲು ಸಾಧ್ಯ ಎಂದು ಅಣ್ಣಾ ಅವರ ಭಾವನೆ. ಆ ಪ್ರಕಾರ ಅಣ್ಣಾ ಆ ಇಣಚಿಯನ್ನು ಒಂದು ಗಿಡದ ಮೇಲೆ ಇಡುವಷ್ಟರಲ್ಲಿ ನಾವು ಸಾಕಿದ ನಾಯಿ, ಚಂಗನೆ ಹಾರಿ, ಆ ಇಣಚಿಯನ್ನು ತಿಂದು ಬಿಟ್ಟಿತು. ಇದರಿಂದ ಅಣ್ಣಾ ಅವರಿಗಾದ ದುಃಖ ಅಪಾರ. ಇಣಚಿಯ ಮರಣಕ್ಕೆ ತಾವೇ ಕಾರಣವಾದಂತೆ ಆಯಿತಲ್ಲಾ ಎಂದು ಸಿಟ್ಟಿಗೆದ್ದು, ನಮ್ಮ ನಾಯಿಯ ಮೇಲೆ ಒದಿರ್‍ಯಾಡಿದರು. ನಾಯಿಯ ಮೇಲೆ ಒದಿರ್‍ಯಾಡಿ ಏನು ಲಾಭ! ಅದಕ್ಕೆ ಚೆನ್ನಾಗಿ ಎರಡು ಒದೆಯಬೇಕು ಎಂದು ನಮ್ಮ ಭಾವನೆ. ಆದರೆ ಅಣ್ಣಾ ಅವರ ರೀತಿಯೇ ಬೇರೆ. "ಅದೂ ಒಂದು ಜೀವ. ನನ್ನ ಬೈಗುಳ ಅದಕ್ಕೆ ತಿಳಿಯದೇ ಇರುವುದು ಸಾಧ್ಯವೇ ಇಲ್ಲ" ಎಂದು ಹೇಳಿ ಅದು ಮಾಡಿದ ತಪ್ಪು ಅದಕ್ಕೆ ತಿಳಿಯುವಂತೆ ಬೈದರು. ಆಗ ಆ ನಾಯಿ ಸ್ವಲ್ಪ ವೇಳೆಯ ಆನಂತರದಲ್ಲಿ ಅಣ್ಣಾ ಅವರ ಕಾಲ ಮೇಲೆ ಬಿದ್ದು ಕ್ಷಮೆ ಕೇಳುವಂತೆ ಹೊರಳಾಡಿತು.

೧೯೫೮ರಲ್ಲಿ ನಾವು ಒಂದು ನಾಯಿ ಸಾಕಿ

## 'ಬಣ್ಣದ ಕಾವ್ಯ'

ಬೇಂದ್ರೆಯವರ ಕಾವ್ಯದೃಷ್ಟಿ ತೀವ್ರವಾದುದು. ಶ್ರೇಷ್ಠ ವರ್ಗದ್ದು; ವಿಲಕ್ಷಣವಾದುದು ಜೊತೆಗೆ ಅವರ ಜೀವನ ಅವರಿಗೆ ತೀವ್ರವಾದ, ಶ್ರೇಷ್ಠವಾದ, ವಿಲಕ್ಷಣವಾದ ಅನುಭವವನ್ನು ತಂದಿದೆ. ಇದರಿಂದ ಅವರ ಕೃತಿಯಲ್ಲಿ ಇದೇ ಲಕ್ಷಣಗಳು ಮೂಡಿವೆ; ಅವರ ಕಾವ್ಯದ ಬಣ್ಣ ಲೋಕದ ಅತ್ಯುತ್ತಮ ಕಾವ್ಯದ ಬಣ್ಣವಾಗಿದೆ.

● 'ಶ್ರೀನಿವಾಸ'

ದ್ದೆವು. ಕೆಲವು ವರ್ಷಗಳಾದ ಮೇಲೆ ಅದಕ್ಕೆ ಕೋಳಿಹಿಡಿದು ತಿನ್ನುವ ರುಚಿ ಹತ್ತಿತು. ಇದರಿಂದ ಸಿಟ್ಟಿಗೆದ್ದ ಕೋಳಿಯ ಮಾಲಿಕರು, ಒಂದು ರೊಟ್ಟಿಯಲ್ಲಿ ಹಾಜಿನ ಪುಡಿ ಕಲಿಸಿ ನಮ್ಮ ನಾಯಿಗೆ ತಿನಿಸಿದ್ದರು. ಈ ಎಲ್ಲ ಸುದ್ದಿ, ನಾಯಿ ಸತ್ತಮೇಲೆ ನಾವು ನಡೆಸಿದ ತನಿಖೆಯಲ್ಲಿ ತಿಳಿದು ಬಂದ ವಿಷಯ.

ರಾತ್ರಿ ಎರಡು ಗಂಟೆ. ನಾಯಿ, ಅಣ್ಣಾ ಅವರು ಮಲಗುವ ಕೋಣೆಯ ಬಾಗಿಲನ್ನು ಬಡೆದು ಅಣ್ಣಾ ಅವರನ್ನು ಎಬ್ಬಿಸಿತು. ಅವರ ಕಾಲ ಮೇಲೆ ಬಿದ್ದು ನರಳುತ್ತ, ಹೊರಳಾಡುತ್ತ ತನಗೆ ಹೊಟ್ಟೆಯಲ್ಲಿ ಅತ್ಯಂತ ವ್ಯಥೆಯಾಗುತ್ತಿದೆ ಎಂದು ಸೂಚಿಸತೊಡಗಿತು. ಆಗ ಅಣ್ಣಾ ನಮ್ಮನ್ನೆಲ್ಲ ಎಬ್ಬಿಸಿದರು. ಆ ನಾಯಿಯನ್ನು ತಮ್ಮ ತೊಡೆಯ ಮೇಲೆ ಮಲಗಿಸಿಕೊಂಡರು. ಅದಕ್ಕೆ ನೋವು ಎಲ್ಲಿದೆ ಎಂದು ಅದು ಸೂಚಿಸುತ್ತಿತ್ತೋ, ಆ ಭಾಗವನ್ನು ಮೃದುವಾಗಿ ತಿಕ್ಕಿದರು. ಅದಕ್ಕೆ ಅಯೋಡೆಕ್ಸ್ ಹಚ್ಚಿ ಬಿಸಿನೀರಿನಿಂದ ಕಾಸಲು ನಮಗೆ ಹೇಳಿದರು. ಈ ಎಲ್ಲ ಕ್ರಿಯೆಯಿಂದ ಆ ನಾಯಿಗೆ ಸ್ವಲ್ಪ ಆರಾಮ ಆಗಿ, ಅದು ಮಲಗಿತು. ಚೆನ್ನಾಗಿ ಗೊರಕೆ ಹೊಡೆಯಲು ಪ್ರಾರಂಭ ಮಾಡಿತು. ಆಗ ನಾವೆಲ್ಲ ಮತ್ತೆ ನಿದ್ದೆಗೆ ಹೋದೆವು. ಬೆಳಗು ಎದ್ದು ನೋಡುವಷ್ಟರಲ್ಲಿ ನಾಯಿ ಸತ್ತಿತ್ತು. ಅದನ್ನು ನಮ್ಮ ಮಾವಿನ ಗಿಡದ ಅಡಿಯಲ್ಲಿ ಹೂಳಿದೆವು. ಇನ್ನೊಂದು ನಾಯಿಯ ಕ್ಯಾನ್ಸರ್ ಆಪರೇಶನ್ ಮಾಡಿಸಿ ೮-೧೦ ದಿವಸ ಆಸ್ಪತ್ರೆಯಲ್ಲಿಟ್ಟು ಉಪಚಾರ ಮಾಡಿಸಿದೆವು. ಇದೇ ರೀತಿ ಅಣ್ಣಾ ಸಾಕಿದ ಒಂದೊಂದು ಪ್ರಾಣಿಯ ಜೀವನ ಕಥೆ ಮತ್ತು ವ್ಯಥೆ ಅವರ ಸಹಜೀವಿಗಳಾದ ನಮ್ಮ ಜೀವನದಲ್ಲಿ ವಿಶಿಷ್ಟ ಸ್ಥಾನ ಪಡೆದಿದೆ.

ಒಂದು ಮಂಗಳವಾರ ಸಂತೆಯ ದಿವಸ, ಕಡು ಬಡವನೊಬ್ಬ ಅಣ್ಣಾ ಅವರಿಗೆ ತನ್ನ ಬಡತನದ ಬೇಗೆಯನ್ನು ವಿವರಿಸಿದ. ಅವರಿಗೆ ಸಾಧ್ಯವಿದ್ದಷ್ಟು ಅವನಿಗೆ ಸಹಾಯ ಮಾಡಿದರು. "ನನ್ನ ಜೀವನದ ಕಷ್ಟಕ್ಕಿಂತ ನಾನು ಸಾಕಿದ ಈ ಚಿಗರೆಯನ್ನು ಸಾಕಲಾರೆನಲ್ಲ ಎಂಬ ನೋವು ನನಗಿದೆ" ಎಂದು ಆ ಬಡವ ಹೇಳಿದ್ದರಿಂದ, ಅಣ್ಣಾ ಅವರು ಆ ಚಿಗರೆಯನ್ನು ಸಾಕಲು ಅವನಿಂದ ಪಡೆದರು. ಮರುದಿವಸವೆ ಆ ಚಿಗುರೆ ಸತ್ತು ಹೋಯಿತು.

"ಚಿಗುರೆ ಬಂತು ಚಿಗುರೆ ಹೋಯ್ತು
ಬೀಸು ಗಾಳಿ ಸುಳಿಯೊಲು
ಆಹಾ ಎನಿಸಿ, ಅಯ್ಯೋ ಅನಿಸಿ
ಇತ್ತೋ ಇಲ್ಲೋ ಎನುವೊಲು"
(-'ನಾದಲೀಲೆ' ಪುಟ ೨೬)

ಅಣ್ಣಾ ಅವರ ಜೀವನದಲ್ಲಿ ವ್ಯಥೆ ಅಚ್ಚೊತ್ತಿ ನಿಂತಿತು. ಅದನ್ನು ಕುರಿತು 'ಚಿಗುರೆ' ಎಂಬ ಕವನ ರಚಿಸಿದರು. "ಕರಡಿ, ಗಿಳಿ, ಮಂಗ, ನಾಯಿ, ಆಳಿಲು ಇವೇ ಮೊದಲಾದ ಸತ್ವಗಳು ನನ್ನ ಜೀವನದಲ್ಲಿ ಬಂದು ಸ್ನೇಹ ಸಂಬಂಧದಿಂದ ಎಚ್ಚರಗೊಟ್ಟು ಹೋಗಿವೆ. ಚಿಗುರೆ ಹಾಗೆ ನೋಡಿದರೆ, ಅದೇನದು ? ಆದರೆ ಅಂತಃಕರಣವನ್ನು ತಟ್ಟಿದಾಗ ಸಿಕಂದರಾಬಾದದಲ್ಲಿರುವಾಗ ಮನೆಯಲ್ಲಿ ಸಾಕಿದ ಗಿಳಿಯೊಂದಿಗೆ ಸಾಕಷ್ಟು ಚೆಲ್ಲಾಟ ಮಾಡಿದ್ದರು. ಧಾರವಾಡದ ಗಣಪತಿಯ ಗುಡಿಯಲ್ಲಿ ಅಣ್ಣಾ ಇರುವಾಗ, ಸಂಪ್ರದಾಯಸ್ಥರು ತಾವು ಸಾಕಿದ ನಾಯಿಯನ್ನು, ನಾಯಿಯ ಮರಿಯನ್ನು ಹೇಗೆ ದೂರ ಇಡುತ್ತಿದ್ದರು ಎಂಬುದನ್ನು ಕಂಡಿದ್ದರು. ಹೀಗಾಗಿ ಅಣ್ಣಾ ಅವರ ಕಾವ್ಯ ರಚನೆಯಲ್ಲಿ ಹಕ್ಕಿ, ನವಿಲು, ಗಿಳಿ, ಬೆಕ್ಕು, ಮಂಗ, ಕತ್ತೆ, ಇಲಿ, ಕರಡಿ ಮೊದಲಾದ ಪಶು, ಪಕ್ಷಿ, ಪ್ರಾಣಿಗಳು ಉಪಮೆ, ರೂಪಕಗಳಾಗಿ ಮನೋಜ್ಞವಾದ ಸ್ಥಾನವನ್ನು ಪಡೆದಿವೆ.

'ಸಿಂಹಮುಖಕ್ಕಿದೆ ನವಿಲಿನ ಸೋಗೆ,' 'ಪಾರಿವಾಳ, ಸಿಂಹ, ಬಂಟ' ಈ ಕವನಗಳ ಮೂಲಕ ಅಣ್ಣಾ ಅವರ ಸ್ವಪ್ನಲೋಕದಲ್ಲಿ ಪ್ರಾಣಿಗಳಿಗೆ ಇರುವ ಪ್ರಾಶಸ್ತ್ಯ ವ್ಯಕ್ತವಾಗಿದೆ.

ಅಣ್ಣಾ ಅವರು ಪ್ರಾಣಿಗಳನ್ನು ಪ್ರೀತಿಸುತ್ತಿದ್ದರು ಎನ್ನುವುದಕ್ಕಿಂತ ಮೇಲಾಗಿ, ಆ ಪ್ರಾಣಿಗಳ ಜೀವಾತ್ಮ ಸ್ಪಂದನಕ್ಕೆ ತಮ್ಮ ಅಂತರಂಗವನ್ನು ಶ್ರುತಿಗೊಳಿಸಿಕೊಳ್ಳುತ್ತಿದ್ದರು. ಹೀಗಾಗಿ ನಾವು ಆ ಪ್ರಾಣಿಗಳನ್ನು ದಂಡಿಸುವಂತಿಲ್ಲ. ಅಣ್ಣಾ ಅವರ ಪುಸ್ತಕಗಳಿಗೆ ಯಾರೂ ಕೈ ಹಚ್ಚುವಂತಿಲ್ಲ: ಆದರೆ ಬೆಕ್ಕು, ಬೆಕ್ಕಿನ ಮರಿಗಳು ಪುಸ್ತಕದ ಮೇಲೆ ಕುಳಿತದ್ದು ಅವರಿಗೆ ನಡೆಯುತ್ತಿತ್ತು! ಪ್ರಾಣಿಗಳಿಗೆ ಎತ್ತಿ ಮುದ್ದಾಡುವುದು ಅಣ್ಣಾ ಅವರ ಸ್ವಭಾವವಲ್ಲ. ಆದರೆ ಋತುಮಾನಕ್ಕೆ ತಕ್ಕಂತೆ ಪ್ರಾಣಿಗಳ



ಆಹಾರ, ವಿಹಾರ, ಆರೋಗ್ಯ ಕುರಿತು ಅಚ್ಚುಕಟ್ಟಾದ ವ್ಯವಸ್ಥೆ ಮಾಡಲು ನಮಗೆ ಕಟ್ಟಪ್ಪಣೆ ವಿಧಿಸುತ್ತಿದ್ದರು.

'ಕೋಗಿಲೆ'ಯನ್ನು ಕುರಿತು ಅಣ್ಣಾ ಅವರು ೧೯೬೮ರಲ್ಲಿ ಒಂದು ಮತ್ತು ೧೯೭೩ರಲ್ಲಿ ಇನ್ನೊಂದು ಕವನವನ್ನು ರಚಿಸಿದ್ದಾರೆ. ಕೋಗಿಲೆಯ ಕೂಗು ವಸಂತ ಋತುವಿನ ಆಗಮನದ ಸಂಕೇತ. "ನನ್ನ ಕನ್ನಡನಾಡ ಚೆನ್ನರೇಳುವಂತೆ, ಕೂಗುವೆಯಾ ಹೇಳು ಕೋಗಿಲೆ" ಎಂದು ಕೇಳುವಲ್ಲಿ, ಅಣ್ಣಾ ಅವರು, ಕಾವ್ಯಮಾರ್ಗದಲ್ಲಿ ಒಂದು ಹೊಸತನವನ್ನು ಅಪೇಕ್ಷಿಸುತ್ತಿದ್ದರು ಎಂಬುದು ಧ್ವನಿತವಾಗಿದೆ.

ಅಣ್ಣಾ ಅವರು ನವಿಲು, ಚಿಗುರೆ, ಕೋಗಿಲೆ, ಕರಿಮರಿ ನಾಯಿ, ಪಾತರಗಿತ್ತಿ ಪಕ್ಕಾ, ಕರಡಿ ಕುಣಿತ, ಬೀದಿ ನಾಯಿ ರಾಧೆಗೆ, ಚಿಟಗುಬ್ಬಿ ಚಿಂವ್ರು ಚಿಂವ್ರು, ಇಲಿ ಮತ್ತು ಕತ್ತೆಯ ಸತ್ ಸ್ವರೂಪ ಎಂಬ ಹತ್ತೇ ಕವನಗಳನ್ನು ಬರೆದಿದ್ದಾರೆ. ಈ ಎಲ್ಲ ಕವನಗಳ ಅತ್ಯಂತ ಜನಪ್ರಿಯವಾಗಿದ್ದುದು ಇವುಗಳ ಹೆಗ್ಗಳಿಕೆ.

ಸೊಲ್ಲಾಪುರದಲ್ಲಿ, ನಾವಿರುವ ನೀಲಾನಗರದಲ್ಲಿ ವಿಪುಲವಾಗಿ ನಾಯಿಗಳಿದ್ದವು. ಆ ನಾಯಿಗಳು ಯಾರೂ ಸಾಕಿದ ನಾಯಿಗಳಲ್ಲ. ಹೀಗಾಗಿ ಅವುಗಳ ಮಿತಿಮೀರಿದ ಸಂಸಾರ ಮತ್ತು ಅವುಗಳ ಕಷ್ಟವನ್ನು ಕಣ್ಣಾರೆ ಕಂಡು ಅಣ್ಣಾ ಅವರು, ಬೀದಿ ನಾಯಿಯನ್ನು ರಾಧೆಗೆ ಹೋಲಿಸಿ ನಾಯಿಯ ಜೀವನ ವ್ಯಥೆಯನ್ನು ಕವನದಲ್ಲಿ ರೂಪಿಸಿದರು.

ಧಾರವಾಡದಿಂದ ದಿಲ್ಲಿಗೆ ಪ್ರವಾಸ ಮಾಡುವಾಗ, ಅಣ್ಣಾ ಅವರು ಪ್ರಥಮ ದರ್ಜೆಯ ಡಬ್ಬಿಯಲ್ಲಿ ಪ್ರವಾಸ ಮಾಡುತ್ತಿದ್ದರು. ಆ ಡಬ್ಬಿಯಲ್ಲಿ ಒಬ್ಬರೇ ಇದ್ದುದರಿಂದ ಅದರ ಬಾಗಿಲುಗಳನ್ನು ಭದ್ರವಾಗಿ ಮುಚ್ಚಿ ರಾತ್ರಿಯ ಸಮಯ ನಿದ್ದೆ ಹೋದರು. ಮಧ್ಯರಾತ್ರಿ ಏನೋ ಸಪ್ಪಳವಾಗಿ

ಎಚ್ಚರವಾದಾಗ, ಬಾಗಿಲ ಹತ್ತಿರ ಒಂದು ಕರಡಿ ಕೂತದ್ದು ಕಂಡಿತು. ಅದು ಒಳಗೆ ಬಂದದ್ದು ಹೇಗೆ ? ಮುಂದಿನ ನಿಲ್ದಾಣಕ್ಕೆ ಗಾಡಿ ನಿಂತಾಗ, ಏನಾದರೂ ಮಾಡಿ ಕರಡಿಯನ್ನು ಹೊರಗೆ ಹಾಕ ಬೇಕು ಎನ್ನುವಷ್ಟರಲ್ಲಿ, ನಿಲ್ದಾಣ ಬಂದು ಬಿಟ್ಟಿತು. ಕರಡಿ ಕೆಳಗೆ ಇಳಿದು ಹೋದಂತೆ ಕಂಡಿತು. ಆಗ ಅಣ್ಣಾ ನಿಲ್ದಾಣಕ್ಕೆ ಇಳಿದು ನೋಡಿದರೆ, ಅಲ್ಲಿ ಕರಡಿ ಕಾಣಲೇ ಇಲ್ಲ! ಆಗ "ಯಾವುದೋ ಒಂದು ಅಪಘಾತವಾಗಿ, ಸತ್ತವನು ಕರಡಿಯಾಗಿ ತನಗೆ ಕಂಡಿರಲು ಸಾಕು. ಕರಡಿ ಜನ್ಮದಿಂದ ಆ ಆತ್ಮವನ್ನು ಮುಕ್ತಗೊಳಿಸಲು ಕರಡಿಯನ್ನು ಕುರಿತು ಒಂದು ಕವನ ರಚಿಸಬೇಕು" ಎಂದು ಅಣ್ಣಾ ನಿರ್ಣಯಿಸಿ ದರು. ಪ್ರವಾಸದಲ್ಲಿಯ 'ಕರಡಿ ಕುಣಿತ' ಕವನದ ಸೃಷ್ಟಿ ಆಯಿತು.

ಅಣ್ಣಾ ಅವರ ಪ್ರಾಣಿ ಪ್ರೀತಿ, ಪ್ರಮುಖವಾಗಿ ದೈಹಿಕವಾದದ್ದಲ್ಲ, ಅದು ಉನ್ನನದ ರೀತಿಯದು. ಮನ ಮತ್ತು ಬುದ್ಧಿಗಳ ಸಂಯೋಗವಾಗಬೇಕು. ಇದರಿಂದ ಹೃದಯ ವಿವೇಕವು ಜಾಗೃತವಾಗಿ ಮಾನವನು ಉನ್ಮನೋಲೋಕಕ್ಕೆ ತಲಪುತ್ತಾನೆ. ಈ ಲೋಕವನ್ನು ತಲುಪಬಲ್ಲ ಮಾನವನಿಗೆ ಮಾತ್ರ, ಸತ್ಯವು ತನ್ನ ನಿಜವಾದ ರೂಪವನ್ನು ತೋರಿಸು ತ್ತದೆ. ಈ ಸತ್ಯವನ್ನು ಅರಿಯಲು, ಕಾವ್ಯೋದ್ಯೋಗ ಕಲೆ, ಒಂದು ಹಾದಿ. ಈ ಪಥದ ಯಾತ್ರಿಕರು ಅಂಬಿಕಾತನಯದತ್ತರು. ಹೀಗಾಗಿ ಯಾವುದೇ ಪ್ರಾಣಿಯನ್ನು ಅಣ್ಣಾ ನೋಡಿ, ಆ ಪ್ರಾಣಿಯ ಪ್ರಮುಖ ಗುಣ (ನವಿಲಿನ ಕುಣಿತ- ಆನಂದದ ಪ್ರತೀಕ; ಕರಡಿಯ ಕುಣಿತ- ದಾಸ್ಯದ ಪ್ರತೀಕ; ಸಿಂಹದ ಗಾಂಭೀರ್ಯ- ಧೈರ್ಯದ ಸಂಕೇತ; ಗುಬ್ಬಿಯ ಚಿಂವು ಚಿಂವು- ನಿಷ್ಕ್ರಿಯತೆಯ ಪ್ರತೀಕ) ಅಣ್ಣಾ ಅವರ ಮನಸ್ಸಿನ ಮೇಲೆ ಪರಿಣಾಮ ಮಾಡುತ್ತಿದ್ದವು. ಎಂಬತ್ತು ನಾಲ್ಕು ಲಕ್ಷ ಯೋನಿ ಯನ್ನು ದಾಟಿ ಒಮ್ಮೆ ಮಾನವ ಜನ್ಮ ಲಭಿಸುತ್ತದೆ ಎಂಬುದು ಭಾರತೀಯ ಶ್ರದ್ಧೆ. ಅಚ್ಚ ಭಾರತೀಯ ರಾದ ಅಣ್ಣಾ, ತನ್ನ ಮನವನ್ನು ತಟ್ಟಿದ ಪ್ರಾಣಿಗಳ ಮೇಲೆ ಒಂದೊಂದು ಕವನವನ್ನು ನಿರ್ಮಿಸಿ, ಆ ಪ್ರಾಣಿಗಳನ್ನು ಆ ಹೀನ ಜನ್ಮದಿಂದ ಮುಕ್ತಗೊಳಿಸಿ, ಅವುಗಳ ಉತ್ತಮ ಜನ್ಮಕ್ಕೆ ಹಾದಿ ಮಾಡಿಕೊಡ ಬೇಕು ಎಂದು ಬಯಸುತ್ತಿದ್ದರು. ಮಾನವನಲ್ಲಿಯ ಪಶುತ್ವದ ಲೋಪವಾಗಬೇಕಾದರೆ, ಅವನ ಬುದ್ಧಿ ಬದಲಾಗಬೇಕು ಎಂಬುದು ಅಣ್ಣಾ ಅವರಲ್ಲಿ ಅಡಗಿದ ಕವಿಯ ಆಶೆ. ಹೀಗಾಗಿ ಅಣ್ಣಾ ಅವರು, ಸ್ವಪ್ರಯತ್ನದಿಂದ ಕವಿತೆಗಳನ್ನು ರಚಿಸುವುದನ್ನು ಬಿಟ್ಟು; ಕವಿತೆಯೇ ತನ್ನ ರೂಪವನ್ನು ಪ್ರಕಟಗೊ ಳಿಸಲಿ ಎಂದು ಅಪೇಕ್ಷಿಸುತ್ತಿದ್ದರು. "ನಾ ಬರಿ ಸೂಲಗಿತ್ತಿ" "ಕವನ ವೇಷವ ತೊಟ್ಟಿತು" ಎಂಬ ಅನುಭವ ಅಣ್ಣಾ ಅವರದಾಗುತ್ತಿತ್ತು.

"ಹಿಟ್ಲರನೂ ಸತ್ತರೇನು,
ಪೋಲ್ಯಾಂಡು ಅತ್ತರೇನು,
ಸ್ವಾತಂತ್ರ್ಯವನಿತ್ತರೇನು,
ಯಾವ ದೇಶಕೆ ವಿಜಯ ಘೋಷಕೆ ?
ಚಿಟಗುಬ್ಬಿ ಚಿಂವು ಚಿಂವು...."

ಮತ್ತು "ಕರಡಿ ಕುಣಿತಕ್ಕಿಂತ ನರರ ಬುದ್ಧಿಯ ಕುಣಿತ ಮಿಗಿಲಹುದು ಕವಿ ಕಂಡು ನುಡಿದಾನ" ಎಂಬುದಾಗಿ ಕವನ ಮುಕ್ತಾಯಗೊ ಳ್ಳುವಿಕೆ, ಇವು ಅಣ್ಣಾ ಅವರ ಪ್ರಾಣಿ ಪ್ರೀತಿಯ ರೀತಿಯನ್ನು ಸ್ಪಷ್ಟಪಡಿಸುತ್ತವೆ. ಎರಡೂ ಕವನಗ ಳಲ್ಲಿ ನವಯುಗ ಮತ್ತು ನವಮಾನವತೆ ಬರಲಿ ಎಂಬ ಆಶಯವು ಅಡಗಿದೆ. ●

('ಬೇಂದ್ರೆ ಜೀವನ ದರ್ಶನ'ದಿಂದ)

## ಮನುಷ್ಯರ ಪೊರೆ

ಹಾವಿನಂತೆ ನಾವೂ ಪೊರೆ ಬಿಡುತ್ತೇವೆ. ಆದರೆ ಹಾವು ಒಮ್ಮೆಗೇ ತನ್ನ ಪ್ರತಿರೂಪದಂತೆ ಇರುವ ಪೊರೆ ಕಳಚಿದರೆ ನಾವು ನಿತ್ಯವೂ ಪೊರೆ ಕಳಚಿಕೊಳ್ಳುತ್ತೇವೆ. ಸುತ್ತ ಮತ್ತು ಅರೆಜೀವವಾದ ಜೀವಕೋಶಗಳನ್ನು ಹೊರಹಾಕಲು ಶರೀರ ಈ ಮಾರ್ಗವನ್ನು ಕಂಡುಕೊಂಡಿದೆ. ಪ್ರತಿ ೨೮ ದಿನಗಳಿಗೊಮ್ಮೆ ಮಾನವ ಶರೀರ ಹೀಗೆ ಪೊರೆಮುಕ್ತವಾಗುತ್ತದೆಂದು ಒಂದು ಲೆಕ್ಕಾಚಾರ.

# ಬ್ರಾಡ್ಮನ್, ಬೇರ್ನ್ಸ್ ದ್ವಿಶತಕ ಇಂಗ್ಲೆಂಡ್ ತಂಡಕ್ಕೆ ಸೂತಕ

ಪಂದ್ಯ: ಆಸ್ಟ್ರೇಲಿಯ-ಇಂಗ್ಲೆಂಡ್ ಎರಡನೇ ಟೆಸ್ಟ್ ೧೯೪೬-೪೭
ದಿನಾಂಕ: ಡಿಸೆಂಬರ್ ೧೩, ೧೪, ೧೬, ೧೭, ೧೮, ೧೯
ಸ್ಥಳ: ಸಿಡ್ನಿ



ಕ್ರಿಕೆಟ್ ಪುಟ

● ಅಮೋಘವರ್ಷ

ಅಂದಿನ ಆಟ !
ಇಂದಿನ ನೋಟ !

ಇಂಗ್ಲೆಂಡ್ ತಂಡದ ನಾಯಕ ವಾಲ್ಟರ್ ಹ್ಯಾಮಂಡ್ ಆರು ದಿನ ಟೆಸ್ಟ್ ನಡೆಯುತ್ತಿದ್ದ ಆ ಕಾಲದಲ್ಲಿ ಟಾಸ್ ಗೆದ್ದು ಬ್ಯಾಟಿಂಗ್ ಆಯ್ದುಕೊಂಡಾಗ ಆತನ ಸಹ ಆಟಗಾರರಲ್ಲಿ ತುಂಬಿದ್ದ ಮಹತ್ವಾಕಾಂಕ್ಷೆ ಎಂದರೆ, ಬ್ರಿಸ್ಬೇನ್‌ನ ಮೊದಲ ಟೆಸ್ಟ್‌ನಲ್ಲಿ ಒಂದು ಇನ್ನಿಂಗ್ಸ್ ಮತ್ತು ೩೩೨ ಓಟಗಳಿಂದ ತಮ್ಮನ್ನು ಹೀನಾಯವಾಗಿ ಪರಾಭವಗೊಳಿಸಿದ ಆಸ್ಟ್ರೇಲಿಯವನ್ನು ಬಗ್ಗು ಬಡಿಯುವುದು.

ಅವರ ಆಕಾಂಕ್ಷೆಗೆ ಇಂಬು ನೀಡುವಂತೆ ಆಸ್ಟ್ರೇಲಿಯದ ನಂಬರ್ ಒನ್ ವೇಗದ ಬೌಲರ್ ರೇ ಲಿಂಡ್ವಾಲ್‌ಗೆ 'ಅಮ್ಮ' (ಸಿಡುಬು) ಬಂದು ಆತ ತಂಡದಿಂದ ಹೊರಗುಳಿದಿದ್ದ. ಬ್ಯಾಟಿಂಗ್ ಬೆನ್ನಲುಬಾದ ಡಾನ್ ಬ್ರಾಡ್ಮನ್ ತೊಡೆಯ ಸ್ನಾಯು ಸೆಳೆತದಿಂದಾಗಿ ವಕ್ರವಾಗಿ ಹೆಜ್ಜೆ ಹಾಕುತ್ತಿದ್ದ. ಮೊದಲ ದಿನದ ಈ ವಿದ್ಯಮಾನಗಳನ್ನು ಗಮನಿಸಿದ ಇಂಗ್ಲೆಂಡಿಗರಿಗೆ ಗೆಲುವು ಹತ್ತಿರವೇ ನಿಂತಂತಾಗಿತ್ತು.

ಇಂಗ್ಲೆಂಡ್ ಪಂಗಡದಲ್ಲಿದ್ದ ಒಬ್ಬನೇ ಸ್ಪಿನ್ ಸ್ಪೆಶಲಿಸ್ಟ್ ಎಂದರೆ ಡೌಗ್‌ರೈಟ್. ಸಿಡ್ನಿಯ ಮೈದಾನ ವೇಗದ ಬೌಲಿಂಗ್‌ಗೆ ಲಾಯಖ್ಕು ಎಂದು ಅವರು ಭಾವಿಸಿದ್ದರು. ಆದರೆ ಇಂಗ್ಲೆಂಡ್ ಆಯ್ಕೆ ಸಮಿತಿ ಮಾಡಿದ ತಪ್ಪನ್ನು ಆಸ್ಟ್ರೇಲಿಯದ ಆಯ್ಕೆ ಸಮಿತಿ ಮಾಡಲಿಲ್ಲವಾದ ಕಾರಣ ಮೂವರು ಸ್ಪಿನ್ ವ್ಯಾಪಾರಿಗಳಾದ ಜಾರ್ಜ್ ಟ್ರೈಬ್, ಕಾಲಿನ್ ಮೆಕ್‌ಕೂಲ್ ಮತ್ತು ಇಯಾನ್ ಜಾನ್ಸನ್ ಅವರು ತಂಡದಲ್ಲಿ ಸೇರ್ಪಡೆಯಾದರು. ಜೊತೆಗೆ ಸ್ಪಿನ್‌ಗೆ

ಅನುಕೂಲವಾದ ಮೈದಾನದಲ್ಲೂ ರಭಸದ ವೈಭವವನ್ನು ಕರಾರುವಾಕ್ಕಾಗಿ ಮೆರೆಸಬಲ್ಲ ಮಧ್ಯಮ ವೇಗದ ಬೌಲರ್ ಆರ್ನೀ ಟೋಪಕ್‌ನೂ ಇದ್ದ.

### ಮೈದಾನದಲ್ಲಿ

ಮೊದಲ ದಿನದ ಎರಡನೇ ಓವರ್‌ನಲ್ಲಿಯೇ ಪ್ರಾರಂಭಿಕ ಆಟಗಾರ ಸಿರಿಲ್ ಬ್ರೂಕ್‌ನನ್ನು ಫ್ರೆಡ್ ಫ್ರೀರ್ (ಲಿಂಡ್ವಾಲ್‌ನ ಬದಲಿ ಹುದ್ದರಿ) ಒಂದು ಓಟಕ್ಕೆ ಬೌಲ್ಡ್ ಮಾಡಿದಾಗಲೇ ಇಂಗ್ಲೆಂಡ್ ತಂಡಕ್ಕೆ ಅಮಂಗಳವಾಗಿತ್ತು.

ಸ್ಪಿನ್ನರ್‌ಗಳಿಗೆ ಅನುಕೂಲಕರವಾಗಿದ್ದ ಪಿಚ್‌ನಲ್ಲಿ ಲೆನ್ ಹಟ್ಟನ್ ಮತ್ತು ಬಿಲ್ ಎಡ್ರಿಚ್ ನೆಲಕಚ್ಚಿ ಆಡಿ ೭೮ ಓಟ ಗಳಿಸಿದರು. ಇಂಗ್ಲೆಂಡ್ ತಂಡಕ್ಕೆ ಈ ಮೊತ್ತ ಭದ್ರಬುನಾದಿಯನ್ನು ಹಾಕುವ ಲಕ್ಷಣಗಳು ಕಂಡುಬಂದವು. ಆದರೆ ಈ ಸಮಾಧಾನ ಭೋಜನ ವಿರಾಮದವರೆಗೆ ಮಾತ್ರ ಉಳಿಯಿತು. ಏಕೆಂದರೆ ವಿಕೆಟ್ ಕೀಪರ್ ಡಾನ್ ಟ್ಯಾಲನ್ ಭೋಜನ ವಿರಾಮದ ಬಳಿಕ ಅರ್ಧ ಗಂಟೆಯಲ್ಲೇ ಮೂರು ಕ್ಯಾಚ್‌ಗಳನ್ನು ಮಾಡಿ ಇಂಗ್ಲೆಂಡ್ ಆಟಗಾರರ ರಕ್ತದೊತ್ತಡವನ್ನು ಹೆಚ್ಚಿಸಿದ. ಆಗ ಒಟ್ಟು ಮೊತ್ತ ೯೯ ಆಗಿತ್ತು. ನಾಲ್ಕು ಹುದ್ದರಿಗಳು ಪೆವಿಲಿಯನ್‌ಗೆ ತಿರುಗಿ ಹೋಗಿದ್ದರು. ಜಾನ್ಸನ್ (೪೨ಕ್ಕೆ ಆರು) ಮತ್ತು ಮೆಕ್‌ಕೂಲ್ (೭೩ಕ್ಕೆ ಮೂರು) ಅವರು ಇಂಗ್ಲೆಂಡ್ ದಾಂಡಿಗರನ್ನು ತತ್ತರಗುಟ್ಟಿಸಿದರು. ಬಿಲ್ ಎಡ್ರಿಚ್ (೭೧), ಜಾಕ್ ಇಕಿನ್ (೬೦) ಅವರು ಮಾತ್ರ ಸಂಪೂರ್ಣ ಕುಸಿತವನ್ನು ಸ್ವಲ್ಪ ಮಟ್ಟಿಗೆ ನಿವಾರಿಸಿದರು.

ಹುಚ್ಚಾಪಟ್ಟೆ ಮಳೆಯ ಕಾರಣದಿಂದ ೯೩ ನಿಮಿಷ ಮಾತ್ರ ನಡೆದ ಎರಡನೇ ದಿನದ ಆಟದಲ್ಲಿ ಇಂಗ್ಲೆಂಡ್ ೨೫೫ ಮೊತ್ತಕ್ಕೆ ಎಲ್ಲ ವಿಕೆಟ್‌ಗಳನ್ನು ಕಳೆದುಕೊಂಡಿತು.

ಮರುದಿನ ಭಾನುವಾರ; ಆಟಗಾರರು ರಜಾ ತೆಗೆದುಕೊಂಡರು. ಆದರೆ ಬಿಸಿಲು ಇಡೀ ದಿನ ಕಾವಲಿದ್ದು ಮರುದಿನ ಬ್ಯಾಟಿಂಗ್‌ಗೆ ಇಳಿಯಲಿದ್ದ ಆಸ್ಟ್ರೇಲಿಯ ತಂಡದವರಿಗಾಗಿ ಮೈದಾನವನ್ನು ಒಣಗಿಸಿತು. ಶನಿವಾರ ಸ್ಪಿನ್‌ಗೆ ಹೇಳಿ ಮಾಡಿಸಿದಂತಿದ್ದ ಪಿಚ್, ಸೋಮವಾರ ಬ್ಯಾಟಿಂಗ್‌ಗೆ ಅನುಕೂಲಿಸುವಂತಿತ್ತು.

"ಪಂದ್ಯದ ಮೂರನೇ ದಿನ ಬ್ಯಾಟಿಂಗ್ ಆರಂಭಿಸಿದ ಸಿಡ್ನೀ ಬೇರ್ನ್ಸ್ ದಿನವಿಡೀ ಕ್ರೀಸ್ ಬಳಿ ಉಡದಂತೆ ನಿಂತ. ಬಸವನ ಹುಳುವಿನ ತಾಳ್ಮೆ ಹಾಗೂ ಸ್ಥಿರತೆಯಿಂದ ಆಟವಾಡಿದ ಆತ, ಇಂಗ್ಲೆಂಡ್‌ನೆಡೆ ವಾಲುತ್ತಿದ್ದ ಜಯವನ್ನು ಮೆಲ್ಲನೆ ಆಸ್ಟ್ರೇಲಿಯದತ್ತ ತಿರುಗಿಸಿದ. ಡೌಗ್‌ರೈಟ್ ಏನೆಲ್ಲ ಉಪಾಯಗಳಿಂದ ಬೌಲ್ ಮಾಡಿದರೂ ಅದು ಫಲ ನೀಡಲಿಲ್ಲ. ಐದನೇ ವಿಕೆಟ್‌ಗೆ ಜೊತೆಯಾದ ಬೇರ್ನ್ಸ್ ಮತ್ತು ಬ್ರಾಡ್ಮನ್‌ರನ್ನು ಅಗಲಿಸಲು ಇಂಗ್ಲೆಂಡ್ ಆಟಗಾರರು ಏದುಸಿರು ಬಿಡಬೇಕಾಯಿತು. ಅವರ ಯತ್ನ ಕೈಗೂಡುವ ಹೊತ್ತಿಗಾಗಲೇ ಆ ಜೋಡಿ ೪೦೫ ಓಟಗಳನ್ನು ಗಳಿಸಿ ಸಾರ್ವಕಾಲಿಕ ದಾಖಲೆಯನ್ನು ಬರೆಸಿಕೊಂಡಾಗಿತ್ತು. ಆ ಇಬ್ಬರು ದಾಂಡಿಗರ ವೈಯಕ್ತಿಕ ಸ್ಕೋರು ತಲಾ ೨೩೪. ಬೇರ್ನ್ಸ್ ಹತ್ತು ತಾಸು ನಲವತ್ತು ನಿಮಿಷಗಳ ಕಾಲ ಸ್ಟಂಪ್‌ಗಳಿಗೆ ಧಕ್ಕೆಯಾಗದಂತೆ ನೋಡಿಕೊಂಡಿದ್ದ. ಅತ್ಯಂತ ನಿಧಾನವಾಗಿ ಅಂದರೆ ೫೭೦ ನಿಮಿಷಗಳಲ್ಲಿ ಎರಡು ಶತಕಗಳನ್ನು ಹೊಡೆದ ದಾಖಲೆಯೂ ಆತನೊಂದಿಗೆ ಉಳಿಯಿತು. ಗ್ಯಾಸ್ಟ್ರಿಕ್ ತೊಂದರೆ ಮತ್ತು ತೊಡೆನೋವಿನಿಂದ ನರಳುತ್ತಿದ್ದ ಬ್ರಾಡ್ಮನ್ ಕೇವಲ ಆರೂವರೆ ತಾಸಿನಲ್ಲಿ ೨೩ ಬೌಂಡರಿಗಳ ನೆರವಿನಿಂದ ಬೇರ್ನ್ಸ್‌ನ ವೈಯಕ್ತಿಕ ಸ್ಕೋರನ್ನು ಸರಿಗಟ್ಟಿ ಯಾರ್ಡ್ಲೆ ಒಡ್ಡಿದ ಎಲ್‌ಬಿಡಬ್ಲ್ಯೂ ಜಾಲಕ್ಕೆ ಸಿಕ್ಕುಬಿದ್ದ.

ಐದನೇ ದಿನ ಭೋಜನ ವಿರಾಮಕ್ಕೆ ಅರ್ಧ ತಾಸು ಮೊದಲು ಬ್ರಾಡ್ಮನ್ ಡಿಕ್ಲೇರ್ ಘೋಷಿಸಿದಾಗ ಆಸ್ಸೀಗಳು ಎಂಟು ವಿಕೆಟ್ ನಷ್ಟಕ್ಕೆ ೬೫೯ ಓಟಗಳನ್ನು ಪೇರಿಸಿದ್ದರು. ತವರು ನೆಲದಲ್ಲಿ ಆಡಿದ ಟೆಸ್ಟ್‌ನಲ್ಲಿ ಆಸ್ಟ್ರೇಲಿಯ ಮಾಡಿದ ಅತ್ಯಧಿಕ ಸ್ಕೋರು ಅದು. ಇಂಗ್ಲೆಂಡ್‌ನ ವಿಕೆಟ್ ಕೀಪರ್ ಗಾಡ್‌ಫ್ರೇ ಇವಾನ್ಸ್‌ನನ್ನೂ ಕ್ರಿಕೆಟ್ ಪ್ರೇಮಿಗಳು ಅಭಿನಂದಿಸಿದರು. ಆಸ್ಟ್ರೇಲಿಯ ವಿರುದ್ಧ ಮೊದಲ ಬಾರಿಗೆ ಆಡಿದ ಇವಾನ್ಸ್ ೬೫೯ರ ಮೊತ್ತದಲ್ಲಿ ಒಂದೇ ಒಂದು ಬೈ ಕೂಡಾ ನುಣುಚಿಕೊಳ್ಳದಂತೆ ನೋಡಿಕೊಂಡಿದ್ದ. ಟೆಸ್ಟ್ ಕ್ರಿಕೆಟ್ ಇತಿಹಾಸದಲ್ಲಿ ಬೈ ರಹಿತ ಭಾರೀ ಮೊತ್ತವೂ ಅದಾಗಿದೆ.

ಇಂಗ್ಲೆಂಡಿನ ಎರಡನೇ ಇನ್ನಿಂಗ್ಸ್‌ಗೆ ಶ್ರೀಕಾರ ಹಾಕಿ ೩೭ ಓಟ ಗಳಿಸಿದ್ದ ಹಟ್ಟನ್, ಇನ್ನೊಂದು

ಎಸೆತವನ್ನು ಎಚ್ಚರಿಕೆಯಿಂದ ಎದುರಿಸಿದ್ದರೆ ಭೋಜನ ವಿರಾಮದ ನಂತರವೂ ಆಟವಾಡಬಹುದಿತ್ತು. ಆದರೆ ಹಾಗಾಗಲಿಲ್ಲ. ಕೀಥ್ ಮಿಲ್ಲರ್‌ನ ರಭಸದ ಚೆಂಡನ್ನು ಬೌಂಡರಿಗಟ್ಟುವ ಆತನ ಯತ್ನ ಹುಸಿಯಾಗಿ ಬ್ಯಾಟು ಬೇಲ್ಸ್ ಹಾರಿಸಿತು.

'ಪಂದ್ಯ ಪುರುಷ'ನಾಗಿ ಹೊರಹೊಮ್ಮಿದ ಇಂಗ್ಲೆಂಡ್‌ನ ಎಡ್ರಿಚ್ ದಿನದ ಆಟ ಮುಕ್ತಾಯವಾಗುವವರೆಗೆ ಆಡಿದನಲ್ಲದೆ ಡೆನಿಸ್ ಕಾಂಪ್ಟನ್ (೫೪)ನೊಂದಿಗಿನ ಜೊತೆಯಾಟದಲ್ಲಿ ಶತಕವನ್ನು ಸಾಧಿಸಿದ. ೧೧೯ರ ವೈಯಕ್ತಿಕ ಸ್ಕೋರ್‌ನೊಡನೆ ಮರುದಿನ ಅವನು ಮೆಕ್‌ಕೂಲ್‌ಗೆ ಬೌಲ್ಡ್ ಆದಾಗ ತಂಡದ ಮೊತ್ತ ಮೂರು ವಿಕೆಟ್ ನಷ್ಟಕ್ಕೆ ೨೫೭. ಆಸ್ಟ್ರೇಲಿಯ ವಿರುದ್ಧ ಆತ ಗಳಿಸಿದ ಮೊದಲ ಸೆಂಚುರಿ ಅದಾಗಿತ್ತು.

ಇಂಗ್ಲೆಂಡಿನ ಕೊನೆಯ ಹುದ್ದರಿ ೩೭೦ರ ಮೊತ್ತಕ್ಕೆ ಪತನಗೊಂಡಾಗ ಒಂದು ಇನ್ನಿಂಗ್ಸ್ ಹಾಗೂ ೩೩ ಓಟಗಳ ಜಯದೊಂದಿಗೆ ಆಸ್ಟ್ರೇಲಿಯ ಪಂಗಡದವರು ಹರ್ಷೋದ್ಗಾರ ಮಾಡಿದರು.

"ಬ್ಯಾಟಿಂಗ್ ಮಾಡುವಾಗ ನನ್ನ ಕಾಲು ತಂಬಾ ನೋವು ಕೊಡುತ್ತಿತ್ತು. ಗಟ್ಟಿಯಾಗಿ ಹೆಜ್ಜೆ ಊರಲೂ ಆಗುತ್ತಿರಲಿಲ್ಲ. ಆದ್ದರಿಂದ ನನಗಾಗಿ ಓಟಗಾರನೊಬ್ಬನನ್ನು ತೆಗೆದುಕೊಳ್ಳಬೇಕೆಂದುಕೊಂಡಿದ್ದೆ. ಆದರೆ ಇನ್ನೊಂದು ತುದಿಯಲ್ಲಿ ಲೀಲಾಜಾಲವಾಗಿ ಆಡುತ್ತಿದ್ದ ಸಿಡ್ನೀ ಬೇರ್ನ್ಸ್‌ನ ಲಕ್ಷ್ಯ ಅಸ್ಥಿರವಾದೀತೆಂಬ ಆತಂಕದಿಂದ ನನ್ನ ನಿರ್ಧಾರ ಬದಲಿಸಿದ್ದು ಒಳ್ಳೆಯದೇ ಆಯಿತು. ಬದಲಿ ಓಟಗಾರನಿಂದ ಅನಾನುಕೂಲವೇ ಜಾಸ್ತಿ ಎಂಬುದು ನನ್ನ ಅನುಭವ. ಏನೇ ಇರಲಿ ಯಾವುದೇ ಪರಿಸ್ಥಿತಿಗೆ ಹೆಚ್ಚಿನ ಪ್ರಯಾಸವಿಲ್ಲದೆ ಹೊಂದಿಕೊಳ್ಳಬಲ್ಲ ತೂಕಬದ್ಧ ತಂಡ ನಮ್ಮದಿದ್ದುದರಿಂದ ಗೆಲುವು ಸಾಧ್ಯವಾಯಿತೆಂಬುದು ನನ್ನ ಅಭಿಪ್ರಾಯ." ಆಸ್ಟ್ರೇಲಿಯದ ನಾಯಕ ಡಿ.ಜಿ. ಬ್ರಾಡ್ಮನ್ ಹರ್ಷದಿಂದ ಪ್ರತಿಕ್ರಿಯೆ ವ್ಯಕ್ತಪಡಿಸಿದ.

"ಸಿಡ್ನಿಯ ಮೈದಾನ ರನ್ ಮತ್ತು ಸ್ಪಿನ್ ಬೇಟೆಗಾರರಿಗೆ ಪ್ರಶಸ್ತವೆಂದು ಹೇಳಲು ಖುಷಿಯಾಗುತ್ತದೆ. ನನ್ನ ಸಾಧನೆ, ವಿಶೇಷವಾಗಿ ನನ್ನ ಸೆಂಚುರಿಯ ಬಗ್ಗೆ ನನಗೆ ತೃಪ್ತಿ ಇದೆ. ಆದರೆ ಅಷ್ಟು ಬೇಗ ಆ ಮೈದಾನ ಸ್ಪಿನ್‌ಗೆ ಅನುಕೂಲಿಸೀತೆಂದು ನಾವು ನಿರೀಕ್ಷಿಸದಿದ್ದುದರಿಂದ ಇಂಗ್ಲೆಂಡ್ ತಂಡ ದಯನೀಯವಾಗಿ ಮಣ್ಣು ಮುಕ್ಕಬೇಕಾಯಿತು. ಜಾನ್ಸನ್ ಮತ್ತು ಮೆಕ್‌ಕೂಲ್ ನಮ್ಮನ್ನು ನಿಯಂತ್ರಿಸಿದಂತೆ ನಾವು ಬೇರ್ನ್ಸ್ ಮತ್ತು ಬ್ರಾಡ್ಮನ್‌ರನ್ನೂ ನಿಯಂತ್ರಿಸಲಾರದೆ ಹೋದದ್ದು ಸೋಲಿಗೆ ಕಾರಣವಾಯಿತು." 'ಪಂದ್ಯ ಪುರುಷ'ನಾದ ಬಿಲ್ ಎಡ್ರಿಚ್ ಸೋಲು ಗೆಲುವುಗಳೆರಡನ್ನೂ ಸಮೀಕರಿಸಿ ವಿಶ್ಲೇಷಿಸಿದ. ●

---

## ಇರುವೆ ತಿನಿಸು

**ಚೀ**ನದಲ್ಲಿ ಪ್ರಯಾಣ ಮಾಡುವಾಗ ನಿಮ್ಮ ಆಹಾರದಲ್ಲಾಗಲೀ ಪಾನೀಯದಲ್ಲಾಗಲೀ ಇರುವೆಗಳು ಕಂಡರೆ ಬೆಚ್ಚಿಬೀಳದಿರಿ! ನೀವು ತಿನ್ನಲೆಂದೇ ಅವನ್ನು ಆಹಾರದಲ್ಲಿ ಬೆರೆಸಿರುತ್ತಾರೆ. ಸ್ಯಾನ್‌ಜಂಗ್‌ನ ಆಹಾರ ಕೇಂದ್ರವೊಂದು ಅತ್ಯಂತ ಸ್ವಾದಿಷ್ಟವಾದ ೪೦ ಬಗೆಯ ಕೇಕ್‌ಗಳು, ಬಗೆಬಗೆಯ ವೈನ್ ಹಾಗೂ ಟೀ ತಯಾರಿಸಲು ಇರುವೆಗಳನ್ನು ಉಪಯೋಗಿಸುತ್ತದೆಂದು 'ಕ್ಸಿನುವ್ ನ್ಯೂಸ್ ಏಜೆನ್ಸಿ' ತಿಳಿಸುತ್ತದೆ. ಫ್ಯಾಕ್ಟರಿಗಳಲ್ಲಿ ತಯಾರಿಸುವ ಟಾನಿಕ್ಕುಗಳು, ಇರುವೆಯ ಅಡಿಗೆಗಳು ವರ್ಷಕ್ಕೆ ೧೧೨ ಮಿಲಿಯನ್ ಡಾಲರ್‌ಗಳ ಮೌಲ್ಯದಷ್ಟು ಮಾರಾಟವಾಗುತ್ತದೆ. ಪ್ರೊ. ವು. ಜೆ. ಚೆಂಗ್ ಇರುವೆಯ ಚಿಕಿತ್ಸೆಯಿಂದ ೨೦೦,೦೦೦ ಕ್ಕಿಂತ ಹೆಚ್ಚು ರೋಗಿಗಳನ್ನು ಗುಣಪಡಿಸಿದ್ದಾರೆ. ಅಲ್ಲಿ ಇರುವೆಗಳಿಗೆ ಬೇಡಿಕೆ ಅದೆಷ್ಟು ಹೆಚ್ಚಿದೆ ಎಂದರೆ ಕೆಲವರು ಇರುವೆಗಳನ್ನು ಬೆಳೆಸುವುದನ್ನೇ ಒಂದು ಉದ್ದಿಮೆಯನ್ನಾಗಿ ಮಾಡಿಕೊಂಡಿದ್ದಾರೆ.

ಸಂಗ್ರಹ: **ಟಿ.ಎಸ್. ಲಲಿತ**

# ಸಾಮಾಜಿಕ ಕಳ್ಳ

ಕಥಾನುವಾದ

ಮೂಲ: ದಾಸ್ತೊವಸ್ಕಿ
ಕನ್ನಡಕ್ಕೆ: ಶಂಕರ ಅಜ್ಜಂಪುರ

ನನ್ನ ಅಡಿಗೆಯವಳೂ ಧೋಬಿ ಮತ್ತು ಗೃಹರಕ್ಷಕಿಯೂ ಆದ ಅಗ್ರಫೆನಾ ಊಟದ ಸಮಯದಲ್ಲಿ ಒಂದೆರಡು ಮಾತಾಡುವುದನ್ನು ಬಿಟ್ಟರೆ, ಉಳಿದಂತೆ ಮೌನಿ. ಸಾಧಾರಣ ಹೆಂಗಸಿನಂತೆ ತೋರುವ ಅಗ್ರಫೆನಾ, "ನಿಮ್ಮೊಂದಿಗೆ ಸ್ವಲ್ಪ ಮಾತನಾಡುವುದಿದೆ" ಎಂದು ಇದ್ದಕ್ಕಿದ್ದಂತೆ ಪ್ರಾರಂಭ ಮಾಡಿದಳು. "ನಿಮ್ಮ ಚಿಕ್ಕ ಕೋಣೆಯನ್ನು ಏಕೆ ಬಾಡಿಗೆಗೆ ಕೊಡಬಾರದು ?" ಎಂದೂ ಸೇರಿಸಿದಳು.

"ಯಾವ ಚಿಕ್ಕ ಕೋಣೆ ?"

"ಅದೇ ಸರ್, ಅಡಿಗೆಯ ಮನೆಯ ಪಕ್ಕದ್ದು !"

"ಆದ್ರೆ, ಅದನ್ನು ಯಾರು ಬಾಡಿಗೆಗೆ ತಗೊಳ್ತಾರೆ ?"

"ಯಾರು ಅಂದ್ರೆ, ರೂಮು ಬೇಕಾಗಿರುವವರೇ !"

"ಅಲ್ಲ, ಇಲಿ ಬಿಲದಂಥಾ ಆ ಕೋಣೆಗೆ ಯಾರು ತಾನೇ ಬಾಡಿಗೆಗೆ ಬರ್ತಾರೆ ? ಅದನ್ನು ರೂಮು ಅನ್ನುವುದಕ್ಕಿಂತ ಒಂದು ಪೆಟ್ಟಿಗೆ ಅನ್ನಬಹುದೇನೋ ! ಒಂದು ಹಾಸಿಗೆ ಹಾಕಿಬಿಟ್ಟರೆ ಓಡಾಡಲು ಜಾಗವೂ ಇರುವುದಿಲ್ಲ."

"ಸರಿ, ಆದರೆ ಅವನಿಗೆ ಮಲಗೋದಕ್ಕೆ ಒಂದು ಜಾಗ ಅಂತ ಸಿಕ್ಕಿದರೆ ಸಾಕು, ಅವನು ಕಿಟಕಿಯ ಮೇಲಿನ ಸಜ್ಜದ ಮೇಲಾದರೂ ವಾಸ ಮಾಡ್ಕೊಂಡು ಇರ್ತಾನೆ."

"ಯಾವ ಕಿಟಕಿಯ ಸಜ್ಜ ನೀನು ಹೇಳ್ತಿರೋದು ?"

"ಏನು ಸರ್ ! ಇಷ್ಟೂ ಗೊತ್ತಿಲ್ಲದಂತೆ ಕೇಳ್ತಿದ್ದೀರಿ ? ಪ್ಯಾಸೇಜಿನ ಮೇಲೆ ಇದೆಯಲ್ಲ ಅದರ ಮೇಲೆ. ಅಲ್ಲೇ ಕೂತ್ಕೊಂಡು ತನಗಿಷ್ಟ ಬಂದಿದ್ದು ಮಾಡ್ಕೊಳ್ತಾನೆ. ಬೇಕಿದ್ರೆ ಒಂದು ಕುರ್ಚಿ ಹಾಕ್ಕೊಂಡು ಕೂತ್ಕೋಬಹುದು. ಅವನ ಬಳಿ ಒಂದು ಕುರ್ಚಿ, ಮೇಜು ಎಲ್ಲಾನೂ ಇದೆ."

"ಅದೆಲ್ಲ ಸರಿ, ಅವನು ಯಾರು ?"

"ತುಂಬ ಒಳ್ಳೆಯ ಮನುಷ್ಯ ಸರ್, ಅನುಭವಸ್ಥ. ಅವನಿಗೆ ಅಡಿಗೆ ಊಟಾನೂ ನಾನೇ ಮಾಡಿ ಹಾಕ್ತೀನಿ. ಅದಕ್ಕೆ ಹತ್ತು ರೂಬೆಲ್ ಕೂಡ ಕೊಡ್ತಾನೆ."

ಬಹಳ ಚೌಕಶಿಯ ನಂತರ ಅಗ್ರಫೆನಾ ಆ ಚಿಕ್ಕ ಕೋಣೆಯನ್ನು ಅವನಿಗೆ ಬಾಡಿಗೆಗೆ ನೀಡಲು ನನ್ನನ್ನು ಒಪ್ಪಿಸಿದಳು. ತಲೆಯಲ್ಲಿ ಏನಾದರೂ ಹೊಕ್ಕಿತೆಂದರೆ ಅದನ್ನು ಮಾಡಿ ಮುಗಿಸುವವರೆಗೂ ಬಿಡುವಂಥವಳಲ್ಲ ಅಗ್ರಫೆನಾ.

"ಅವನ ಬಳಿ ಕನಿಷ್ಟ ಪಕ್ಷ ಕೆಲವು ಮುಖ್ಯ ದಾಖಲೆಗಳು, ಅಂದರೆ ಪಾಸ್‌ಪೋರ್ಟ್ ಇಂಥಾದ್ದು ಏನಾದರೂ ಇದೆ ತಾನೆ ?"

"ಇದೆ ಸರ್, ಖಂಡಿತಾ ಇದೆ. ನಾನು ಹೇಳ್ತಾ ಇರೋ ಹಾಗೆ ಆತ ತುಂಬ ಒಳ್ಳೆಯವ, ಅನುಭವಸ್ಥ. ಹತ್ತು ರೂಬೆಲ್ ಕೊಡ್ತೀನಿ ಅಂತ ಹೇಳಿದ್ದನಲ್ಲಾ, ಅದನ್ನು ಕೊಟ್ಟಿದ್ದಾನೆ."

ಬ್ರಹ್ಮಚಾರಿಯಾಗಿದ್ದ ನನ್ನ ಮನೆಗೆ, ಮಾರನೆಯ ದಿನವೇ ನನ್ನ ಹೊಸ ಬಾಡಿಗೆದಾರ ಬಂದಿದ್ದೂ ಆಯಿತು. ಇದರಿಂದ ನನಗೆ ಬೇಜಾರಾಯಿತು ಅಂತ ಹೇಳುವುದಕ್ಕಿಂತಲೂ, ಮನಸ್ಸಿನ ಯಾವುದೋ ಮೂಲೆಯಲ್ಲಿ ಸ್ವಲ್ಪ ಸಂತಸವೂ ಇಣುಕಿದಂತಿತ್ತು. ನಾನು ಏಕಾಂಗಿ, ಏಕಾಂತವೇ

ನನಗೆ ಪ್ರಿಯವಾದುದು. ನನಗೆ ಹೆಚ್ಚಿನ ಪರಿಚಿತರೂ ಇಲ್ಲ. ಹೊರಗೆ ಹೋಗುವುದೂ ಕಡಿಮೆಯೇ. ನನ್ನ ಜೀವನದ ಹತ್ತು ವರ್ಷಗಳನ್ನು ಒಂಟಿಯಾಗಿಯೇ ಕಳೆದದ್ದರಿಂದ ನಾನು ಈ ಏಕಾಂತವಾಸಕ್ಕೆ ಹೊಂದಿಕೊಂಡವನಾಗಿದ್ದೆ. ನಂತರದ ಹತ್ತು-ಹದಿನೈದು ವರ್ಷಗಳ ವ್ಯತ್ಯಾಸವೆಂದರೆ ಮನೆಕೆಲಸಕ್ಕೆ ಬರುತ್ತಿದ್ದ ಮೂಕಿಯಂತಹ ಅಗ್ರಫೆನಾಳನ್ನು ಬಿಟ್ಟರೆ, ಈ ಬ್ರಹ್ಮಚಾರಿಯ ಗೂಡಿಗೆ ಹೊಸಬನೊಬ್ಬನ ಆಗಮನದಿಂದ ಹೆಚ್ಚಿನ ಬದಲಾವಣೆಗಳೇನೂ ನನಗೆ ಕಾಣಲಿಲ್ಲ. ಆದರೂ ಒಳ್ಳೆಯ ನಡವಳಿಕೆಯುಳ್ಳ ಇನ್ನೊಬ್ಬ ಬರುತ್ತಿದ್ದಾನೆಂದರೆ ಅದರಿಂದ ಒಳ್ಳೆಯದೇ ಎಂದು ಭಾವಿಸಿದೆ.

ಅಗ್ರಫೆನಾ ನನಗೆ ಸುಳ್ಳು ಹೇಳಿರಲಿಲ್ಲ. ನನ್ನ ಬಾಡಿಗೆದಾರ ಲೋಕವನ್ನು ಕಂಡುಂಡ ಅನುಭವಿಯೇ ಸರಿ. ಅವನ ಪಾಸ್‌ಪೋರ್ಟ್ ತಿಳಿಸಿದಂತೆ ಆತ ಒಬ್ಬ ನಿವೃತ್ತ ಯೋಧ. ಅವನನ್ನು ನೋಡಿದ ಯಾರೇ ಆದರೂ ಸೈನಿಕನೆಂಬುದನ್ನು ಹೇಳಬಹುದಾದ ಚಹರೆ. ಅಸ್ಟೆಫಿ ಇವಾನೋವಿಚ್ ನಿವೃತ್ತ ಯೋಧರ ಆರಿಸಿ ತೆಗೆದ ಮಾದರಿ. ಇವನಂಥವ



ನನ್ನ ಜೀವನದಲ್ಲಿ ದೊರೆತದ್ದು ಅದೃಷ್ಟವೂ ಹೌದು. ನಾನು ಅವನನ್ನು ಅಷ್ಟು ಮೆಚ್ಚಿಕೊಂಡಿದ್ದರ ಹಿಂದೆ ಅಡಗಿದ್ದ ಸತ್ಯವೆಂದರೆ, ಆತ ನನ್ನ ಮನೋಧ ರ್ಮಕ್ಕೆ ಒಗ್ಗುವಂಥ ಕತೆಗಳನ್ನು ಸ್ವಾರಸ್ಯಕರವಾಗಿ ಹೇಳುತ್ತಿದ್ದ ಪರಿ. ಆತ ಹೇಳಿದ ಒಂದು ಕತೆ ನನ್ನ ಮೇಲೆ ಗಾಢವಾದ ಪರಿಣಾಮವನ್ನು ಬೀರಿತು. ಅದು ಪ್ರಾರಂಭವಾದುದು ಹೀಗೆ.

ಒಂದು ದಿನ ನನ್ನ ಮನೆಯಲ್ಲಿ ನಾನು ಒಂಟಿಯಾಗಿ ಕುಳಿತಿದ್ದೆ. ಅಗ್ರಫೆನಾ ಮತ್ತು ಅಸ್ಟೆಫಿ ಇಬ್ಬರೂ ತಮ್ಮ ಕೆಲಸಗಳ ನಿಮಿತ್ತ ಹೊರಗೆ ಹೋಗಿದ್ದರು. ಇದ್ದಕ್ಕಿದ್ದಂತೆ ಯಾರೋ ಒಳಬಂ ದಂತಾಯಿತು. ಯಾರೋ ಅಪರಿಚಿತರಿರಬಹು ದೆಂದು ನೋಡಲು ಹೊರಬಂದೆ. ಕೊರೆಯುವ ಚಳಿಯಲ್ಲಿ ಓವರ್‌ಕೋಟನ್ನೂ ಧರಿಸಿರದ ಕುಳ್ಳ ನೆಯ ಆಸಾಮಿ. ನನ್ನ ಗುರುತಿನವನಂತೂ ಅಲ್ಲ.

"ಯಾರು, ಏನು ಬೇಕು ?"

"ಅಲೆಕ್ಸಾಂಡ್ರೋವ್ ಅನ್ನೋ ಹೆಸರಿನ ಸರ ಕಾರೀ ನೌಕರ ಇಲ್ಲಿದ್ದಾರೇನು ?" ಆತ ಪ್ರಶ್ನಿಸಿದ.

"ಇಲ್ಲ, ಆ ಹೆಸರಿನವರು ಇಲ್ಲಿ ಯಾರೂ ಇಲ್ಲ." ಅವನಿಗೆ ವಿದಾಯ ಹೇಳುವಂತೆ ನನ್ನ ಧ್ವನಿಯಿತ್ತು.

"ಬಹಳ ವಿಚಿತ್ರ," ಬಾಗಿಲಿನತ್ತ ನಿಧಾನವಾಗಿ ಹೆಜ್ಜೆಯಿಡುತ್ತ ಆತ ಹೇಳಿಕೊಂಡ, "ಅವರು ಇಲ್ಲೇ ಇದ್ದಾರೆ ಅಂತ ಮನೆ ಮಾಲಿಕರು ಹೇಳಿದರು."

"ಯಾರೂ ಇಲ್ಲ, ಹೋಗಿ," ಎಂದು ಗದ ರಿದೆ.

ಮಾರನೇ ದಿನ, ಊಟದ ನಂತರ ಅಸ್ಟೆಫಿ ನನ್ನ ಕೋಟನ್ನು ಸರಿಮಾಡುತ್ತ ಕುಳಿತಿದ್ದಾಗ ಪ್ಯಾಸೇಜಿ ನಲ್ಲಿ ಯಾರೋ ಬಂದರು. ನಾನಿನ್ನೂ ಚಿಕ್ಕದಾಗಿ ಬಾಗಿಲು ತೆರೆದು ಯಾರು ಎಂದು ನೋಡುತ್ತಿರು ವಂತೆಯೇ ನಿನ್ನೆ ಬಂದಿದ್ದ ಅದೇ ಕುಳ್ಳನೆಯ ವ್ಯಕ್ತಿ ಕೋಟ್ ರ್‍ಯಾಕ್‌ನಲ್ಲಿದ್ದ ನನ್ನ ಚಳಿಗಾಲದ ಕೋಟನ್ನು ನಿಧಾನವಾಗಿ ಮಡಿಚಿ ಕಂಕುಳನಲ್ಲಿ ಇರುಕಿಕೊಂಡು ಹೊರಗೆ ಓಡಿಹೋದ. ಅಗ್ರಫೆನಾ ಇದನ್ನು ಗರಬ ಡಿದವಳಂತೆ ನೋಡುತ್ತ ನಿಂತಿದ್ದಳೇ ವಿನಾ ಏನೂ ಮಾಡಲಿಲ್ಲ. ಅಸ್ಟೆಫಿ ಇವಾನೋವಿಚ್ ತಕ್ಷಣವೇ ಅವನ ಹಿಂದೆ ಓಡಿದನಾದರೂ ಕೆಲವೇ ನಿಮಿಷಗ ಳಲ್ಲಿ ಏದುಸಿರು ಬಿಡುತ್ತ ಬರಿಗೈಲಿ ವಾಪಸಾಗಿ ನನ್ನೆದುರು ನಿಂತಿದ್ದ. ಆ ಕಳ್ಳ ಗಾಳಿಯಲ್ಲೆಲ್ಲೋ ಮಾಯವಾಗಿದ್ದ!

"ಏನು ಗ್ರಹಚಾರ ಅಸ್ಟೆಫಿ, ನನ್ನ ಬಳಿ ಇನ್ನೊಂದು ಕೋಟು ಇದೇಂತ ಒಳ್ಳೆಯದಾ ಯಿತು, ಇಲ್ಲದಿದ್ದರೆ ಈ ಚಳಿಗಾಲದಲ್ಲಿ ನಾನು ನಡುಗಿಯೇ ಸಾಯಬೇಕಾಗಿತ್ತೇನೋ."

ಅಸ್ಟೆಫಿ ಇವಾನೋವಿಚ್ ದಿಗ್ಮೂಢನಂತಾಗಿದ್ದ. ಅವನ ತಳಮಳವನ್ನು ನೋಡಿಯೇ ನನ್ನ ನಷ್ಟ ವನ್ನು ನಾನು ಮರೆಯುವಂತಾಗಿತ್ತು. ಕ್ಷಣಕ್ಕೊಮ್ಮೆ ತಾನು ಹೊಲಿಯುತ್ತಿರುವ ಬಟ್ಟೆಯನ್ನು ಕೆಳಗಿಟ್ಟು ಇಡೀ ಘಟನೆ ಹೇಗೆ ನಡೆಯಿತು ಎಂದು ನೆನಪು ಮಾಡಿಕೊಂಡು ಹೇಳುತ್ತಿದ್ದ. ತಾನು ಅವನನ್ನು ಹಿಡಿಯಲು ಸಾಧ್ಯವಾಗದುದರ ಬಗ್ಗೆ ಪಶ್ಚಾತ್ತಾಪ ಪಡುತ್ತಿದ್ದ. ಪುನಃ ಹೊಲಿಯಲು ತೊಡಗಿದರೂ ಮರುಕ್ಷಣದಲ್ಲೇ ಕೆಳಗಿಳಿದು ಹೋಗಿ ಮನೆ ಮಾಲಿ ಕನೊಂದಿಗೆ, "ಎಂಥೆಂಥವರನ್ನೆಲ್ಲ ಒಳಗೆ ಬಿಡ್ತೀಯಾ" ಎಂದು ಗಲಾಟೆ ಮಾಡುತ್ತಿದ್ದ. ನಡು ನಡುವೆ ಅಗ್ರಫೆನಾಳಿಗೆ ಬುದ್ಧಿ ಹೇಳಿದ್ದೂ ಆಯಿತು. ಕೊನೆಗೂ ಆತ ಅದನ್ನೇ ಹೇಳಿಕೊಳ್ಳುತ್ತ, ಪೇಚಾ ಡುತ್ತ, ತಮ್ಮ ಕಣ್ಣೆದುರಿಗೇ ಕಳ್ಳತನ ನಡೆದುದಕ್ಕೆ ಮರುಗುತ್ತಿದ್ದ.

"ಅಂತೂ ನಾವು ಮೂರ್ಖರಾದೆವು ಅಸ್ಟೆಫಿ". ನನ್ನ ಬೇಸರಿಕೆ ಕಳೆಯಲೆಂದು ಒಂದು ಕಪ್ ಚಹಾವನ್ನು ಆತನಿಗೆ ನೀಡುತ್ತ ಪುನಃ ಕೋಟಿನ ಕತೆಯನ್ನು ಪ್ರಸ್ತಾಪಿಸಿದೆ. ಕತೆ ಹೇಳುವ ಆತನ ಕಲೆಗಾರಿಕೆ ನನ್ನನ್ನು ಆಕರ್ಷಿಸಿತ್ತು.

"ಅದೇನೋ ನಿಜ ಸರ್, ನಾವು ಮೂರ್ಖರಾ ಗಿದ್ದು ಹೌದು. ನನ್ನದೇನು ಕಳುವಾಗಿಲ್ಲ ನಿಜ. ಹಾಗೇಂತ ಇದರ ಬಗ್ಗೆ ತಲೆಕೆಡಿಸ್ಕೊಳ್ಳದೇ ಇರೋ ದಕ್ಕೂ ನನಗೆ ಸಾಧ್ಯವಿಲ್ಲ. ಕಳ್ಳನಿಗಿಂತ ಕೆಟ್ಟ ಶತ್ರು ಯಾರೂ ಇರಲಿಕ್ಕೆ ಸಾಧ್ಯವಿಲ್ಲ ಅನ್ನೋದು ನನ್ನ ಖಚಿತ ನಂಬಿಕೆ. ನಿಮ್ಮ ಪದಾರ್ಥ ತಗೊಂಡು ಹೋಗಿ ಅದನ್ನು ವಾಪಸು ಮಾಡದೇ ಇರುವಂಥ ವರೂ ಇದ್ದಾರಷ್ಟೇ. ಆದರೆ ಕಳ್ಳ ನಿಮ್ಮ ಬೆವರು, ಹಣ, ಸಮಯ ಎಲ್ಲವನ್ನೂ ಕದ್ದುಬಿಡ್ತಾನೆ. ಕ್ಷುದ್ರ, ನೀಚ ಮನುಷ್ಯ ಅಂದ್ರೆ ಕಳ್ಳನೇ ಸರಿ. ಅಂಥವರ ಬಗ್ಗೆ ಮಾತನಾಡೋದು ಅಂದ್ರೇನೇ ನನ್ನ ರಕ್ತ ಕುದಿಯುತ್ತೆ. ಆದರೆ ನೀವು ನಿಮ್ಮ ಕೋಟು

ಕಳುವಾಗಿದ್ರೂ ಇಷ್ಟು ಸಮಾಧಾನದಿಂದ ಇದ್ದೀರೆಂದರೆ, ನನಗೆ ಆಶ್ಚರ್ಯವಾಗುತ್ತೆ."

"ನಿಜ ಅಸ್ತಫಿ, ನೀನು ಹೇಳ್ತಿರೋದು ಸರಿಯೇ, ಬೆಂಕಿ ಬಿದ್ದು ನಾಶವಾದ್ರೂ ಸರಿ, ನನ್ನ ವಸ್ತುಗಳ ಕಳ್ಳತನ ಅಂದ್ರೆ ಸಹಿಸೋದು ಕಷ್ಟವೇ."

"ಕಳ್ಳತನ ಆಗಿದೆ ಅಂದ್ರೆ ಯಾರಿಗೆ ತಾನೇ ಸಂತೋಷ ಸರ್ ? ಎಷ್ಟೋ ತರಹದ ಕಳ್ಳರ ಬಗ್ಗೆ ನೀವು ಕೇಳಿರ್ತೀರಿ. ಆದರೆ ನನಗೆ ಒಬ್ಬ ಪ್ರಾಮಾಣಿಕ ಕಳ್ಳನ ವಿಚಾರ ನೆನಪಿಗೆ ಬರ್‍ತಾ ಇದೆ."

"ಪ್ರಾಮಾಣಿಕ ಕಳ್ಳ! ಅಸ್ತಫಿ, ಇದೇನು ಹೇಳ್ತಾ ಇದ್ದೀ ನೀನು ? ಒಬ್ಬನೇ ಮನುಷ್ಯ ಕಳ್ಳ ಮತ್ತು ಪ್ರಾಮಾಣಿಕ ಆಗಿರೋದು ಹೇಗೆ ಸಾಧ್ಯ ?"

"ನಿಜ ಸರ್, ಪ್ರಾಮಾಣಿಕ ಕಳ್ಳರು ಇರೋದು ಸಾಧ್ಯವೇ ಇಲ್ಲ. ನಾನೇನು ಹೇಳ್ತಿದ್ದೀನಿ ಅಂದ್ರೆ, ನನ್ನ ಮನಸ್ಸಿನಲ್ಲಿ ಇರೋ ವ್ಯಕ್ತಿ ಪ್ರಾಮಾಣಿಕನೂ ಹೌದು ಕಳ್ಳನೂ ಆಗಿದ್ದ. ಅಂಥವನ ಬಗ್ಗೆ ನನಗೆ ಕೋಪಕ್ಕಿಂತ ಮರುಕವೇ ಜಾಸ್ತಿ ಅನ್ನಬಹುದು."

"ನೀನು ಹೇಳ್ತಿರೋದು ವಿಚಿತ್ರವಾಗಿದೆ. ಅದೇನು ಸಮಾಚಾರ ಅಸ್ತಫಿ ?"

"ಇದು ನಡೆದು ಎರಡು ವರ್ಷವೇ ಆಯ್ತು ಸರ್, ನಾನು ಆಗ ಸುಮಾರು ಒಂದು ವರ್ಷ ನಿರುದ್ಯೋಗಿಯಾಗಿದ್ದೆ. ನನ್ನ ಕೆಲಸ ಹೋಗೋದಕ್ಕೆ ಸ್ವಲ್ಪ ದಿನಗಳ ಹಿಂದೆ ಒಂದು ಪಬ್‌ನಲ್ಲಿ ಅವನ ಭೇಟಿಯಾಯಿತು. ಆತ ಶುದ್ಧ ಕುಡುಕ, ಕೊಳಕ, ಅಲೆಮಾರಿ. ಸರಕಾರದ ಯಾವುದೋ ಇಲಾಖೆಯಲ್ಲಿ ಗುಮಾಸ್ತನಾಗಿದ್ದ. ಕುಡಿತದ ಕಾರಣದಿಂದ ಅವನನ್ನು ಕೆಲಸದಿಂದ ತೆಗೆದುಹಾಕಿದ್ದರು. ಅಬ್ಬಾ! ಅದೆಂಥಾ ಕೊಳಕು ದೃಶ್ಯ. ಮೈಮೇಲೆ ಹರುಕು ಚಿಂದಿ ಬಟ್ಟೆ. ತೊಟ್ಟಿದ್ದ ಕೋಟಿನ ಒಳಗೆ ಶರ್ಟ್ ಕೂಡ ಇರಲಿಲ್ಲ. ಆದರೆ ನಾಲ್ಕು ಕಾಸು ಸಿಕ್ಕಿತು ಅಂದರೆ ಸಾಕು, ಕುಡಿಯೋದಕ್ಕೆ ಶುರು ಮಾಡ್ತಿದ್ದ. ಹಾಗೆ ಅಂತ ಅವನು ಕುಡಿದು ಗಲಾಟೆ ಎಬ್ಬಿಸ್ತಿರಲಿಲ್ಲ. ಶಾಂತವಾಗಿ ತನ್ನ ಪಾಡಿಗೆ ತಾನು ಇರ್‍ತಿದ್ದ. ಯಾರನ್ನೂ ಏನೂ ಕೇಳ್ತಿರಲಿಲ್ಲ. ಕುಡಿತ ಅಂದ್ರೆ ಪ್ರಾಣ ಬಿಡೋನು. ಹೋಗಲಿ, ಒಂದು ದಿನ ಮಜಾ ಮಾಡಲಿ ಎಂದು ನಾನೇ ಅವನಿಗೆ ಕುಡಿ

> ನಾವು ಸಂತೋಷವಾಗಿರುವುದಕ್ಕಿಂತ ನಾವದಕ್ಕೆ ಅರ್ಹರಾಗಿರಬೇಕೆಂಬುದು ಜೀವನದ ಉದ್ದೇಶ.
>
> ಇಮ್ಯಾನ್ಯುಯಲ್ ಫಿಚ್ಚೆ

ಸಿದೆ. ಇಷ್ಟೇ ನಾನು ಮಾಡಿದ ತಪ್ಪು ಸರ್. ನಾವಿಬ್ರೂ ಒಳ್ಳೆಯ ಸ್ನೇಹಿತರಾಗಿಬಿಟ್ಟೆವು. ಬರ್‍ತಾ ಬರ್‍ತಾ ನಾಯಿ ಕುನ್ನಿ ತರಹ ನನಗೆ ಅಂಟಿಕೊಂಡುಬಿಟ್ಟ. ನಾಚಿಕೆ, ಮಾನ-ಮರ್ಯಾದೆ ಏನೂ ಇಲ್ಲದವ. ಸರಿ, ಇವತ್ತು ಒಂದು ರಾತ್ರಿ ಮಟ್ಟಿಗೆ ನಿಮ್ಮ ಮನೇಲೇ ಮಲಗಿಕೊಳ್ತೀನಿ ಅಂದ. ಆಗಲಿ ಎಂದೆ. ಹೇಗಾದರೂ ಆಗಲಿ ಅಂತ ಅವನ ಪಾಸ್‌ಪೋರ್ಟ್ ನೋಡಿದೆ. ಅದರಲ್ಲಿ ಅನುಮಾನಪಡೋವಂಥದ್ದೇನು ಕಾಣಿಸಲಿಲ್ಲ. ಮಾರನೆ ದಿನ ಮತ್ತೆ ಬಂದ. ಇಡೀ ದಿನ ಕಿಟಕಿಯ ಸಜ್ಜದ ಮೇಲೆ ಕುಳಿತು ಕಳೆದ. ರಾತ್ರಿ ಮತ್ತೆ ಇಲ್ಲೇ ಉಳಿದ. ದೇವರೆ! ಇವನಿಂದ ನನಗೆ ಬಿಡುಗಡೆ ಇಲ್ಲ. ಊಟ, ತಿಂಡಿ, ಚಹಾ, ಕೊನೆಗೆ ಮಲಗಲು ಹಾಸಿಗೆ ಕೂಡಾ! ಅವನ ಅದೃಷ್ಟ ನೋಡಿ ಸರ್! ನನಗೇ ತಿನ್ನಲು ಏನೂ ಇಲ್ಲ. ಇಂಥಾದ್ದರಲ್ಲಿ ಇವನೊಬ್ಬ ಶನಿ ಹೆಗಲೇರಿದ್ದ! ಇದಕ್ಕೂ ಮುಂಚೆ ಹೀಗೇ ಯಾರಿಗೋ ಜೋತು ಬಿದ್ದು ತನ್ನ ದಿನಗಳನ್ನು ಕಳೆದಿರಬೇಕು. ನನ್ನ ಬಳಿ ಬರುವ ಮೊದಲು ಒಬ್ಬ ಗುಮಾಸ್ತನ ಬಳಿ ಇದ್ದನಂತೆ. ಅವನಿಗೆ ಏನೋ ತೊಂದರೆ ಇದ್ದಿರಬೇಕು. ಕುಡಿದದ್ದು ಜಾಸ್ತಿಯಾಗಿ ಒಂದು ದಿನ ಸತ್ತೇಹೋದ. ನಾನಿಷ್ಟು ಹೊತ್ತೂ ಹೇಳಿದೆನಲ್ಲ- ಆ ಮನುಷ್ಯನ ಹೆಸರು ಎಮಿಲ್ಯಾನ್ ಇಲ್ಯಿಚ್. ಇವನನ್ನು ಏನು ಮಾಡುವುದು ಎಂದೇ ನನಗೆ ತೋಚಲಿಲ್ಲ. ಸುಮ್ಮನೆ ಓಡಿಸುವುದಕ್ಕೂ ಮನಸ್ಸು ಬರಲಿಲ್ಲ. ಅದೇನು ಅನುಕಂಪವೋ ತಿಳಿಯದು. ನೀವು ಊಹಿಸುವುದಕ್ಕೂ ಸಾಧ್ಯವಿಲ್ಲ ಸರ್. ಅವನ ದುರವಸ್ಥೆ ಕರುಣೆ ಉಕ್ಕಿಸುವಂಥದ್ದು. ಒಂದು ಮಾತೂ ಆಡುತ್ತಿರಲಿಲ್ಲ. ನನ್ನ ಕಣ್ಣಲ್ಲಿ ಕಣ್ಣಿಟ್ಟು ನಾಯಿಯ ತರಹ ನೋಡುತ್ತ ಕುಳಿತಿರುತ್ತಿದ್ದ.

"ಕುಡಿತ ಮನುಷ್ಯನಿಗೆ ಮಾಡುವುದು

ಇದನ್ನೇ ಅನ್ನಿಸುತ್ತೆ. 'ನೋಡು ಎಮಿಲ್ಯಾನ್, ಇದು ನಿನಗೆ ಸರಿಯಾದ ಜಾಗ ಅಲ್ಲ. ಮೊದಲು ಇಲ್ಲಿಂದ ಹೊರಟುಹೋಗು. ನನಗೇ ತಿನ್ನಲು ಗತಿ ಇಲ್ಲ. ಅಂಥಾದ್ರಲ್ಲಿ ನಿನ್ನನ್ನು ನಾನು ಹೇಗೆ ಇಟ್ಟುಕೊಳ್ಳುವುದು ?' ಅಂತ ಹೇಳಲೂ ಆಗಲಿಲ್ಲ. ಹಾಗೇನಾದರೂ ನಾನು ಹೇಳಿದ್ದಲ್ಲಿ ಆತ ಏನು ತಾನೇ ಮಾಡ್ತಾ ಇದ್ದ, ಒಂದೋ- ನನ್ನ ಮಾತು ಅವನಿಗೆ ಎಷ್ಟು ತಿಳೀತಿತ್ತೋ ಗೊತ್ತಿಲ್ಲ, ನನ್ನನ್ನೇ ನೋಡ್ತಾ ಕೂತಿರ್‍ತಿದ್ದ, ಇಲ್ಲವೆ ತನ್ನ ಹಳೇ ಚಿಂದಿಗಂಟನ್ನು ಬಿಚ್ಚಿಕೊಂಡು ಅದರಲ್ಲಿದ್ದ ಚಳಿಗಾಲದ ಕೋಟನ್ನು ತೇಪೆ ಹಾಕೋದಕ್ಕೆ ಶುರುಮಾಡ್ತಿದ್ದ. ನಂತರ ಕಣ್ಣಲ್ಲಿ ನೀರು ತುಂಬಿಸಿಕೊಂಡು ಬಾಗಿಲಿನ ಕಡೆ ಹೋಗ್ತಿದ್ದ. ಅವನನ್ನು ಹಾಗೆ ನಾಯಿಪಾಡು ಮಾಡಲು ನನಗೆ ಮನಸ್ಸು ಬರಲಿಲ್ಲ. ಒಂದು ಕ್ಷಣ ಯೋಚಿಸಿದೆ. ನಾಳೆ ನನ್ನ ಕೆಲಸ ಹೋದರೆ ನನ್ನ ಗತಿಯೂ ಹೀಗೇ ತಾನೆ? ನಾನು ನನಗೇ ಹೇಳಿಕೊಳ್ಳುತ್ತಿದ್ದೆ. 'ಎಮಿಲ್ಯಾನ್, ಇನ್ನು ಬಹಳ ದಿನ ನೀನು ನನ್ನ ದುಡ್ಡಿನಲ್ಲಿ ತಿಂದು ಕುಡಿದು ಮಜಾ ಮಾಡಬಹುದು ಅಂತ ಲೆಕ್ಕ ಹಾಕಬೇಡ. ಕೆಲವೇ ದಿನ, ನಾನು ಹೊರಟುಬಿಡ್ತೀನಿ. ಆಮೇಲೆ ನಾನು ನಿನಗೆ ಸಿಕ್ಕುವ ಸಾಧ್ಯತೆ ಹತ್ರಕ್ಕೆ ಒಂದು ಇರಬಹುದು.'

"ಇರಲಿ, ಒಂದು ದಿನ ನಾನು ಹೊರಟೇಬಿಟ್ಟೆ. ನನ್ನ ಧಣಿ' ಅಲೆಕ್ಸಾಂಡರ್ ಫಿಲಿಮಿನೋವಿಚ್ (ಈಗ ಬದುಕಿಲ್ಲ, ಅವನ ಆತ್ಮಕ್ಕೆ ಶಾಂತಿಯಿರಲಿ !) 'ನಿನ್ನ ಕೆಲಸ ನನಗೆ ತುಂಬ ಮೆಚ್ಚಿಗೆಯಾಗಿದೆ ಅಸ್ಟೆಫಿ, ಪುನಃ ನೀನು ವಾಪಸ್ ಬಂದ್ರೆ ನಿನ್ನನ್ನು ಕೆಲಸಕ್ಕೆ ತಗೊಳ್ತೀನಿ' ಎಂದ. ನಾನು ಅವನ ಅಡಿಗೆಯವನಾಗಿದ್ದೆ. ಅವನ ಬಳಿ ಮಾತನಾಡಿದ ನಂತರ ನನ್ನ ಸಾಮಾನುಗಳನ್ನು ಕಟ್ಟಿಕೊಂಡು, ಇದ್ದಷ್ಟು ಹಣದೊಡನೆ, ನನಗೆ ಪರಿಚಯವಿದ್ದ ಒಬ್ಬ ಮನೆಮಾಲಿಕಳ ಬಳಿಗೆ ಹೋದೆ. ಒಂದು ಚಿಕ್ಕ ಕೋಣೆಯನ್ನು ಬಾಡಿಗೆಗೆ ಹಿಡಿದೆ. ಆಕೆ ನರ್ಸ್ ಆಗಿದ್ದವಳು. ಪಿಂಚಣಿ' ಬರುತ್ತಿತ್ತು. 'ಗುಡ್‌ಬೈ ಎಮಿಲ್ಯಾನ್, ನೀನು ನನ್ನನ್ನು ಭೇಟಿ ಮಾಡುವುದು ಸಾಧ್ಯವೇ ಇಲ್ಲ' ಎಂದುಕೊಂಡು ನೆಮ್ಮದಿಯಿಂದಿದ್ದೆ.

"ಇದಕ್ಕೆ ಏನು ಹೇಳ್ತೀರಿ ಸರ್, ಅಂದು ಸಂಜೆ ನಾನು ಯಾರನ್ನೋ ನೋಡಿ ಹಿಂತಿರುಗಿದ್ದೆ. ಹರಿದ ಕೋಟಿನ ಎಮಿಲ್ಯಾನ್, ಸ್ವಲ್ಪ ಹೊತ್ತಿಗೆ ಮುಂಚೆ ನನ್ನ ಮನೆ ಮಾಲಿಕಳಿಂದ ಎರವಲು ಪಡೆದ ಪ್ರಾರ್ಥನಾ ಪುಸ್ತಕವನ್ನು ತಲೆಕೆಳಗಾಗಿ ಹಿಡಿದು ನನ್ನ ಪೆಟ್ಟಿಗೆಯ ಮೇಲೆ ಕುಳಿತಿದ್ದ! ಬ್ರಹ್ಮೇತಿ! ನನ್ನ ಬಳಿ ಇರುತ್ತೇನೆಂದು ಬಂದವನನ್ನು ಬಿಟ್ಟು ಬಂದುದು ನನ್ನದೇ ತಪ್ಪು. ಬದಲಾಗಿ ನಿನ್ನ ಪಾಸ್‌ಪೋರ್ಟ್ ಮರೆತುಬಂದಿಲ್ಲವೇ ಎಂದು ಕೇಳಬೇಕಿತ್ತು.

"ಸರಿ, ಮುಂದೇನು ಮಾಡಬೇಕು ಅಂತ ಯೋಚನೆ ಮಾಡುತ್ತಾ ಕುಳಿತೆ. ನನಗನ್ನಿಸಿತು- 'ಒಬ್ಬ ಮನೆ-ಮಠ ಇಲ್ಲದಿರೋ ಭಿಕಾರಿ ನನಗೇನು ತೊಂದರೆ ಮಾಡಿಯಾನು ? ಹಾಗೇನಾದರೂ ಮಾಡಿದ ಅಂತ ಇಟ್ಟುಕೊಂಡರೂ, ಅದರಿಂದಾಗುವ ನಷ್ಟ ಭಾರಿಯದೇನೂ ಅಲ್ಲ.' ಅವನಿಗೆ ಹಸಿವಾಗಿರುತ್ತೆ. ತಿನ್ನಲು ಸ್ವಲ್ಪ ಬ್ರೆಡ್, ಬಾಯಿ ರುಚಿಗೆ ಇರಲಿ ಅಂತ ಒಂದು ಈರುಳ್ಳಿ, ಕೊಟ್ಟೆ. ರಾತ್ರಿಗೂ ಅದೇ ಆಹಾರ, ಅವನು ಕೇಳಿದಾಗ ಮಾತ್ರ ಒಂದೊಂದು ದಿನ ಕೋಸಿನ ಸಾರು ಸಿಕ್ಕಿದರೆ ಅಂದು ನಮಗೆ ಅದೇ ಹಬ್ಬ. ನಾನು ಅಂಥ ತಿಂಡಿಪೋತ ಏನೂ ಅಲ್ಲ. ನಿಮಗೆ ತಿಳಿದಿರೋ ಹಾಗೆ ಕುಡುಕರ ಊಟ ಕಡಿಮೆಯೇ. ಜತೆಗೆ ಸ್ವಲ್ಪ ವೋಡ್ಕಾ ಮತ್ತು ಬ್ರಾಂದಿ. ತನ್ನ ಕುಡಿತದಿಂದ ನನ್ನನ್ನು ಹಾಳುಮಾಡಿಬಿಡ್ತಾನೆ ಅಂತ ನನಗೆ ಅನ್ನಿಸಿತು. ಆದರೆ ಅದು ಹೇಗೆ, ಏಕೆ ಎನ್ನೋದು ಸ್ಪಷ್ಟವಾಗಲಿಲ್ಲ. ಎಮಿಲ್ಯಾನ್ ಹೊರಟು ಹೋದ ಮೇಲೆ ನನಗೆ ಇನ್ನೇನೂ ಕೆಲಸ ಉಳಿದಿರಲಾರದು. ಆ ಕ್ಷಣದಲ್ಲೇ ನಾನು ಅವನ ಪೋಷಕನಾಗಿ ಇರಬೇಕೆಂದು ನಿರ್ಧರಿಸಿದೆ. ಅವನ ಕುಡಿತವನ್ನು ಹೇಗಾದರೂ ಬಿಡಿಸಬೇಕು, ಅವನನ್ನು ಒಳ್ಳೆಯ ದಾರಿಗೆ ಹಚ್ಚಬೇಕು ಎಂದು ತೀರ್ಮಾನಿಸಿದೆ.

"ಮೊದಲು ಅವನನ್ನು ಯಾವುದಾದರೂ ಉದ್ಯೋಗಕ್ಕೆ ತೊಡಗಿಸಬೇಕು, ಅವನ ಯೋಗ್ಯತೆಗೆ ತಕ್ಕ ಕೆಲಸವಾದರೆ ಸಾಕು ಎಂದುಕೊಂಡೆ. ಅದನ್ನೂ ತಕ್ಷಣ ಮಾಡಲು ಸಾಧ್ಯವಿರಲಿಲ್ಲ. ಸ್ವಲ್ಪ ದಿನ ಮಜಾ ಮಾಡಲಿ, ಇವನು ಯಾವ ಕೆಲಸಕ್ಕೆ ಲಾಯಕ್ಕು ಎಂದು ಯೋಚಿಸಿದರೆ ಯಾವುದಕ್ಕೂ

ಪ್ರಯೋಜನವಿಲ್ಲದವನೆಂಬುದು ತಿಳಿದ ಸಂಗತಿಯೇ. ಉತ್ತಮ ಉಚಿತ ಸಲಹೆ ಕೊಡಲು ಬರಗಾಲ ಯಾರಿಗೂ ಇರುವುದಿಲ್ಲವಷ್ಟೇ! ಅವನಿಗೆ ಹೇಳಿದೆ, 'ನೋಡು ಎಮಿಲ್ಯಾನ್, ನಿನ್ನ ಹರುಕು ಬಟ್ಟೇನೋ, ವೇಷಾನೋ ನೋಡೋಹಾಗಿದೆಯೇ, ಇರೋದ್ರಲ್ಲಿ ಸ್ವಲ್ಪ ನೀಟಾಗಿ ಕಾಣುವಂತ ಇರಬಾರದೆ?'

"ಕತ್ತು ಬಗ್ಗಿಸಿ ಕುಳಿತ ಎಮಿಲ್ಯಾನ್ ನನ್ನ ಉಪದೇಶವನ್ನು ಕೇಳುತ್ತಲೇ ಇದ್ದ. ನಾನು ಹೇಳಿದ್ದರಲ್ಲಿ ಎಷ್ಟು ಅವನ ತಲೆಗೆ ಹೋಯಿತೋ ತಿಳಿಯದು. ನಾನು ಹೇಳುವುದನ್ನು ಕೇಳಿಸಿಕೊಂಡ ನಂತರ ದೊಡ್ಡದಾಗಿ ನಿಟ್ಟುಸಿರುಬಿಟ್ಟ.

" 'ಯಾಕೆ ಎಮಿಲ್ಯಾನ್, ಅಷ್ಟು ಜೋರಾಗಿ ನಿಡುಸುಯ್ಯುತ್ತಿದ್ದೀ?'

" 'ಓಹ್! ಏನೂ ಇಲ್ಲ ಬಿಡು ಅಸ್ಟೆಫಿ, ನಿನಗೆ ಗೊತ್ತೇ, ಇವತ್ತು ಬೀದಿಯಲ್ಲಿ ಇಬ್ಬರು ಹೆಂಗಸರು ಜಗಳಕಾಯ್ತಾ ಇದ್ದರು. ಒಬ್ಬಳು ಇನ್ನೊಬ್ಬಳ ಬುಟ್ಟೀನ ಕಿತ್ತು ಹಾಕಿದಳು.'

" 'ಯಾಕೆ?'

" 'ಆ ಇನ್ನೊಬ್ಬಳೂ ಮೊದಲಿನವಳ ಬುಟ್ಟಿಯನ್ನು ಕಿತ್ತು ಹಾಕಿದಳು.'

" 'ಆದ್ರೆ ಇದರಿಂದ ಏನಾಯ್ತು ಎಮಿಲ್ಯಾನ್?'

" 'ಇಲ್ಲ, ಏನೂ ಆಗ್ಲಿಲ್ಲ. ಏನೋ ನಿನಗೆ ಹೇಳಬೇಕೂಂತ ಅನ್ನಿಸಿತು, ಹೇಳಿದೆ ಅಷ್ಟೆ.'

" 'ಎಮಿಲ್ಯಾನ್, ನಿನಗೆ ಹುಚ್ಚು ಹಿಡಿದಿಲ್ಲವಷ್ಟೆ?'

" 'ಅಸ್ಟೆಫಿ, ಯಾರೋ ಒಬ್ಬ ದೊಡ್ಡ ಮನುಷ್ಯರು ಬೀದೀಲಿ ಒಂದು ನೋಟು ಬೀಳಿಸಿಕೊಂಡು ಹೋದರು. ಒಬ್ಬ ರೈತ ಅದನ್ನು ನೋಡಿದ. ಆಹಾ! ನನ್ನ ಅದೃಷ್ಟ ಅಂತ ಅದನ್ನು ಎತ್ತಿಕೊಳ್ಳಲು ಹೋದ. ಅದೇ ಸಮಯಕ್ಕೆ ಇನ್ನೊಬ್ಬ ರೈತ ಆಹಾ! ನನ್ನ ಅದೃಷ್ಟ ಅಂತ ಮುನ್ನುಗ್ಗಿದ. ನಾನು ಮೊದಲು ನೋಡಿದ್ದು ಅಂತ ಚರ್ಚೆ ಶುರುವಾಯಿತು.'

" 'ಹ್ಞಾ! ಆಮೇಲೆನಾಯ್ತು'

" 'ಇನ್ನೇನಾಗುತ್ತೆ.... ಇವರಿಬ್ಬರೂ ಹೊಡೆದಾಡ್ತಿದ್ರು. ಒಬ್ಬ ಪೋಲೀಸ್‌ನವನು ಬಂದು ಆ ನೋಟನ್ನು ದೊಡ್ಡ ಮನುಷ್ಯರಿಗೆ ವಾಪಸ್ ಕೊಟ್ಟ. ಆ ರೈತರನ್ನು ಪೋಲೀಸ್ ಸ್ಟೇಶನ್ನಿಗೆ ಕರೆದುಕೊಂಡು ಹೋಗ್ತೀನಿ ಅಂತ ಬೆದರಿಕೆ ಹಾಕಿದ.'

> ಮೂಗ ಮಾತನಾಡಬಲ್ಲಂಥ ಹಾಗೂ ಕಿವುಡ ಆಲಿಸಿ ಅರ್ಥ ಮಾಡಿಕೊಳ್ಳಬಲ್ಲಂಥ ಮಾಧ್ಯಮವೆಂದರೆ ದಯೆ.
>
> ಕ್ರಿಶ್ಚಿಯನ್ ಬೋವೀ

" 'ಇದರಲ್ಲೇನು ವಿಶೇಷ ಇದೆ?'

" 'ವಿಶೇಷ ಅಂತ ನಿನಗೆ ಇದನ್ನು ಹೇಳಲಿಲ್ಲ. ಬೀದೀಲಿ ಜನಗಳು ನೋಡ್ತಾ ನಗ್ತಾ ಇದ್ದರು.'

" 'ಓಹ್! ಎಮಿಲ್ಯಾನ್, ಬೀದಿಯ ಜನಗಳು ಏನು ಅಂದ್ಕೊಂಡ್ರೆ ನಿನಗೇನು? ನಿನ್ನ ಬಗ್ಗೆ ನೀನು ಯೋಚನೆ ಮಾಡು. ನಿನ್ನ ಪವಿತ್ರ ಜೀವನವನ್ನು ಕುಡಿತಕ್ಕೆ ಮಾರಿಕೊಂಡಿದ್ದೀಯೆ. ನಿನಗೆ ತಿಳಿಯೋಲ್ವಾ ಎಮಿಲ್ಯಾನ್?'

" 'ಏನು ಅಸ್ಟೆಫಿ?'

"ನೀನ್ಯಾಕೆ ಯಾವುದಾದರೊಂದು ಕೆಲಸಕ್ಕೆ ಸೇರಿಕೋಬಾರದು?'

" 'ನನಗೆ ಏನು ಕೆಲಸ ಗೊತ್ತಿದೆ ಅಸ್ಟೆಫಿ, ನನಗೆ ಯಾರೂ ಕೆಲಸ ಕೊಡೋದಿಲ್ಲ.'

" 'ಅದು ಸರಿ. ನಿನ್ನಂಥ ಕುಡುಕನಿಗೆ ಯಾರು ತಾನೇ ಕೆಲಸ ಕೊಡ್ತಾರೆ. ನಿನ್ನನ್ನು ಕೆಲಸದಿಂದ ತೆಗೆದದ್ದಾದರೂ ಯಾಕೆ ಅಂತ ಗೊತ್ತಿದೆಯಲ್ಲ.'

" 'ಅದೇ, ವ್ಲಾಸ್ ಇದ್ದನಲ್ಲಾ, ಅವನನ್ನು ಆಫೀಸಿನವರು ಇವತ್ತು ಬರೋದಕ್ಕೆ ಹೇಳಿದರಂತೆ.'

" 'ಯಾತಕ್ಕೆ ಕರೆದ್ರು?'

" 'ಗೊತ್ತಿಲ್ಲ ಅಸ್ಟೆಫಿ, ಅವನು ಅವರಿಗೆ ಪುನಃ ಬೇಕಾಗಿರಬಹುದು. 'ನನಗೂ ನಿನಗೂ ಬೇರೆ ಯಾರೂ ಕರೆಯೋದಿಲ್ಲ ಅಂತ ಕಾಣಿಸುತ್ತೆ. ದೇವರು ಈಗ ನಮಗೆ ಶಿಕ್ಷೆ ಕೊಡುತ್ತಿರಬಹುದು. ಆದಕ್ಕೇ ಹೀಗಿದ್ದೇವೆ.' ಇಂಥ ಮನುಷ್ಯನ ಜತೆ ಏನು ಮಾಡೋದು ಹೇಳಿ ಸರ್.

"ಆದರೆ ಆತ ಬಹಳ ಹುಷಾರಿ ಕೂಡ. ನಾನು ಹೇಳೋದನ್ನೆಲ್ಲಾ ನಿಧಾನವಾಗಿ ಕೇಳಿಸಿಕೊಳ್ತಿದ್ದ. ನನಗೆ ಕೋಪ ಬರೋ ಸೂಚನೆ ಗೊತ್ತಾದ

ಕೂಡಲೇ ತನ್ನ ಕೋಟನ್ನು ಎತ್ತಿಕೊಂಡು ರಿಪೇರಿ ಮಾಡುವಂತೆ ನಟಿಸುತ್ತಿದ್ದ. ದಿನಾ ಬೆಳಿಗ್ಗೆ ಎದ್ದು ಸುತ್ತುವುದಕ್ಕೆ ಹೊರಡ್ತಿದ್ದ. ಸಂಜೆಯಾದರೆ ಸಾಕು ಕುಡಿದು ಬಂದು ಬೀಳುತ್ತಿದ್ದ. ಅವನಿಗೆ ಕುಡಿಯಲು ಹಣ ಎಲ್ಲಿಂದ ಬರುತ್ತಿತ್ತೋ, ಯಾರು ಕುಡಿಯಲು ಕೊಡುತ್ತಿದ್ದರೋ ಏನೂ ಗೊತ್ತಿಲ್ಲ.

"ಒಂದು ದಿನ ಕೋಪ ತಡೆಯದೇ ಹೇಳಿದ, 'ಎಮಿಲ್ಯಾನ್, ನೀನು ದಿನಾ ಹೀಗೆ ಕುಡೀತಿದ್ರೆ ಹೆಚ್ಚು ದಿನ ಬದುಕಲಾರೆ. ಇವತ್ತು ಏನಾದ್ರೂ ಕುಡಿದು ಬಂದರೆ ಬಾಗಿಲು ತೆಗೆಯುವುದಿಲ್ಲ, ಇಲ್ಲೇ ಮೆಟ್ಟಲ ಮೇಲೆ ಬಿದ್ದಿರಬೇಕಾಗುತ್ತ ಹುಷಾರ್ !'

"ನಾನು ಕಠಿಣವಾಗಿ ಹೇಳಿದ್ದು ಸ್ವಲ್ಪ ಪರಿಣಾಮ ಬೀರಿರಬೇಕು. ಎರಡು ದಿನ ಎಲ್ಲೂ ಹೋಗಲಿಲ್ಲ. ಮೂರನೆಯ ದಿನ ಮತ್ತ ಅದೇ ಕತೆ. ನಾನು ಕಾಯುತ್ತಲೇ ಇದ್ದೆ, ಅವನು ಬರಲಿಲ್ಲ. ನಿಜ ಹೇಳ್ತೀನಿ ಸರ್, ನನಗೆ ತುಂಬಾ ಆತಂಕವಾಯಿತು. ರಾತ್ರಿಯಾದರೂ ಬರಲಿಲ್ಲ. ಬೆಳಿಗ್ಗೆ ಎದ್ದು ನೋಡಿದೆ. ಮೆಟ್ಟಲಿನ ಬುಡದಲ್ಲಿ ಅದಕ್ಕೇ ತಲೆ ಕೊಟ್ಟು ನಿದ್ರೆ ಮಾಡುತ್ತಿದ್ದ. ಇಡೀ ರಾತ್ರಿ ಮೂಳೆ ಕೊರೆಯುವ ಚಳಿಯಲ್ಲಿ ಹಾಗೇ ಬಿದ್ದುಕೊಂಡಿದ್ದ.

" 'ಇದೇಕೆ ಹೀಗೆ ಮಾಡಿದೆ ಎಮಿಲ್ಯಾನ್, ?'

" 'ಮೊನ್ನೆ ನೀನು ತುಂಬ ಕೋಪ ಮಾಡಿಕೊಂಡಿದ್ದೆ ಅಸ್ಟೆಫಿ. ಮನೆಯಿಂದ ಹೊರಗೆ ಹಾಕ್ತೀನಿ ಅಂತಲೂ ಹೇಳಿದೆ. ನನಗೆ ಒಳಗೆ ಬರಲು ಧೈರ್ಯ ಸಾಲಲಿಲ್ಲ. ಅದಕ್ಕೆ ಇಲ್ಲಿ ಮಲಗಿದೆ.'

"ನನಗೆ ಹುಚ್ಚು ಕೋಪ ಒಂದು ಕಡೆ, ಅವನ ದೈನ್ಯಾವಸ್ಥೆಗೆ ಮರುಕ ಇನ್ನೊಂದೆಡೆ. ನೀನು ಬೇರೆ ಏನಾದರೂ ಕೆಲಸ ಮಾಡಬಹುದಿತ್ತು. ಈ ಮೆಟ್ಟಲು ಕಾದಿದ್ದಕ್ಕೆ ಏನು ಫಲ ಇದೆ ಹೇಳು ?'

" 'ಬೇರೆ ಅಂಥ ಕೆಲಸ ಏನಿದೆ ಅಸ್ಟೆಫಿ ?'

" 'ಪ್ರಯೋಜನಕ್ಕೆ ಬಾರದ ಮುಠ್ಠಾಳ. ಕೊನೇಪಕ್ಷ ದರ್ಜಿ ಕೆಲಸವನ್ನಾದರೂ ಕಲಿಯಬಹುದಿತ್ತು. ನಿನ್ನ ದರಿದ್ರದ ಕೋಟು ನೋಡಿಕೋ. ಸಾಕೇ ಅಷ್ಟು ತೂತುಗಳು ? ನೆಲ ಒರಸೋದಕ್ಕೂ ಬರೋಹಾಗಿಲ್ಲ. ಒಂದು ಸೂಜಿ ದಾರ ತಗೊಂಡು ಅದನ್ನಿಷ್ಟು ಹೊಲಿದುಕೊಳ್ಳೊಕ್ಕೆ ಆಗೋಲ್ಲವೆ ? ನಿನಗೇನಾದರೂ ನಾಚಿಕೆ ಇದ್ದಿದ್ದರೆ ಇಷ್ಟು ಹೊತ್ತಿಗೆ ಅದನ್ನು ಹೊಲಿದು ಸರಿ ಮಾಡಿಟ್ಟುಕೊಳ್ಳುತ್ತಿದ್ದೆ ಕುಡುಕ ಸೋಂಭೇರಿ.'

"ನಂಬ್ತೀರಾ ಸರ್. ನಾನು ಸಿಟ್ಟಿನಲ್ಲಿ ತಮಾಷೆಗ ಹೇಳಿದ್ದನ್ನು ನಿಜ ಅಂತ ತಿಳ್ಕೊಂಡು ಸೂಜಿ ದಾರ ತಂದು ಹೊಲಿಯೋದಕ್ಕೆ ಶುರುಮಾಡಿದ. ಕೋಟನ್ನು ತೆಗೆದು ಹಾಕಿ ಸೂಜಿಗೆ ದಾರ ಪೋಣಿಸಲು ಹೆಣಗಾಡಿದ. ಅದನ್ನು ನೋಡಿಯೇ ನನಗೆ ಬೇಸರವಾಯಿತು. 'ಸೂಜಿಗೆ ದಾರ ಪೋಣಿಸುವುದು ನಿನ್ನ ಹಣೆಯಲ್ಲಿ ಬರೆದಿಲ್ಲ. ಸಾಕು ಅದನ್ನು ನಿಲ್ಲಿಸು. ಇನ್ನು ಮುಂದೆಯಾದರೂ ನನ್ನ ಮರ್ಯಾದೆ ತೆಗೆಯುವ ಕೆಲಸ ಮಾಡಬೇಡ, ಮೆಟ್ಟಲು ಕೆಳಗೆ ಮಲಗಬೇಡ' ಎಂದೆ.

" 'ಬೇರೆ ಏನು ಮಾಡಲಿ ಅಸ್ಟೆಫಿ, ನಾನು ಕುಡುಕ. ಯಾವುದಕ್ಕೂ ಉಪಯೋಗವಿಲ್ಲದವ. ಏನೋ ನೀನು ದಯ ತೋರಿಸಿರೋದ್ರಿಂದ ಇನ್ನೂ ಬದುಕಿದ್ದೇನೆ. ನಿನಗೆ ಅನಗತ್ಯವಾದ ತೊಂದರೆ.'

"ಸರ್, ಇದನ್ನು ಹೇಳುತ್ತಿರುವಂತೆಯೇ ಅವನ ನೀಲಿ ತುಟಿಗಳು ನಡುಗುತ್ತಿದ್ದವು. ಕಂದಿದ ಕೆನ್ನೆಯ ಮೇಲೆ ನೀರು ದಳದಳನೆ ಇಳಿಯಲಾರಂಭಿಸಿತು. 'ನೀನು ಇಷ್ಟೊಂದು ಮೃದು ಅಂತ ನನಗೆ ಗೊತ್ತಿರಲಿಲ್ಲ ಎಮಿಲ್ಯಾನ್. ನಾನು ನನಗೆ ಮೋಸ ಮಾಡಿಕೊಂಡಿರಬಾರದಾಗಿತ್ತು. ನಿನ್ನ ಬಗ್ಗೆ ಆಸಕ್ತಿಯನ್ನೇ ತೋರಿಸಿರಬಾರದು. ಎಲ್ಲಾದರೂ ಹಾಳಾಗಿ ಹೋಗು ಅಂತ ಬಿಟ್ಟಿದ್ದರೆ ಚೆನ್ನಾಗಿತ್ತು' ಎಂದು ಮನಸ್ಸಿನಲ್ಲೇ ಅಂದುಕೊಂಡೆ.

"ಎಷ್ಟು ಹೇಳಿದರೆ ತಾನೇ ಏನಿದೆ ಸರ್, ಜ್ಞಾಪಿಸಿಕೊಂಡರೆ ಅದನ್ನು ವರ್ಣಿಸಲು ಪದಗಳೇ ಇರಲಿಕ್ಕಿಲ್ಲ. ನನ್ನ ಅದೃಷ್ಟವನ್ನೇ ಒಂದು ಹಿತ್ತಾಳೆ ಕಾಸಿಗೆ ಬದಲಾಯಿಸಿಕೊಳ್ಳಲು ತಯಾರಾಗಿದ್ದೆ. ನನ್ನಂಥವನಿಗೆ ಹೀಗೆ ಆಗಬಾರದಿತ್ತು. ನನ್ನ ಬಳಿ ಒಂದು ಸೊಗಸಾದ ನೀಲಿ ಚೌಕಳಿಯ ಪ್ಯಾಂಟ್ ಇತ್ತು ಸರ್. ಕುದುರೆ ಸವಾರಿಗೆ ಬಳಸುವಂಥದ್ದು. ಯಾರೋ ಹಳ್ಳಿಯ ಶ್ರೀಮಂತ ಹೊಲಿಯಲು ಕೊಟ್ಟಿದ್ದ. ತನಗೆ ಅಳತೆ ಸರಿಯಾಗಲಿಲ್ಲವೆಂದೋ ಏನೋ ಅದನ್ನು ಮರಳಿ ಒಯ್ಯಲಿಲ್ಲ. ಹಾಗಾಗಿ ಅದು ನನ್ನ ಬಳಿಯೇ ಉಳಿಯಿತು. ಸೊಗಸಾದ ಬಟ್ಟೆ. ಗುಜರಿಯಲ್ಲಿ ಮಾರಿದ್ದರೂ ಹದಿನೈದು ರೂಬಲ್ ಬರುತ್ತಿತ್ತು. ಹಾಗೆ ಹಾಕಿದ್ದೆ ಅಂದುಕೊಂ

ದರೂ ಒಂದು ಜತೆ ಒಳ್ಳೆಯ ಪ್ಯಾಂಟ್, ವೇಸ್ಟ್ ಕೋಟು ಆಗುವಷ್ಟು ಹಣ ಸಿಕ್ಕುತ್ತಿತ್ತು. ನಮ್ಮಂಥ ಬಡವರಿಗೆ ಸ್ವಲ್ಪ ಸಿಕ್ಕಿದರೂ ಅದೇ ಅಪಾರವೆಂದು ಕೊಳ್ಳುತ್ತೇವೆ. ಎಮಿಲ್ಯಾನ್‌ಗೂ ಕಷ್ಟದ ದಿನಗಳೇ. ಒಂದು ಹನಿ ಕೂಡ ಕುಡಿದಿರಲಿಲ್ಲ. ಕೆಲವು ದಿನಗಳಿಂದ ನನ್ನ ಭಯಕ್ಕೇ ಇರಬಹುದು. ಯಾವಾಗಲೂ ಮಂಕಾಗಿಯೇ ಇರುತ್ತಿದ್ದ. ಅವನ ಸಂಕಟ ನೋಡಿದರೆ ನನಗೇ ಬೇಸರವಾಗುತ್ತಿತ್ತು. 'ಹಣ ಇಲ್ಲ ಅನ್ನೋ ಕಾರಣಕ್ಕೋ ಅಥವಾ ನೀನೇ ಸಂಭಾವಿತನಾಗ್ತಿದ್ದೀಯೋ, ಹೇಗಿದ್ದರೂ ಸರಿ, ಅಂತೂ ಕುಡಿಯೋದನ್ನು ನಿಲ್ಲಿಸಿದ್ದೀಯಲ್ಲಾ ನನಗೆ ಅದೇ ಸಂತೋಷ' ಅಂದುಕೊಂಡೆ. ಅಂದು ಚರ್ಚಿನಲ್ಲಿ ಪೂಜೆ ಇತ್ತು. ಮುಗಿಸಿಕೊಂಡು ಬರೋಣ ಎಂದು ಹೋದೆ. ಮರಳಿ ಬಂದು ನೋಡಿದಾಗ ಎಮಿಲ್ಯಾನ್ ಕಂಠಮಟ್ಟ ಕುಡಿದು ಕಿಟಕಿಯ ಸಜ್ಜದ ಮೇಲೆ ಕುಳಿತು ಜೂಗರಿಸುತ್ತಿದ್ದಾನೆ ! 'ಮಗನೇ ನಿನ್ನ ಚಾಳಿ ನೀನೆಲ್ಲಿ ಬಿಡ್ತೀಯಾ' ಎಂದುಕೊಂಡವನು ಒಳಬಂದು ನನ್ನ ಪೆಟ್ಟಿಗೆಯಲ್ಲಿ ಏನನ್ನೋ ಹುಡುಕಲು ತೆರೆದೆ. ಮೇಲೇ ಕಾಣಿಸುವ ಹಾಗೆ ಇಟ್ಟಿದ್ದ ನನ್ನ ಪ್ಯಾಂಟ್ ಕಾಣೆಯಾಗಿತ್ತು. ಇಡೀ ಪೆಟ್ಟಿಗೆಯನ್ನು ಜಾಲಾಡಿದರೂ ಪ್ಯಾಂಟ್ ಸಿಕ್ಕಲಿಲ್ಲ. ಮನೆಯಲ್ಲಾ ತಡಕಾಡಿದೆ.

ಏನೂ ಪ್ರಯೋಜನವಾಗಲಿಲ್ಲ. ಮನಸ್ಸಿನಲ್ಲಿ ಏನೋ ಚುಚ್ಚಿದ ಅನುಭವವಾಗುತ್ತಿತ್ತು. ಹುಚ್ಚನಂತೆ ಕೆಳಗೆ ಇಳಿದು ಹೋಗಿ ಮನೆ ಮಾಲಿಕಳ ಬಳಿ ಹೋಗಿ ಕಳ್ಳತನದ ಬಗ್ಗೆ ಕೂಗಾಡಿ, 'ನೀನೇ ಕಳ್ಳತನ ಮಾಡಿಸಿದ್ದೀ' ಎಂದೂ ಒದರಿದೆ. ನಾನು ಏನು ಹೇಳುತ್ತಿದ್ದೆನೋ ನನಗೇ ತಿಳಿಯುತ್ತಿರಲಿಲ್ಲ. ನೀವೇ ಸುಲಭವಾಗಿ ಊಹಿಸುವಂತೆ ಕಂಠಪೂರ್ತಿ ಸೆರೆ ಹೀರಿ ಜೂಗರಿಸುತ್ತಿದ್ದ ಎಮಿಲ್ಯಾನ್ ಕಣ್ಣ ಮುಂದೆ ಕುಳಿತಿದ್ದರೂ ಅವನ ಬಗ್ಗೆ ಸ್ವಲ್ಪವಾದರೂ ಅನುಮಾನ ಬಾರದಿದ್ದುದು ಆಶ್ಚರ್ಯವಲ್ಲವೆ ? 'ಇಲ್ಲಾ ನಾನು ಯಾಕೆ ನಿಮ್ಮ ಪ್ಯಾಂಟ್ ತೆಗೆದುಕೊಳ್ಳಲಿ, ನಾನೇನಾದರೂ ಹಾಕಿಕೊಳ್ಳಬೇಕಾಗಿದೆಯೇ ? ಹಾಗೆ ನೋಡಿದರೆ ನಾನೇ ನಿನ್ನ ಸ್ನೇಹಿತನ ಮೇಲೆ ಹೇಳಬಹುದು ಅಂತ ಕಾಣಿಸುತ್ತೆ. ಹಿಂದೊಂದು ದಿನ ಅಂಗಳದಲ್ಲಿ ಒಣಹಾಕಿದ್ದ ನನ್ನ ಸ್ಕರ್ಟ್ ಕಾಣಿಸಲೇ ಇಲ್ಲ. ನಾನು ನಿನ್ನನ್ನು ಕೇಳಿದೆ

> ನಾನು ಅಜ್ಞಾನಿ ಎಂದು ತಿಳಿದುಕೊಳ್ಳುವುದೇ ಜ್ಞಾನದ ಮೊದಲ ಸೋಪಾನ.
>
> ರಿಚರ್ಡ್ ಸೆಸಿಲ್

ನೇನು ?' ಬೇರೆ ಯಾರಾದರೂ ಬಂದಿದ್ದರೇನು ? ಎಂದು ಆಕೆಯನ್ನು ಕೇಳಿದೆ. 'ನಾನಂತೂ ಯಾವಾಗಲೂ ಇಲ್ಲಿಯೇ ಇರುತ್ತೇನೆ. ಯಾರು ಬಂದರೂ ನನಗೆ ತಿಳಿಯುತ್ತದೆ. ನಿನ್ನ ಸ್ನೇಹಿತ ಎಮಿಲ್ಯಾನ್ ಬೆಳಿಗ್ಗೆ ಹೊರಗೆ ಹೋಗಿದ್ದ. ಈಗ ಸ್ವಲ್ಪ ಹೊತ್ತಿಗೆ ಮುಂಚೆ ಬಂದಿದ್ದಾನೆ. ನೀನು ಯಾಕೆ ಅವನನ್ನು ಕೇಳಬಾರದು ? ಅಲ್ಲೇ ಇದ್ದಾನೆ ಕೇಳಿನೋಡು' ಎಂದು ಹೇಳಿದಳು. 'ಎಮಿಲ್ಯಾನ್, ಹೇಳು ನೀನೇನಾದರೂ ಆ ಪ್ಯಾಂಟನ್ನು ತಗೊಂಡಿದ್ದೀಯಾ ? ಕುದುರೆ ಸವಾರಿಗೆ ಬಳಸುವ ಹೊಸ ಪ್ಯಾಂಟ್, ಅದೇ ಆ ಹಳ್ಳಿಯ ಶ್ರೀಮಂತನಿಗೆ ಹೊಲಿದಿದ್ದೆನಲ್ಲ.'

" 'ಇಲ್ಲ ಅಸ್ಟೆಫಿ, ಇಲ್ಲ. ನಾನು ಅದನ್ನು ನೋಡಿದ್ದೂ ಇಲ್ಲ' ಅಂದ.

"ಪುನಃ ಎಲ್ಲವನ್ನೂ ಹುಡುಕಿದ್ದಾಯಿತು. ಆದರೆ ಎಮಿಲ್ಯಾನ್ ಮಾತ್ರ ಹಾಗೆಯೇ ಓಲಾಡುತ್ತ ಕುಳಿತಿದ್ದ. ಪೆಟ್ಟಿಗೆಯ ಕೆಳಭಾಗದಲ್ಲಿ ನೋಡುತ್ತಿರುವಾಗ ಒಮ್ಮೆ ಎಮಿಲ್ಯಾನ್‌ನತ್ತ ನೋಡಿದೆ. ನನ್ನ ಮುಖ ಕೋಪದಿಂದ ಕೆಂಪಗಾಗಿತ್ತು. ಅದನ್ನು ಗಮನಿಸಿದ ಎಮಿಲ್ಯಾನ್ 'ಇಲ್ಲ ಅಸ್ಟೆಫಿ, ನಾನು ಅದನ್ನು ತಗೊಂಡಿರಬಹುದು ಅಂತ ನೀನು ಯೋಚಿಸುತ್ತಿರಬಹುದು. ನಿಜಕ್ಕೂ ನನಗೇನೂ ತಿಳಿಯದು ಅಸ್ಟೆಫಿ.'

" 'ಹಾಗಾದ್ರೆ ಎಲ್ಲಿ ಹೋಯಿತು ಎಮಿಲ್ಯಾನ್ ?'

" 'ನನಗೆ ಗೊತ್ತಿಲ್ಲವೆಂದು ಹೇಳಲಿಲ್ಲವೆ ಅಸ್ಟೆಫಿ ?'

" 'ಅಂದರೆ ನೀನು ಹೇಳೋದು ಅದಕ್ಕೆ ಕಾಲು ಬಂದು ನಡೆದುಕೊಂಡು ಹೋಯಿತ ?'

" 'ಇದ್ದರೂ ಇರಬಹುದು.'

"ಅವನು ಹಾಗೇ ಗೊಣಗಿಕೊಳ್ಳುತ್ತಿದ್ದ. ನಾನು

ಒಂದು ಮಾತೂ ಆಡದೆ ಕಿಟಕಿಯ ಬಳಿಯಲ್ಲಿದ್ದ ದೀಪವನ್ನು ಬೆಳಗಿಸಿ ನನ್ನ ಕೆಲಸ ಪ್ರಾರಂಭಿಸಿದೆ. ಕೆಳಗಿನ ಮನೆಯ ಒಬ್ಬ ನೌಕರನಿಗೆ ವೇಸ್ಟ್‌ಕೋಟ್ ಹೊಲಿಯುವುದಿತ್ತು. ಕೋಪ ಕುದಿಯುತ್ತಿತ್ತು. ನನ್ನೆಲ್ಲ ಬಟ್ಟೆಗಳಿಗೂ ಬೆಂಕಿ ಹಚ್ಚಿದ್ದರೂ ನನಗೆ ಅಂಥ ಕೋಪ ಬರುತ್ತಿರಲಿಲ್ಲವೋ ಏನೋ. ಎಮಿ ಲ್ಯಾನ್‌ಗೆ ನಾನೆಷ್ಟು ಕುಪಿತನಾಗಿದ್ದನೆಂದು ತಿಳಿದಿರ ಬಹುದು. ಬಿರುಗಾಳಿ ಪ್ರಾರಂಭವಾಗೋ ಮೊದಲು ಪಕ್ಷಿಗಳಿಗೆ ತಿಳಿಯುವುದಿಲ್ಲವೇ ಹಾಗೆ, ಕೆಟ್ಟ ಮನುಷ್ಯನಿಗೆ ಅದರ ಮುಂದಿನ ಪರಿಣಾಮ ಗಳು ಹೊಳೆದಿರುತ್ತೆ.'

" 'ನಿನಗೆ ಗೊತ್ತೆ ಅಸ್ಸೆಫಿ ?' ತನ್ನ ನಡುಗುವ ಸ್ವರದಲ್ಲಿ ಎಮಿಲ್ಯಾನ್ ಮುಲುಗಿದ. 'ಮೊನ್ನೆ ಸತ್ತ ಗಾಡಿಯವನ ಹೆಂಡತಿಯೊಂದಿಗೆ ಆ ನರ್ಸ್ ಆಂಟಿಪ್ ಪ್ರಖೊರೊವಿಚ್ ಮದುವೆಯಾದ.'

"ನಾನು ತನ್ನ ಬೀರಿದ ಕೆಂಗಣ್ಣಿನ ನೋಟ ಎಮಿಲ್ಯಾನ್‌ಗೆ ಸರಿಯಾಗಿ ಅರ್ಥವಾಗಿತ್ತು. ಅವನು ಹಾಗೇ ನಿಧಾನವಾಗಿ ಎದ್ದು ಮಂಚದ ಕೆಳಗೆ ಏನನ್ನೋ ಹುಡುಕಲಾರಂಭಿಸಿದ. ನಾನು ನೋಡು ತ್ತಲೇ ಇದ್ದೆ. 'ಊಹ್ಞೂಂ ಇಲ್ಲಿಲ್ಲ, ಇಲ್ಲೂ ಇಲ್ಲ, ಎಲ್ಲಿ ಹೋಗಿರಬಹುದು ?' ಎಂದು ವಟಗುಟ್ಟು ತ್ತಿದ್ದ. ಮುಂದೆ ಏನಾಗಬಹುದು ಅಂತ ಕಾಯ್ತಾ ಇದ್ದೆ. ನಾಲ್ಕು ಕಾಲಿನ ಮಂಚದ ಕೆಳಗೆ ತೆವಳುತ್ತ ಇದ್ದುದನ್ನು ನೋಡಿಯೇ ನನಗೆ ಅಸಹ್ಯವಾಯ್ತು. 'ಹಾಸಿಗೆ ಕೆಳಗೆ ಏನು ಹುಡುಕ್ತಾ ಇದ್ದೀ ಎಮಿ ಲ್ಯಾನ್ ?' ಎಂದೆ.

" 'ಅದೇ ನಿನ್ನ ಪ್ಯಾಂಟ್, ಇಲ್ಲೇ ಎಲ್ಲಾದ್ರೂ ಕೆಳಗೆ ಬಿದ್ದಿರಬಹುದು.'

" 'ಆದರೆ ಸ್ವಾಮಿ ! ಒಬ್ಬ ಬಡ ಸಾಧಾರಣ ಮನುಷ್ಯನಿಗೋಸ್ಕರ ತಾವೇಕೆ ಇಷ್ಟು ತೊಂದರೆ ತೆಗೆದುಕೊಳ್ಳಬೇಕು ? ತಾವೇಕೆ ವೃಥಾ ತಮ್ಮ ಮಂಡಿಗಳನ್ನು ನೋಯಿಸಿಕೊಳ್ಳುತ್ತಿರುವಿರಿ ?' ಎಂದು ವ್ಯಂಗ್ಯವಾಗಿ ಕೇಳಿದೆ.

" 'ಹಾಗೇಕೆ ಹೇಳ್ತೀ ಅಸ್ಸೆಫಿ, ನಾವು ಹೀಗೇ ಹುಡುಕ್ತಾ ಇದ್ರೆ ಅವು ಪುನಃ ಹಿಂತಿರುಗಿ ಬರಬ ಹುದು.'

"ಅವನು ಪ್ರಾಣಿ'ಗಳ ತರಹ ತೆವಳುವುದನ್ನು ನೋಡಿ ನನಗೆ ಅಸಹ್ಯವೆನಿಸಿತ್ತು. ಅದು ಅವನ ಕಡೆಯ ಅಸ್ತ್ರ. ನಾನು ನಂಬುತ್ತೇನೆನ್ನುವ ಭ್ರಮೆ ಯಲ್ಲಿ ಈ ಹುಡುಕಾಟದ ನಾಟಕವಾಡುತ್ತಿದ್ದ. ಮಂಚದ ಕೆಳಗಿನಿಂದ ಎಷ್ಟೋ ಹೊತ್ತಿನ ನಂತರ ಹೊರಬಂದಾಗ ಬಿಳಿ ಕಾಗದದ ತರಹ ಬಿಳಿಚಿಕೊಂ ಡಿದ್ದ. ಅಲ್ಲಿಂದ ಎದ್ದು ಬಂದು ಹತ್ತು ನಿಮಿಷ ನನ್ನ ಪಕ್ಕದಲ್ಲೇ ಕುಳಿತ. ಇದ್ದಕ್ಕಿದ್ದಂತೆ ಧಡಕ್ಕನೆ ಎದ್ದು ನಿಂತು ನನ್ನನ್ನೇ ದುರುಗುಟ್ಟಿಕೊಂಡು ನೋಡುತ್ತಾ, 'ಇಲ್ಲ ಅಸ್ಸೆಫಿ ನಾನು ನಿನ್ನ ಪ್ಯಾಂಟನ್ನು ಮುಟ್ಟಿಯೂ ಇಲ್ಲ' ಎಂದು ಒದರಿದ. ಅವನ ಶರೀರ ಗಡಗಡ ನಡುಗುತ್ತಿತ್ತು. ಕಂಪಿಸುವ ಕೈಗ ಳನ್ನು ಎದೆಯ ಮೇಲೆ ಇಟ್ಟುಕೊಂಡು ಹೇಳುತ್ತಿದ್ದ. ಅವನ ಕುಗ್ಗಿದ ಸ್ವರವನ್ನು ಕೇಳುತ್ತಿರುವಂತೆಯೇ ನಾನು ಕಿಟಕಿಗೆ ಅಂಟಿಕೊಂಡು ಕುಳಿತೆ.

" 'ಆಗಲಿ ಎಮಿಲ್ಯಾನ್, ನಾನೆಂಥಾ ಹುಚ್ಚ. ಅನ್ಯಾಯವಾಗಿ ನಿನ್ನ ಮೇಲೆ ಕಳ್ಳತನದ ಆಪಾದನೆ ಮಾಡಿದೆನಲ್ಲ. ಪ್ಯಾಂಟ್ ಕಳೆದುಹೋದರೆ ಪೀಡೆ ಹೋಯಿತು. ಅದಿಲ್ಲದೇನೆ ಕೂಡ ನಾವು ಬದುಕ ಬಹುದು. ದೇವರು ನಮಗೆ ಕೊಟ್ಟಿರುವ ಕೈಗಳಿವೆ. ಭಿಕ್ಷೆ ಬೇಡಿ ಜೀವಿಸಬೇಕಾದ ಪರಿಸ್ಥಿತಿ ನಮಗಿಲ್ಲ. ಹೇಗಿದ್ದರೂ ನಮ್ಮ ಅನ್ನ ನಾವು ಸಂಪಾದಿಸಿಕೊಳ್ಳ ಬಹುದು.'

"ಎಮಿಲ್ಯಾನ್ ನನ್ನ ಮಾತನ್ನು ಮೌನವಾಗಿ ಕೇಳಿಸಿಕೊಳ್ಳುತ್ತಾ ಸಂಜೆಯಿಡೀ ಕಿಟಕಿಯ ಸಜ್ಜದ ಮೇಲೇ ಕುಳಿತಿದ್ದ. ನಾನು ಮಲಗಲು ಹೋಗುವಾ ಗಲೂ ಅಲ್ಲಿಯೇ ಇದ್ದ. ಬೆಳಿಗ್ಗೆ ಎದ್ದು ನೋಡಿದಾಗ ತನ್ನ ಹರುಕಲು ಕೋಟಿನಲ್ಲಿ ಮುದುರಿಕೊಂಡು ಬರಿಯ ನೆಲದ ಮೇಲೆ ಮಲಗಿದ್ದ. ನಿಜ ಹೇಳ್ತೀನಿ ಸರ್- ಅವತ್ತಿನಿಂದ ಅವನ ಬಗ್ಗೆ ಒಂದು ವಿಧದ ದ್ವೇಷ ಪ್ರಾರಂಭವಾಯಿತು. ನನ್ನ ಸ್ವಂತ ಮಗನೇ ನನ್ನನ್ನು ದೋಚಿದ ಹಾಗೆ ಅಥವಾ ಘಾಸಿ ಮಾಡಿದ ಹಾಗೆ ಅನ್ನಿಸುತ್ತಿತ್ತು.

"ಮುಂದಿನ ಹದಿನೈದು ದಿನಗಳವರೆಗೆ ಎಮಿ ಲ್ಯಾನ್ ಕುಡಿತದಲ್ಲಿ ತೇಲಿ ಮುಳುಗಿದ. ಹಳಿತಪ್ಪಿ ಹಾದಿಗೆಟ್ಟು ಹೋದ. ದಿನಾಲೂ ಬೆಳಿಗ್ಗೆ ಹೋದರೆ ರಾತ್ರಿಯೇ ಮನೆಗೆ ಬರುತ್ತಿದ್ದುದು. ಈ ಹದಿನೈದು ದಿನಗಳಲ್ಲಿ ನಾನು ಅವನೊಂದಿಗೆ ಒಂದು ಮಾತನ್ನೂ ಆಡಲಿಲ್ಲ. ತುಂಬಾ ಹೀನಾಯಕರವಾ ಗಿದ್ದಲ್ಲಿ ನನ್ನ ಅನುಕಂಪ ಗಳಿಸಬಹುದೆಂದು ಅವ

ನೆಣ'ಕೆ ಇರಬೇಕು. ಕೊನೆಗೊಂದು ದಿನ ಇದೆಲ್ಲ ಮುಗಿಯುವ ಹಂತಕ್ಕೆ ಬಂದು ನಿಂತಿತು. ನನ್ನ ನೆನಪು ಸರಿಯಿದ್ದರೆ, ಮೂರು ದಿನಗಳ ಕಾಲ ಕಿಟಕಿಯಿಂದ ಆಚೀಚೆ ಸರಿಯಲಿಲ್ಲ. ಇದ್ದಕ್ಕಿದ್ದಂತೆ ಕೊನೆಯ ದಿನ ಅಳಲು ಪ್ರಾರಂಭಿಸಿದ. ಒಂದು ನಿಮಿಷ ಏನೂ ಆಗಿಲ್ಲವೇನೋ ಎಂಬಂತಿದ್ದರೆ, ಮರುಕ್ಷಣದಲ್ಲೇ ಅಳು. ಗಂಡಸು ಅಳುವುದನ್ನು ನೋಡುವುದು ಕಷ್ಟ ಸರ್, ಅದರಲ್ಲೂ ಎಮಿಲ್ಯಾನ್‌ನಂತಹ ಮುದುಕ ದುಃಖ ಮತ್ತು ನಿರಾಶೆಯಿಂದ ಅಳುತ್ತಿರುವುದನ್ನು ನೋಡುವುದು ಕಷ್ಟವೇ ಸರಿ.

"ಈ ಹದಿನೈದು ದಿನಗಳಲ್ಲಿ ಮೊದಲ ಬಾರಿಗೆ ಅವನನ್ನು ಕೇಳಿದೆ- 'ಯಾಕೆ ಎಮಿಲ್ಯಾನ್, ಏನು ವಿಷಯ, ಇಷ್ಟೊಂದು ದುಃಖಿಸುತ್ತಿದ್ದೀ ?'

" 'ಏನೂ ಇಲ್ಲ, ಅಸ್ಟೆಫಿ.'

" 'ಹ್ಹಾ! ಇಲ್ಲಿ ನೋಡು ಎಮಿಲ್ಯಾನ್, ಯಾವುದು ಏನಾದರೂ ಹಾಳಾಗಲಿ, ನೀನು ಇಲ್ಲಿ ಯಾಕೆ ಕಾವು ಕೊಡೋ ಕೋಳಿಯ ತರಹ ಮೂರು ದಿನಗಳಿಂದ ಕೂತಿದ್ದೀಯ ?' ಈಗ ನಿಜಕ್ಕೂ ಅವನ ಬಗ್ಗೆ ದುಃಖ ಮತ್ತು ಮರುಕ ತುಂಬಿ ಕೇಳಿದೆ.

" 'ಕಳೆದು ಹೋಗಿದ್ದರ ಬಗ್ಗೆ ನಾನೇನೂ ಚಿಂತಿಸ್ತಾ ಇಲ್ಲ, ಆದರೆ ಏನು ಕೆಲಸವೂ ಸಿಕ್ಕಲಿಲ್ಲವೆಂದು ವ್ಯಥೆ ಪಡುತ್ತಿರುವೆ.'

" 'ಎಂಥಾ ಕೆಲಸ, ಎಮಿಲ್ಯಾನ್ ?'

" 'ಯಾವ ಕೆಲಸವೂ ಆದೀತು. ಹಿಂದೆ ಮಾಡುತ್ತಿದ್ದ ಕೆಲಸವಾದರೂ ಸರಿಯೇ. ಫಿದೂಸಿ ಇವಾನೋವಿಚ್ ಬಳಿ ಈಗಾಗಲೇ ಮಾತನಾಡಿಬಂದಿದ್ದೇನೆ. ನಿನಗೆ ಇನ್ನೂ ತೊಂದರೆ ಕೊಡಲು ನನಗೆ ಇಷ್ಟ ಇಲ್ಲ ಅಸ್ಟೆಫಿ. ನನಗೊಂದು ಕೆಲಸ ಸಿಕ್ಕಿದ ನಂತರ ನೀನು ಮಾಡಿರುವ ಉಪಕಾರದ ಋಣ ತೀರಿಸಲು ಪ್ರಯತ್ನಿಸುತ್ತೇನೆ.'

" 'ಅರೆ ! ಇದೇನು ಹುಚ್ಚು ಮಾತು ಆಡ್ತಿದ್ದೀ ಎಮಿಲ್ಯಾನ್ ! ಈ ಉಪಕಾರ, ಋಣ, ಹೊರೆ ಎಲ್ಲ ಮರೆತುಬಿಡು. ನಾವು ಮೊದಲಿನ ಹಾಗೇ ಇರೋಣ.'

" 'ಇಲ್ಲ ಅಸ್ಟೆಫಿ, ನೀನು ಇನ್ನೂ ಹಳೆಯ ಗುಂಗಿನಲ್ಲಿ ಇರೋಹಾಗೆ ಅನ್ನಿಸುತ್ತೆ. ಆದರೆ

> ನೀನು ಮಾತನಾಡಿದ್ದರ ಬಗ್ಗೆ ಯೋಚಿಸು, ಆದರೆ ಯೋಚಿಸಿದ್ದೆಲ್ಲವನ್ನೂ ಮಾತನಾಡಬೇಡ. ಯೋಚನೆ ನಿನ್ನದಾಗಿರಬಹುದು, ಪರಂತು ಆಡಿದ ಶಬ್ದ ನಿನ್ನವಲ್ಲ.
>
> **ಪ್ಯಾಟ್ರಿಕ್ ಡಿಲೇನಿ**

ನಾನಂತೂ ನಿನ್ನ ಪ್ಯಾಂಟನ್ನು ಕದೀಲಿಲ್ಲ.'

" 'ಆಯ್ತಪ್ಪಾ, ಹಾಗೇ ತಿಳ್ಕೋ, ನಾನೇನು ಬೇಜಾರು ಮಾಡಿಕೊಳ್ಳೋದಿಲ್ಲ.'

" 'ಇಲ್ಲ ಅಸ್ಟೆಫಿ, ನಾನು ನಿನ್ನ ಜತೆ ಇರಲಾರೆ, ನಾನು ಹೋಗಲೇಬೇಕು.'

" 'ನಿನ್ನನ್ನು ಯಾರು ತಾನೇ ತಡೆದು ನಿಲ್ಲಿಸಿದ್ದಾರೆ ಎಮಿಲ್ಯಾನ್. ನಿನ್ನನ್ನು ಮನೆಯಿಂದ ಹೊರಗೆ ತಳ್ಳಿದೋರಾದರೂ ಯಾರು ? ನಾನು ನಿನ್ನ ಆಚೆಗೆ ತಳ್ತೀದ್ದೇನೆ ಅಂತ ಮಾತ್ರ ತಿಳೀಬೇಡ.'

" 'ಸಾಧ್ಯವಿಲ್ಲ ಅಸ್ಟೆಫಿ, ನಾನು ಹೊರಟು ಹೋದರೇ ಒಳ್ಳೆಯದು.' ಹೆಗಲ ಮೇಲೆ ಕೋಟನ್ನು ಎಳೆದುಕೊಳ್ಳುತ್ತಾ ಅದೇ ಮಾತನ್ನು ಪುನಃ ಪುನಃ ಹೇಳುತ್ತಿದ್ದ ಸರ್.

" 'ಆದರೆ ನೀನು ಹೋಗೋದು ಎಲ್ಲಿಗೆ ಎಮಿಲ್ಯಾನ್. ಸ್ವಲ್ಪ ಆಲೋಚನೆ ಮಾಡು, ಎಲ್ಲಿಗೆ ಹೋಗ್ತಿ, ಏನು ಮಾಡ್ತೀ ಅದನ್ನಾದರೂ ಹೇಳು.'

" 'ಗುಡ್ ಬೈ, ಅಸ್ಟೆಫಿ. ನನ್ನನ್ನು ತಡೆದು ನಿಲ್ಲಿಸುವ ಪ್ರಯತ್ನ ಮಾಡಬೇಡ, ನಾನು ಹೊರಟೆ. ನೀನು ಅದೇ ಹಳೆಯ ಅಸ್ಟೆಫಿ ಆಗಲಾರೆ.'

" 'ಅದು ಹೇಗೆ ಹೇಳ್ತೀ ಎಮಿಲ್ಯಾನ್, ನಾನು ಎಂದಿದ್ರೂ ಅದೇ ಅಸ್ಟೆಫಿನೇ, ನನ್ನ ಮಾತು ಕೇಳು ಎಮಿಲ್ಯಾನ್, ನೀನು ನಾಶವಾಗಿ ಹೋಗ್ತೀಯಾ.'

" 'ಇಲ್ಲ, ಅಸ್ಟೆಫಿ, ನೀನು ಅದೇ ಹಳೆಯ ಅಸ್ಟೆಫಿಯಾಗಿ ಉಳಿದಿಲ್ಲ, ನೀನು ಪ್ರತಿಸಾರಿ ಮನೆಯಿಂದ ಹೊರಗೆ ಹೋಗುವಾಗ ಪೆಟ್ಟಿಗೆಗೆ ಬೀಗ ಹಾಕಿಕೊಂಡು ಹೋಗ್ತೀಯ. ನೀನು ಹಾಗೆ ಮಾಡುವುದನ್ನು ನೋಡಿದಾಗ ನನ್ನ ಕಣ್ಣಿನಲ್ಲಿ ನೀರು ಬರುತ್ತೆ. ನನ್ನನ್ನು ಕ್ಷಮಿಸಿಬಿಡು ಅಸ್ಟೆಫಿ, ನಿನ್ನ ಜತೆ ಇರುವಾಗ ನಾನು ಮಾಡಿದ ತಪ್ಪುಗಳನ್ನು ದಯವಿಟ್ಟು ಕ್ಷಮಿಸಿಬಿಡು.'

"ಸರ್, ಇಷ್ಟು ಹೇಳಿ ಆತ ಹೊರಟೇಬಿಟ್ಟ. ನಾನು ಸಂಜೆಗೆ ಬರುತ್ತಾನೆ ಎಂದುಕೊಂಡೆ, ನಾಳೆ, ನಾಡಿದ್ದು, ಹೀಗೆ ಎರಡು ಮೂರು ದಿನಗಳಾದರೂ ಪತ್ತೆಯಿಲ್ಲ. ನನಗೆ ಈತನ ಚಿಂತೆಯಲ್ಲಿ ಊಟ, ತಿಂಡಿ, ನಿದ್ರೆ ಯಾವುದೂ ಬೇಡವಾಯಿತು. ನನ್ನನ್ನು ತುಂಬಾ ಕುಗ್ಗಿಸಿಬಿಟ್ಟಿದ್ದ. ನಾಲ್ಕನೇ ದಿನ ಅವನು ಇರಬಹುದಾದ ಬಾರ್‌ಗಳು, ಪಬ್‌ಗಳನ್ನು ಹುಡುಕಿಕೊಂಡು ಹೋದೆ. ಆತ ಎಲ್ಲಿಯೋ ಮಾಯವಾಗಿದ್ದ. 'ನೀನು ಸತ್ತಿರಲಿಕ್ಕಿಲ್ಲ, ಅಲ್ಲವೇ ಎಮಿಲ್ಯಾನ್' ನನ್ನನ್ನೆ ಕೇಳಿಕೊಂಡೆ. 'ಎಲ್ಲಾದರೂ ಕುಡಿದು ಮೋರಿಯಲ್ಲಿ ಮರದ ತುಂಡಿನ ತರಹ ಬಿದ್ದುಕೊಂಡು ಗೊರಕೆ ಹೊಡೆಯುತ್ತಿರಬಹುದು' ಎಂದುಕೊಂಡು ಮರಳಿ ಮನೆಗೆ ಬಂದರೆ ಜೀವ ದಲ್ಲಿ ಚೈತನ್ಯವೇ ಉಳಿದಿರಲಿಲ್ಲ. ಮಾರನೆಯ ದಿನವೂ ಹೋಗಿ ಹುಡುಕಬೇಕು ಅಂದುಕೊಂಡೆ, ಕೈಲಾಗದ ಹುಚ್ಚು ಮನುಷ್ಯನನ್ನು ಹಾಗೇ ಅವನ ಪಾಡಿಗೆ ಬಿಟ್ಟಿದ್ದು ನನ್ನ ತಪ್ಪು ಎಂದು ಮನಸ್ಸು ಹೇಳುತ್ತಿತ್ತು.

"ಐದನೆಯ ದಿನ (ಅವತ್ತು ರಜಾ ದಿನವಾಗಿತ್ತು) ಬಾಗಿಲು ಶಬ್ದ ಆದ ಹಾಗೆ ಕೇಳಿಸಿತು. ತಲೆಯೆತ್ತಿ ನೋಡಿದರೆ ಎಮಿಲ್ಯಾನ್ ಒಳಗೆ ಬರುತ್ತಿದ್ದ. ಅವನ ತಲೆ ಕೆಸರು ಮೆತ್ತಿಕೊಂಡು ಕೊಳಕಾಗಿತ್ತು. ಮುಖ ನೀಲಿಯಾಗಿ ಕಾಣುತ್ತಿತ್ತು. ತುಂಬ ಸೊರಗಿಹೋಗಿದ್ದ, ತನ್ನ ಕೋಟನ್ನು ಬಿಚ್ಚಿಟ್ಟು ಪೆಟ್ಟಿಗೆಯ ಮೇಲೆ ನನ್ನ ಪಕ್ಕದಲ್ಲೇ ಕುಳಿತುಕೊಂಡ. ಅವನನ್ನ ನೋಡಿದ ಮೇಲೆ ನನಗೂ ಸಂತೋಷವಾಗಿತ್ತು. ಅದೇ ಹೊತ್ತಿಗೆ ನಾನು ಅಪರಾಧಮಾಡಿದ್ದೆ ಎನ್ನುವ ಭಯವೂ ಆವರಿಸಿತ್ತು. ನಾನು ಹೇಳ್ತಿರೋದು ಶತಃಸತ್ಯ ಸರ್! ಆದರೆ ಎಮಿಲ್ಯಾನ್ ಹಿಂತಿರುಗಿಬಂದಿದ್ದ! ಅವನ ದುರವಸ್ಥೆ ನೋಡಿದಾಗ ನನಗೆ ಕರುಳು ಹಿಂಡಿದ ಹಾಗೆ ಆಯಿತು. ಅವನಿಗೆ ಸಮಾಧಾನ ಹೇಳಿ, ಪ್ರೀತಿಯಿಂದ ಮಾತನಾಡಿಸಿದೆ. ಎಮಿಲ್ಯಾನ್, ನಿನ್ನನ್ನು ಮತ್ತೆ ನೋಡುತ್ತಿರುವುದು ನನಗೆ ತುಂಬಾ ಸಂತೋಷವಾಗಿದೆ. ನೀನು ಬರೋದು ಸ್ವಲ್ಪ ತಡವಾಗಿದ್ದರೆ, ಇಂದೂ ಪಬ್, ಬಾರ್‌ಗಳನ್ನು ಹುಡುಕಿಕೊಂಡು ಹೋಗುತ್ತಿದ್ದೆ. ಅಂದಹಾಗೆ ಬೆಳಿಗ್ಗೆಯಿಂದ ಏನಾದರೂ ತಿಂದಿದ್ದೀಯೋ ಇಲ್ಲವೋ ?'

" 'ತುಂಬಾ ಥ್ಯಾಂಕ್ಸ್, ಅಸ್ತೆಫಿ. ನನ್ನ ತಿಂಡಿ ಆಗಿದೆ.'

" 'ಇರಲಿ, ಈಗ ಬಾ, ಸ್ವಲ್ಪ ಕೋಸಿನ ಸಾರು, ಈರುಳ್ಳಿ ಮತ್ತು ಬ್ರೆಡ್ ಇದೆ. ತಿಂದು ಸುಧಾರಿಸಿಕೋ.'

"ಮೂರು ದಿನಗಳಿಂದ ಏನೂ ತಿಂದಿರಲಿಲ್ಲವೆಂದು ಕಾಣುತ್ತೆ. ಕೊಡುತ್ತಿದ್ದಂತೆ ಗಬಗಬನೆ ತಿನ್ನಲು ಶುರುಮಾಡಿದ. ಇದೇ ಹಸಿವೆಯೇ ಅಲ್ಲವೇ ಅವನನ್ನು ನನ್ನ ಬಳಿ ನೂಕಿದ್ದು. ನನಗೆ ಕರುಣೆ ಉಕ್ಕಿಬಂದು, ಯಾವುದಾದರೂ ಪಬ್‌ನಿಂದ ಮದ್ಯವನ್ನು ತಂದು, ನಾನೂ ಕುಡಿದು, ಅವನಿಗೂ ಕುಡಿಸಿ, ಈ ದುಃಖಕ್ಕೆ ವಿರಾಮಹಾಕಿದರೆ ಒಳಿತಲ್ಲವೇ ಎನಿಸಿದ್ದೇ ತಡ, ಕಾರ್ಯೋನ್ಮುಖನಾದೆ. ಆ ಕ್ಷಣದಲ್ಲಿ ಅವನ ಬಗ್ಗೆ ಒಂದು ತೃಣದಷ್ಟೂ ಕಹಿಭಾವನೆಗಳು ಉಳಿದಿರಲಿಲ್ಲ. 'ಎಮಿಲ್ಯಾನ್, ತಗೋ ವೋಡ್ಕಾ ಕುಡಿ, ಇವತ್ತು ರಜಾ. ಕುಡಿದು ಎಲ್ಲವನ್ನೂ ಮರೆತುಬಿಡೋಣ' ಎಂದೆ.

"ಆತುರದಿಂದ ನನ್ನತ್ತ ಕೈ ಚಾಚಿದ. ಮತ್ತೆ ಹಾಗೆಯೇ ತಡೆದು ನಿಲ್ಲಿಸಿದ. ಸ್ವಲ್ಪ ಹೊತ್ತಿನ ನಂತರ ಗ್ಲಾಸನ್ನು ಕೈಗೆತ್ತಿಕೊಂಡು ತುಟಿಗೆ ಸೋಂಕಿಸುವುದರಲ್ಲಿ ಸ್ವಲ್ಪ ವೋಡ್ಕಾ ಅವನ ಕೋಟಿನ ಮೇಲೆ ಚೆಲ್ಲಿತು. ನಂತರ ಬಹಳ ಕಷ್ಟಪಟ್ಟುಕೊಂಡು ತುಟಿಯವರೆಗೆ ಕೊಂಡೊಯ್ದು ಗ್ಲಾಸನ್ನು ಮತ್ತೆ ಕೆಳಗಿರಿಸಿದ.

" 'ಅರೆ! ಅದೇನಾಯ್ತು ಎಮಿಲ್ಯಾನ್ ?'

" 'ಬೇಡ, ಅಸ್ತೆಫಿ, ಥ್ಯಾಂಕ್ಸ್, ನಾನು ಬಹುಶಃ...'

" 'ನಿನಗೆ ವೋಡ್ಕಾ ಬೇಡವೇ !' ಆಶ್ಚರ್ಯದಿಂದ ಕೇಳಿದೆ.

" 'ಬೇಡ ಅಸ್ತೆಫಿ, ನಾನು.... ನಾನು.... ಇನ್ನು ಮೇಲೆ ಕುಡಿಯುವುದಿಲ್ಲ.

" 'ನೀನು ನಿಜವಾಗಿ ಕುಡಿಯುವುದನ್ನು ನಿಲ್ಲಿಸಿದ್ದಿಯೋ, ಅಥವಾ.... ಇವತ್ತೊಂದು ದಿನ ಕುಡಿಯುವುದು ಬೇಡವಾಗಿದೆಯೋ ?'

"ಏನು ಉತ್ತರವೂ ಬರಲಿಲ್ಲ. ಬಹಳ ಸುಸ್ತಾದವನಂತೆ ತೋಳಿನ ಮೇಲೆ ಗೋಣು ಚೆಲ್ಲಿದ.

" 'ಎಮಿಲ್ಯಾನ್, ಏನಾಯ್ತು ನಿನಗೆ,

ಆರೋಗ್ಯ ಸರಿಯಿಲ್ಲವೇ, ಜ್ವರ ಬಂದಿದೆಯೇ ?'

" 'ಇರಬಹುದು ಅಸ್ಟೆಫಿ.'

"ಕೂಡಲೇ ಅವನನ್ನು ಹಾಸಿಗೆಯ ಮೇಲೆ ಮಲಗಿಸಿದೆ. ತಲೆ ಬಿಸಿಯಾಗಿತ್ತು. ಜ್ವರದಿಂದ ನಡುಗುತ್ತಿದ್ದ. ಇಡೀ ದಿನ ಅವನ ಬಳಿಯೇ ಕುಳಿತಿದ್ದೆ. ರಾತ್ರಿಯ ಹೊತ್ತಿಗೆ ಅವನ ಪರಿಸ್ಥಿತಿ ಗಂಭೀರವಾಯಿತು. ಕೆಲವು ಬ್ರೆಡ್‌ಚೂರುಗಳನ್ನು ತಿನ್ನಲು ನೀಡಿದೆ. ಆತ ಅದನ್ನೂ ಬೇಡ ಎಂದು ತಿನ್ನಲಿಲ್ಲ. ಇವತ್ತು ಊಟವೇ ಬೇಡ ಅನ್ನಿಸ್ತಿದೆ ಅಂದ, ಸ್ವಲ್ಪ ಚಹ ತಯಾರಿಸಿಕೊಟ್ಟೆ. ನನ್ನ ಮನೆ ಮಾಲಕಿಯನ್ನು ನೆರವಿಗೆ ಬರುವಂತೆ ಕೇಳಿಕೊಂಡೆ. ಅವನ ಆರೋಗ್ಯ ಹದಗೆಡುತ್ತಿದ್ದುದು ನನಗೆ ತಿಳಿಯುತ್ತಿತ್ತು. ಮೂರನೇ ದಿನ ನನ್ನ ಪರಿಚಿತ ವೈದ್ಯರಾದ ಡಾ. ಕೋಸ್ಟಂ ಪ್ರಷೋವ್‌ರನ್ನು ಕರೆದುಕೊಂಡು ಬಂದೆ. ಎಮಿಲ್ಯಾನ್‌ನನ್ನು ಪರೀಕ್ಷಿಸಿ ನಾನು ಅವರನ್ನು ಕರೆತರುವ ತೊಂದರೆ ತೆಗೆದುಕೊಳ್ಳದೇ ಇದ್ದರೂ ಆಗುತ್ತಿತ್ತು ಎಂದರು. ಹಾಗೇ ಐದನೇ ದಿನಕ್ಕೂ ಕಾಲಿರಿಸಿದ್ದಾಯಿತು.

"ನನ್ನ ಕಣ್ಣೆದುರಿಗೇ ಎಮಿಲ್ಯಾನ್ ಸಾಯುತ್ತಾ ಬಿದ್ದಿದ್ದ. ನಾನು ಬೇರೇನನ್ನೂ ಮಾಡಲು ತಿಳಿಯದೇ ಬಟ್ಟೆಯೊಂದನ್ನು ಹೊಲಿಯುತ್ತಾ ಕುಳಿತಿದ್ದೆ. ನನ್ನ ಮನೆ ಮಾಲಕಿ, ಒಲೆ ಹೊತ್ತಿಸುವುದರಲ್ಲಿ ತೊಡಗಿದ್ದಳು. ಈ ಕೊಳಕು, ತುಚ್ಛ ಕುಡುಕನಿಗಾಗಿ ನನ್ನ ಹೃದಯ ಮಿಡಿಯುತ್ತಿತ್ತು. ನನ್ನ ಸ್ವಂತ ಮಗನನ್ನೇ ಕಳೆದುಕೊಳ್ಳುತ್ತಿದ್ದೇನೇನೋ ಎನ್ನಿಸುತ್ತಿತ್ತು. ಎಮಿಲ್ಯಾನ್ ಕಣ್ಣು ಬಿಟ್ಟು ನನ್ನನ್ನೇ ತದೇಕ ದೃಷ್ಟಿಯಿಂದ ನೋಡುತ್ತಿದ್ದುದೂ ತಿಳಿಯುತ್ತಿತ್ತು. ಬೆಳಗಿನಿಂದಲೂ ಆ ನತದೃಷ್ಟ ನನಗೇನೋ ಹೇಳಬೇಕೆಂದು ತವಕಿಸುತ್ತಿದ್ದಂತೆ ತೋರುತ್ತಿತ್ತು. ಆದರೆ ಹಾಗೆ ಹೇಳಿಕೊಳ್ಳಲು ಧೈರ್ಯ ಸಾಲದೇ ಮೂಗುಬ್ಬಸಪಡುತ್ತಿದ್ದ. ಕೊನೆಗೆ ನಾನೇ ಅವನತ್ತ ದೃಷ್ಟಿ ಬೀರಿದೆ. ಒಂದು ಕ್ಷಣ ಅವನೂ ನನ್ನನ್ನು ದಿಟ್ಟಿಸಿ ನೋಡಿದ. ನನ್ನ ನೋಟ ಅವನ ಅರಿವಿಗೆ ಬಂದೊಡನೆಯೇ ಮತ್ತೆ ನನ್ನ ಕಣ್ಣು ತಪ್ಪಿಸುತ್ತಿದ್ದ.

" 'ಅಸ್ಟೆಫಿ...'

" 'ಏನು ? ಹೇಳು ಎಮಿಲ್ಯಾನ್.'

" 'ನನ್ನ ಹಳೇ ಕೋಟನ್ನು ಗುಜರಿಯಲ್ಲಿ ಮಾರಿದರೆ ಅದಕ್ಕೆ ತುಂಬಾ ಹಣ ಸಿಗಬಹುದಲ್ಲವೇ ?'

> ಮಾನಸಿಕವಾಗಿ ಅಥವಾ ಭೌತಿಕವಾಗಿ ವ್ಯಸನಗಳಿಂದ ಹೊರತಾದ ವ್ಯಕ್ತಿಯನ್ನು ನಾನೆಂದೂ ಕಂಡಿಲ್ಲ.
>
> ಸರ್ ರಾಬರ್ಟ್ ಪೀಲ್

" 'ಸಿಕ್ಕುತ್ತೆ, ತುಂಬಾ ಹಣ ಸಿಗುತ್ತೆ, ಬಹುಶಃ ಮೂರು ರೂಬಲ್‌ಗಳಾದರೂ ಸಿಗಬಹುದು.'

"ಸರ್, ನಿಜ ಹೇಳಬೇಕೆಂದರೆ ಅದಕ್ಕೆ ಒಂದು ಪೆನ್ನಿಯೂ ಹುಟ್ಟುತ್ತಿರಲಿಲ್ಲವೆಂಬುದು ನನಗೆ ಗೊತ್ತಿತ್ತು. ಬದಲಾಗಿ ಅಂಥ ಹರಕು ಚಿಂದಿಯನ್ನು ಮಾರಲು ಹೊರಟರೆ ನನ್ನನ್ನು ಗೇಲಿ ಮಾಡಿ ನಗುತ್ತಾರೆ ಎಂದೂ ಗೊತ್ತಿತ್ತು. ಅವನ ಸಮಾಧಾನಕ್ಕೆಂದು ಹಾಗೆ ಹೇಳಿದ್ದೆ.

" 'ಹತ್ತು ರೂಬಲ್‌ಗಳಾದರೂ ಸಿಕ್ಕಬಹುದೆಂದು ನಾನು ಯೋಚಿಸಿದ್ದೆ ಅಸ್ಟೆಫಿ, ಒಳ್ಳೆಯ ಬಟ್ಟೆಯಿಂದ ಮಾಡಿರುವ ಕೋಟು ಅದು.'

" 'ನನಗೆ ಗೊತ್ತಿಲ್ಲ ಎಮಿಲ್ಯಾನ್. ಆದರೆ ನಾನು ಇದನ್ನು ಕೊಂಡುಕೊಳ್ಳಬೇಕು ಎನ್ನುವುದು ನಿನ್ನ ಆಸೆಯಾಗಿದ್ದರೆ ಹೇಳು. ಹತ್ತು ರೂಬಲ್‌ನಿಂದಲೇ ಪ್ರಾರಂಭಿಸುತ್ತೇನೆ.'

"ಒಂದೆರಡು ನಿಮಿಷಗಳ ಮೌನದ ನಂತರ ಎಮಿಲ್ಯಾನ್ 'ಅಸ್ಟೆಫಿ' ಎಂದು ಕ್ಷೀಣದನಿಯಲ್ಲಿ ಕರೆದ.

" 'ಏನು ಎಮಿಲ್ಯಾನ್ ?'

" 'ನಾನು ಸತ್ತ ನಂತರ ಈ ಕೋಟನ್ನು ಮಾರಿಬಿಡು. ನನ್ನೊಂದಿಗೆ ಅದನ್ನು ಹೂಳಬೇಡ. ಅದು ಇಲ್ಲದೇ ಇದ್ದರೂ ನಾನು ಆರಾಮವಾಗಿರ್‍ತೀನಿ. ತುಂಬಾ ಬೆಲೆಬಾಳುವ ಪದಾರ್ಥ ಅಸ್ಟೆಫಿ, ನಿಜವಾಗಿಯೂ ನಿನ್ನ ಉಪಯೋಗಕ್ಕೆ ಬರುತ್ತದೆ.'

"ಅವನ ಈ ಮಾತುಗಳನ್ನು ಕೇಳುತ್ತಿದ್ದಂತೆ ನನಗಾದ ಭಯಂಕರ ಸಂಕಟ ಹೇಳುವುದಕ್ಕಾಗದು. ಅವನ ಸಾವು ಸಮೀಪಿಸುತ್ತಿದೆ ಅನ್ನಿಸಿತು. ಮುಂದೆ ಒಂದು ಗಂಟೆಯ ಕಾಲ ನಾವೇನೂ ಮಾತನಾಡದೆ ಮೌನವಾಗಿದ್ದೆವು. ಪುನಃ ನಾನು ಅವನತ್ತ ನೋಡಿದೆ. ಅವನೂ ನನ್ನನ್ನೇ ನೋಡುತ್ತಿದ್ದ. ನಮ್ಮ

ದೃಷ್ಟಿ ಸಂಧಿಸಿದ ಕೂಡಲೇ ಮತ್ತೆ ತಲೆ ತಗ್ಗಿಸಿದ.

" 'ಕುಡಿಯಲು ನೀರು ಬೇಕೇ ಎಮಿಲ್ಯಾನ್ ?'

" 'ಹೌದು ಅಸ್ತಫಿ.'

" 'ಕುಡಿಯಲು ನೀರು ಕೊಟ್ಟೆ. ಅದನ್ನಾತ ಕುಡಿದ.'

" 'ಥ್ಯಾಂಕ್ಸ್, ಅಸ್ತಫಿ.'

" 'ಇನ್ನೇನಾದರೂ ಬೇಕೇ ಎಮಿಲ್ಯಾನ್ ?'

" 'ನನಗಿನ್ನೇನೂ ಬೇಡ ಅಸ್ತಫಿ, ಆದರೆ...'

" 'ಹೇಳು ಎಮಿಲ್ಯಾನ್.... ಏನದು ?'

" 'ನಾನು.... ನಾನು...'

" 'ಹ್ಞು, ಹೇಳು, ನೀನು...'

" 'ನಿನ್ನ... ಪ್ಯಾಂಟ್... ಅದನ್ನು ನಾನು.... ನಾನೇ ತೆಗೆದುಕೊಂಡಿದ್ದೆ.'

" 'ದೇವರು ನಿನ್ನನ್ನು ಕ್ಷಮಿಸುತ್ತಾನೆ ಎಮಿಲ್ಯಾನ್, ನೀನಿನ್ನು ನಿಶ್ಚಿಂತೆಯಿಂದ ಪ್ರಾಣ ಬಿಡಬಹುದು.'

"ಗಂಟಲು ಒತ್ತಿ ಬಂದಂತಾಗಿ, ಕಣ್ಣೀರು ತುಂಬಿ ತುಳುಕುತ್ತಿತ್ತು. ಒಂದು ಕ್ಷಣ ಆವನಿಂದ ಬೇರೆಡೆಗೆ ದೃಷ್ಟಿ ಹೊರಳಿಸಿದೆ.

" 'ಅಸ್ತಫಿ....'

"ಪುನಃ ಹಿಂತಿರುಗಿ ನೋಡಿದಾಗ ಎಮಿಲ್ಯಾನ್ ಇನ್ನೂ ಏನನ್ನೋ ಹೇಳಬೇಕೆಂದು ಪ್ರಯತ್ನಿಸುತ್ತಿದ್ದ. ಎದ್ದು ಕುಳಿತುಕೊಳ್ಳಲು ವ್ಯರ್ಥ ಪ್ರಯತ್ನ ನಡೆಸುತ್ತಿದ್ದ. ಅವನ ತುಟಿಗಳು ಚಲಿಸುತ್ತಿದ್ದವೇ ವಿನಾ ಧ್ವನಿ ಬರುತ್ತಿರಲಿಲ್ಲ. ಮರುಕ್ಷಣದಲ್ಲೇ ಮುಖವೆಲ್ಲಾ ಕೆಂಪಾಯಿತು, ನನ್ನತ್ತ ನೋಡಿದ, ನಾನು ನೋಡ ನೋಡುತ್ತಿದ್ದಂತೆಯೇ ಅವನ ಮುಖದ ಬಣ್ಣ ಮಂಕಾಗುತ್ತಾ ನಡೆದು ವಿವರ್ಣವಾದ. ತಲೆ ಹಿಂದಕ್ಕೆ ಬಾಗುತ್ತಿರುವಂತೆಯೇ ನಿಡಿದಾದ ಉಸಿರೊಂದನ್ನೆಳೆದ. ಪರಮಾತ್ಮನ ಪಾದಾರವಿಂದಗಳಲ್ಲಿ ಲೀನವಾಗಿಹೋದ." ●

## ಅಪ್ಪಚ್ಚಿ ಹಣೆ



ಪುರಾತನ ಇಜಿಪ್ತ್ ಜನರು ಚಪ್ಪಟೆ ಮುಂದಲೆಯುಳ್ಳವರನ್ನು ಅದೃಷ್ಟವಂತರೆಂದು ಭಾವಿಸುತ್ತಿದ್ದರು. ಅದಕ್ಕಾಗಿ ಮಗುವಿನ ಎಲುವು ಪೆಡಸಾಗುವುದಕ್ಕಿಂತ ಮುನ್ನ ಹಣೆಯನ್ನು ಚಪ್ಪಟೆಗೊಳಿಸುವ ಪ್ರಕ್ರಿಯೆ ಪ್ರಾರಂಭವಾಗುತ್ತಿತ್ತು. ಮಗುವಿನ ಮಿದುಳಿಗೆ ಇದರಿಂದ ಧಕ್ಕೆಯಾಗುತ್ತಿತ್ತೋ ಇಲ್ಲವೋ ಎಂಬುದು ಸ್ಪಷ್ಟವಾಗಿಲ್ಲವಾದರೂ ಅವನ ಸಾಮಾಜಿಕ ಸ್ಥಾನ-ಮಾನಗಳು ಉನ್ನತಿಯಾಗುತ್ತಿದ್ದವೆಂಬುದು ಖಚಿತ.



ವಿದ್ಯಾರ್ಥಿ ಅಂಕಣ

ಜ್ಞಾನನಿಧಿ

# ಪ್ರಾಚೀನ ಗಣಿತ ಗ್ರಂಥಗಳು

೧. ಯಜುರ್ವೇದ (ಕ್ರಿ.ಪೂ. ೧೦೦೦) ಇದರಲ್ಲಿ 'ಲಕ್ಷ-ಕೋಟಿ'ಯವರೆಗಿನ ಎಣಿಕೆ, ದಶಮಾನ ಪದ್ಧತಿ ಗಣಿತದ ಮೂಲ ಪರಿಕರ್ಮಗಳಿವೆ.

೨. ತೈತ್ತರೀಯ ಸಂಹಿತೆ: ಪಂಚವಿಂಶ ಬ್ರಾಹ್ಮಣ, ಸತ್ವಥ ಬ್ರಾಹ್ಮಣ (ಕ್ರಿ.ಪೂ. ೮೦೦-೭೦೦) ಇವುಗಳಲ್ಲಿ ಸರಿ ಮತ್ತು ಬೆಸ ಸಂಖ್ಯೆಗಳು, ಅಂಕಗಣಿತ ಮತ್ತು ರೇಖಾ ಗಣಿತ ಶ್ರೇಣಿಗಳು ಇತ್ಯಾದಿಗಳು ಹೇಳಲ್ಪಟ್ಟವೆ.

೩. ಶುಲ್ವ ಸೂತ್ರಗಳು (ಕ್ರಿ.ಪೂ. ೭೦೦-೬೦೦) ಶಾಸ್ತ್ರೀಯ ಕ್ರಮದಲ್ಲಿ ಸರಳ ರೇಖಾಕೃತಿಗಳನ್ನು ರಚಿಸುವ ವಿಧಾನಗಳನ್ನು ತಿಳಿಸುವ ಗ್ರಂಥ ಇದು.

೪. ಜ್ಯಾಮಿತಿ (ಕ್ರಿ.ಪೂ. ೬೦೦-೫೦೦) ಬಾಧ್ಯಾಯನ ರಚಿಸಿದ ರೇಖಾಗಣಿತ ಶಾಸ್ತ್ರ ಗ್ರಂಥ. ಇದರಲ್ಲಿ ಜ್ಯಾಮಿತಿ ಶ್ರೇಣಿಯ ಪ್ರಸ್ತಾಪವಿದೆ.

೫. ಕಲ್ಪಸೂತ್ರ: (ಕ್ರಿ.ಪೂ. ೩೦೦) ಛತ್ರಬಾಹು ರಚಿಸಿದ ಈ ಗ್ರಂಥದಲ್ಲಿ ಜ್ಯಾಮಿತಿ ಶ್ರೇಣಿಯ ಪ್ರಸ್ತಾಪವಿದೆ.

೬. ಆರ್ಯಭಟೀಯ: (ಕ್ರಿ.ಪೂ. ೫ನೆಯ ಶತಮಾನ) ರಚಿಸಿದವರು ಆರ್ಯಭಟ. ಇದರಲ್ಲಿ ಖಗೋಳ ಗಣಿತ, 'ಪೈ' ( ) ಮಾನ ದಶಾಂಶ ಪದ್ಧತಿ, ವರ್ಗಮೂಲ ಮತ್ತು ಘನಮೂಲ ಅನೀನಿಳತ ಸಮೀಕರಣಗಳ ಪ್ರಸ್ತಾಪವಿದೆ.

೭. ಬ್ರಾಹ್ಮಸ್ಫುಟ ಸಿದ್ಧಾಂತ ಮತ್ತು ಖಂಡ ವಾದ್ಯಕ: (ಕ್ರಿ.ಶ. ೭ನೇ ಶತಮಾನ) ರಚಿಸಿದವರು ಬ್ರಹ್ಮಗುಪ್ತ. ಇದರಲ್ಲಿ ಗ್ರಹಗಣಿತವಿದೆ.

೮. ಮಹಾಭಾಸ್ಕರೀಯ (ಕ್ರಿ.ಶ. ೭ನೆ ಶತಮಾನ) ರಚಿಸಿದವರು ಒಂದನೆ ಭಾಸ್ಕರ. ಗಣಿತ ಪ್ರದಾನ ಖಗೋಳ ಶಾಸ್ತ್ರ ಗ್ರಂಥ.

೯. ಗಣಿತ ಸಾರ ಸಂಗ್ರಹ (ಕ್ರಿ.ಶ. ೯ನೇ ಶತಮಾನ) ರಚಿಸಿದವರು ಮಹಾವೀರ. ಇದರಲ್ಲಿ ಅಂಕಗಣಿತ, ಕ್ಷೇತ್ರಗಣಿತ, ರೇಖಾಗಣಿತ, ವರ್ಗ ಸಮೀಕರಣ, ಘನಸಮೀಕರಣ ಹಾಗೂ ಸಾಮಾನ್ಯ ಗಣಿತ ಪ್ರಸ್ತಾಪವಿದೆ.

೧೦. ಸಿದ್ಧಾಂತ ಶಿರೋಮಣಿ: (ಕ್ರಿ.ಶ. ೧೨ನೆ ಶತಮಾನ). ರಚಿಸಿದವರು ಭಾಸ್ಕರಾಚಾರ್ಯ-೨. ಇದರಲ್ಲಿ ಕಲನಶಾಸ್ತ್ರದ ಪ್ರಸ್ತಾಪವಿದೆ.

**ಸಂಗ್ರಹ: ಕಿಶೋರ ಕುಲಕರ್ಣಿ**

# ನಮ್ಮ ಮೇಲಿನ ಈ ತೂಗುಗತ್ತಿಗಳು !

ಈಚೆಗೆ ಗುರುಗ್ರಹವನ್ನು ಮಾಕರ್ ಲೆವಿ-೯ ಧೂಮಕೇತುವಿನ ತುಂಡುಗಳು ಅಪ್ಪಳಿಸಿದವಷ್ಟೇ. ಗುರುವಿಗಾದ ಈ ಗಂಡಾಂತರ ಯಾವುದೇ ಆಕಾಶ ಕಾಯಕ್ಕಾದರೂ ಒದಗಬಹುದು. ನಮ್ಮ ನೆಲೆಯಾದ ಹಸಿರುಗ್ರಹವೆಂಬ ಖ್ಯಾತಿಯ ಭೂಮಿಯ ಗಾತ್ರ ಗುರುಗ್ರಹದ ಗಾತ್ರದ ಕೇವಲ ಮುನ್ನೂರನೆ ಒಂದರಷ್ಟು. ಒಂದು ವೇಳೆ ಗುರುವಿಗಾದ ಆಘಾತ ಭೂಗ್ರಹಕ್ಕಾದರೆ ಪರಿಣಾಮ ಕಲ್ಪನಾತೀತ. ನಮ್ಮ ತಲೆಯ ಮೇಲಿನ ತೂಗುಗತ್ತಿಗಳಂತೆ ೭೦೦ಕ್ಕೂ ಹೆಚ್ಚು ಧೂಮಕೇತುಗಳು, ಸಾವಿರಾರು ಉಲ್ಕೆಗಳು ಹಾಗೂ ಕ್ಷುದ್ರಗ್ರಹಗಳೆಂಬ ಕಿರು ಆಕಾಶಕಾಯಗಳು 'ಕ್ಷಿಪಣಿ'ಗಳಂತೆ ಆಗಸದಲ್ಲಿ ತಮ್ಮದೇ ಆದ ಪಥಗಳಲ್ಲಿ ಸೂರ್ಯನನ್ನು ಬಳಸುತ್ತಿವೆ. ಕನಿಷ್ಟ ನೂರು ಧೂಮಕೇತುಗಳ ಚಲನೆಯ ಪಥಗಳು ಭೂಮಿ ಸೂರ್ಯನನ್ನು ಸುತ್ತುವ ಪಥವನ್ನು ಅಡ್ಡ ಹಾಯುವುದಾಗಿ ಖಗೋಳ ವಿಜ್ಞಾನಿಗಳು ಲೆಕ್ಕ ಹಾಕಿದ್ದಾರೆ. ಆತಂಕವೆಂದರೆ ಏನಿಲ್ಲವೆಂದರೂ ಎರಡು ಸಾವಿರಕ್ಕೂ ಅಧಿಕ ಕ್ಷುದ್ರಗ್ರಹಗಳು ಧರೆಗೆ ಸಮೀಪವೇ ಅತಿ ವೇಗವಾಗಿ ಹಾದು ಹೋಗುತ್ತವೆ. ಇತ್ತೀಚಿನ ನಿದರ್ಶನವೆಂದರೆ ೧೯೯೨ರ ಡಿಸೆಂಬರ್ ಆರಂದು ಧರೆಗೆ ಮೂವತ್ತೈದು ಲಕ್ಷ ಕಿಲೋಮೀಟರ್ ಅಂತರದಲ್ಲಿ ಟೌಟಾಟಿಸ್ ಎಂಬ ಕಿರುಕಾಯ ಸೆಕೆಂಡಿಗೆ ಹತ್ತು ಕಿಲೋಮೀಟರ್ ರಭಸದಲ್ಲಿ ಹಾದುಹೋಯಿತು. ಇದೇ ಕಾಯ ೨೦೦೪ರಲ್ಲಿ ಭೂಗ್ರಹವನ್ನು ೧೫ ಲಕ್ಷ ಕಿಲೋಮಿಟರ್ ದೂರದಲ್ಲಿ ಸಮೀಪಿಸಲಿದೆ. ೧೯೮೯ರ ಮಾರ್ಚ್‌ನಲ್ಲಿ ಸೆಕೆಂಡಿಗೆ ೨೦ ಕಿಲೋಮೀಟರ್ ರಭಸದಲ್ಲಿ ಸಾಗುತ್ತಿದ್ದ ಕ್ಷುದ್ರಗ್ರಹವೊಂದು ಭೂಮಿಗೆ ೮೦ ಲಕ್ಷ ಕಿಲೋಮೀಟರ್ ಹತ್ತಿರ ಬಂದಿತ್ತು. ೧೯೩೭ರ ಅಕ್ಟೋಬರ್‌ನಲ್ಲಿ ಒಂದು ಕಿಲೋಮೀಟರ್ ವ್ಯಾಸದ ಹರ್ಮಿಸ್ ಎಂಬ ಕ್ಷುದ್ರಗ್ರಹ ಕೇವಲ ಆರು ಲಕ್ಷ ಕಿಲೋಮಿಟರ್ ಅಂತರದಲ್ಲಿ ಹಾದು ಹೋಯಿತು.

ಕೇವಲ ಒಂದು ಕಿಲೋಮಿಟರ್ ವ್ಯಾಸದ ಕ್ಷುದ್ರಗ್ರಹ ಒಂದು ವೇಳೆ ಮುಂಬಯಿ ಕರಾವಳಿಯಲ್ಲಿ ಎರಗಿದರೆ ಆ ಪೂರ್ತಿ ಮಹಾನಗರ ಸಂಪೂರ್ಣವಾಗಿ ನಿರ್ನಾಮವಾಗಿ ಬೃಹದಾಕಾರದ ಅಲೆಗಳು ಎದ್ದು ಸುತ್ತಲ ಇಪ್ಪತ್ತು ಕಿಲೋಮೀಟರ್ ವ್ಯಾಪ್ತಿಯ ಪ್ರದೇಶವು ಹತ್ತು ಕಿಲೋಮೀಟರ್ ಆಳದ ನೀರಿನಲ್ಲಿ ಆವೃತವಾದೀತು. ಆದರೆ ಪುಣ್ಯಾವಶಾತ್ ಇಂತಹ ಅನಾಹುತದ ಸಂಭವ ಎಷ್ಟು ಅಲ್ಪವೆಂದರೆ, ಶತಕೋಟಿ ವರ್ಷಗಳಿಗೊಮ್ಮೆ ಮಾತ್ರ ಹೀಗಾಗಬಹುದಷ್ಟೆ. ೨೫ ಸಾವಿರನೇ ವರ್ಷದಿಂದ ೫೦ ಸಾವಿರ ವರ್ಷಗಳವರೆಗಿನ ಪ್ರಾಚೀನದಲ್ಲಿ ಇಂತಹದೊಂದು ದುರ್ಘಟನೆ ಸಂಭವಿಸಿ ಅರಿಜೋನಾದಲ್ಲಿ ೨೦೦ ಮೀಟರ್ ಆಳದ ವಿಶಾಲ ಹೊಂಡವಾಗಿದೆ. ಸುಮಾರು ಆರೂವರೆ ಕೋಟಿ ವರ್ಷಗಳಷ್ಟು ಹಿಂದೆ ಧರೆಗೆ ಬಡಿದ ಕ್ಷುದ್ರ ಗ್ರಹವೊಂದು ಡೈನಾಸಾರ್ ಎಂಬ ಹೆಗ್ಗಾಳಿಯ ಸಂತತಿಯೂ ಸೇರಿದಂತೆ ಶೇಕಡಾ ೮೦ರಷ್ಟು ಜೀವಿ ಸಂಕುಲಗಳ ನಾಶಕ್ಕೆ ಕಾರಣವಾಗಿರಬಹುದೆನ್ನಲಾಗಿದೆ.

ಕ್ಷುದ್ರ ಗ್ರಹಗಳು ಪಥಭ್ರಷ್ಟವಾಗಲು ನೆರೆಯ ಬಲಿಷ್ಠ ಆಕಾಶಕಾಯಗಳೇ ಕಾರಣ. ಅವುಗಳ ಗುರುತ್ವಾಕರ್ಷಣ ಶಕ್ತಿಯನ್ನು ತಾಳಲಾರದೆ ಕ್ಷುದ್ರ ಗ್ರಹಗಳು ಸ್ಫೋಟಗೊಂಡು ಉಲ್ಕಾಪಾತದ ರೂಪದಲ್ಲಿ ಆ ಬಲಿಷ್ಠ ಆಕಾಶಕಾಯಕ್ಕೆ ಡಿಕ್ಕಿ ಹೊಡೆಯುತ್ತವೆ. ಭೂಮಿಯಂತೆ ಆಮ್ಲಜನಕವಿರುವ ವಾತಾ

ವರಣದಲ್ಲಿ ಕ್ಷುದ್ರ ಗ್ರಹದ ತುಂಡುಗಳ ಹೊರಮೈ ಉರಿದು ಆದರ ಬಂಡೆಯಂತಹ ತಿರುಳು ಬಲಿಷ್ಠ ಆಕಾಶಕಾಯಕ್ಕೆ ಅಪ್ಪಳಿಸುತ್ತದೆ.

ಭೂಗ್ರಹಕ್ಕೆ ಒಂದೇ ಕಿಲೋಮೀಟರ್ ವ್ಯಾಸದ ಕ್ಷುದ್ರಕಾಯ ಮಾಡುವ ಅನಾಹುತ ಒಂದು ಮೆಗಾಟನ್‌ನ ಒಂದು ಲಕ್ಷ ಪರಮಾಣು ಬಾಂಬ್‌ಗಳು ಒಟ್ಟಿಗೆ ಸ್ಫೋಟಿಸಿದಷ್ಟು. ಈ ಅಂಶವನ್ನು ಮನಗಂಡು ಭೂಮಿಗೆ ಇಂತಹ ಆಘಾತದ ಸಾಧ್ಯತೆಯಿದ್ದರೆ ಅದನ್ನು ವಿನಾಶದಿಂದ ತಡೆಯುವುದಾದರೂ ಹೇಗೆಂದು ವಿಶ್ವದಾದ್ಯಂತ ವಿಜ್ಞಾನಿಗಳು ಚಿಂತಿಸುತ್ತಿದ್ದಾರೆ. ಈ ದಿಸೆಯಲ್ಲಿ ೫೫ ಕೋಟಿ ಡಾಲರ್ ವೆಚ್ಚದ ಯೋಜನೆಯೊಂದು ಸಿದ್ಧವಾಗಿದೆ. ದಾಳಿಕೋರ ಆಗಂತುಕ ಕಾಯವನ್ನು ಗುರುತಿಸಿ ಅದರತ್ತ ಪರಮಾಣು ಶಸ್ತ್ರಯುಕ್ತ ರಾಕೆಟ್‌ಗಳನ್ನು ಹಾರಿಸುವುದರ ಮೂಲಕ ಅದನ್ನು ಛಿದ್ರಗೊಳಿಸಬಹುದಾಗಿ ವಿಜ್ಞಾನಿಗಳು ಆಶಾವಾದಿಗಳಾಗಿದ್ದಾರೆ.

• ಬಿಂಡಿಗನವಿಲೆ ಭಗವಾನ್

## ಭಾರತ: ಕೆಲವು ವಿಶಿಷ್ಟ ಸಂಗತಿಗಳು

೧. ಎತ್ತರವಾದ ಶಿಖರ: ಕಾಂಚನಗಂಗಾ (೮೫೯೭ ಮೀಟರ್).
೨. ಎತ್ತರವಾದ ಜಲಪಾತ: ಜೋಗ ಜಲಪಾತ (ಕರ್ನಾಟಕ) ೯೬೦ ಅಡಿಗಳು.
೩. ಎತ್ತರವಾದ ಸೇತುವೆ: ಚಂಬಲ್ ಸೇತುವೆ (ಮಧ್ಯಪ್ರದೇಶ).
೪. ಎತ್ತರವಾದ ದ್ವಾರ: ಬುಲಂದ್ ದರ್ವಾಜ್ (ಫತ್ತೇಪುರ್ ಸಿಕ್ರಿ) ೫೪ ಮೀಟರ್.
೫. ಎತ್ತರವಾದ ಗೋಪುರ: ಕುತುಬ್‌ಮಿನಾರ್ (ದೆಹಲಿ).
೬. ಎತ್ತರವಾದ ಅಣೆಕಟ್ಟು: ಭಾಕ್ರಾ ಅಣೆಕಟ್ಟು.
೭. ಹೆಚ್ಚು ಜನಸಂಖ್ಯೆಯುಳ್ಳ ನಗರ: ಕಲ್ಕತ್ತಾ (೯೨ ಲಕ್ಷಗಳು)
೮. ಹೆಚ್ಚು ಉದ್ದವಾದ ನದಿ: ಬ್ರಹ್ಮಪುತ್ರ (೨೮೯೭ ಕಿಲೋಮೀಟರ್).
೯. ದೊಡ್ಡ ಸರೋವರ: ವುಲಾಲ್- ಕಾಶ್ಮೀರ.
೧೦. ಹೆಚ್ಚು ವಿಸ್ತಾರವಾದ ರಾಜ್ಯ: ಮಧ್ಯಪ್ರದೇಶ.
೧೧. ಹೆಚ್ಚು ಜನಸಂಖ್ಯೆಯು ರಾಜ್ಯ: ಉತ್ತರ ಪ್ರದೇಶ (೧೧,೦೮,೬೨,೧೦೩)
೧೨. ಹೆಚ್ಚು ಮಳೆ ಬೀಳುವ ಪ್ರದೇಶ: ಚಿರಾಪುಂಜಿ (೫೦೦ ಸೆಂಟಿ ಮೀಟರ್).
೧೩. ಎತ್ತರವಾದ ವಿಗ್ರಹ: ಗೊಮ್ಮಟೇಶ್ವರ- ಕರ್ನಾಟಕ (೫೮ ಅಡಿಗಳು).
೧೪. ದೊಡ್ಡ ಸುರಂಗ: ಜವಾಹರ್ ಸುರಂಗ- ಜಮ್ಮು-ಕಾಶ್ಮೀರ (೧.೫೦ ಕಿ.ಮೀ.)
೧೫. ದೊಡ್ಡ ವಸ್ತುಸಂಗ್ರಹಾಲಯ: ಇಂಡಿಯನ್ ಮ್ಯೂಸಿಯಂ- ಕಲ್ಕತ್ತ.
೧೬. ದೊಡ್ಡ ಗುಹಾಂತರ್ದೇವಾಲಯಗಳು: ಎಲ್ಲೋರ- ಮಹಾರಾಷ್ಟ್ರ.
೧೭. ಹೆಚ್ಚು ಅರಣ್ಯ ಪ್ರದೇಶವುಳ್ಳ ರಾಜ್ಯ: ಅಸ್ಸಾಂ.
೧೮. ದೊಡ್ಡ ಮಸೀದಿ: ಜುಮ್ಮಾ ಮಸೀದಿ- ದೆಹಲಿ.
೧೯. ದೊಡ್ಡ ಗುಮ್ಮಟ: ಗೋಲಗುಮ್ಮಟ- ವಿಜಾಪುರ (ಕರ್ನಾಟಕ).
೨೦. ವಿಸ್ತೀರ್ಣದಲ್ಲಿ ಚಿಕ್ಕ ರಾಜ್ಯ: ಗೋವಾ.
೨೧. ಜನಸಂಖ್ಯೆಯಿಂದ ಚಿಕ್ಕ ರಾಜ್ಯ: ಸಿಕ್ಕಿಂ.
೨೨. ದೊಡ್ಡ ಮರುಭೂಮಿ: ಥಾರ್- ರಾಜಸ್ತಾನ.
೨೩. ಮಾನವ ನಿರ್ಮಿತ ದೊಡ್ಡ ಸರೋವರ ಗೋವಿಂದ ಸಾಗರ- ಭಾಕ್ರಾ.

ಸಂಗ್ರಹ: ಚೆನ್ನಕೇಶವ ಮುದುಗಲ್

# ಜ್ಞಾನನಿಧಿ

## ನಿಮಗೆ ಗೊತ್ತೆ ?



೧. ಪ್ರಪಂಚದಲ್ಲಿ ಉಷ್ಟ್ರಪಕ್ಷಿಯೇ ಅತ್ಯಂತ ಎತ್ತರವಾದ ಪಕ್ಷಿ. ಬೆಳೆದು ನಿಂತ ಉಷ್ಟ್ರ ಪಕ್ಷಿ ನೆಲದಿಂದ ಸುಮಾರು ಎಂಟು ಅಡಿಗಳ ಎತ್ತರ ಹಾಗೂ ೨೦೦ ಪೌಂಡ್ ಭಾರ ಇರುವದು.

೨. ಅತ್ಯಂತ ಉದ್ದವಾದ ಮಾನವ ನಿರ್ಮಿತ ಶುದ್ಧ ನೀರು ಸರಬರಾಜು ಮಾರ್ಗ ಕೋಲಾರಾಹೋ (ಅಮೆರಿಕ) ಎಕ್ವಾಡಕ್ಟ್ (೨೪೨ ಮೈಲುಗಳು).

೩. ಅತ್ಯಂತ ಎತ್ತರವಾದ ಚರ್ಚ್ ಜರ್ಮನಿಯ ಉಲ್ಮ್ ಕೆಥಡ್ರಲ್ (೫೨೯ ಅಡಿಗಳು).

೪. ಅತ್ಯಂತ ದೊಡ್ಡದಾದ ಸ್ಟೇಡಿಯಂ ಪ್ರೇಗ್‌ನ ಸ್ಟಾಹೋ ಸ್ಟೇಡಿಯಂ. ಇದು ೨,೪೦,೦೦೦ ಪ್ರೇಕ್ಷಕರ ಸ್ಥಳವನ್ನು ಹೊಂದಿದೆ.

೫. ನೀಲಿ ತಿಮಿಂಗಿಲವೇ ಪ್ರಪಂಚದಲ್ಲಿ ಅತ್ಯಂತ ದೊಡ್ಡದಾದ ಪ್ರಾಣಿ.

೬. ದಿನಕ್ಕೊಂದು ಕೋಣೆಯಂತೆ ೪೦ ವರ್ಷ ವಾಸ ಮಾಡಿದರೂ ಮುಗಿಯದಷ್ಟು ಕೋಣೆಗಳು "ವ್ಯಾಟಿಕನ್" ಭವನದಲ್ಲಿವೆ.

೭. ಆಫ್ರಿಕದ ಗಿನಿ ಪ್ರದೇಶದಲ್ಲಿ ೧೪ ಅಡಿ ಎತ್ತರವಾದ ಹುಲ್ಲು ಬೆಳೆಯುತ್ತದೆ.

೮. ಮಡಗಾಸ್ಕರ್ ದ್ವೀಪದಲ್ಲಿ ಒಂದು ಅಡಿ ಉದ್ದವಾದ ಬಾಳೇಹಣ್ಣು ಸಾಮಾನ್ಯ.

ಸಂಗ್ರಹ: **ಎಸ್. ವೇಲು**

## ಹರಿಶ್ಚಂದ್ರನ ವಂಶದವರು

**ಕಂ**ದಾಯ ಇಲಾಖೆಯವರು ಈ ದೇಶದವರೇ ಆಗಿರಲಿ, ಪರದೇಶದವರೇ ಆಗಿರಲಿ, ಕಂದಾಯ ವಸೂಲು ಮಾಡುವಲ್ಲಿ ಹರಿಶ್ಚಂದ್ರನ ಗುಣ ರಕ್ತಗತವಾಗಿರುತ್ತದೆಯೆನ್ನುವುದಕ್ಕೆ ಸ್ವೀಡನ್ನಿನ ಐವಾನ್ ಸೀವಾಸನ ಪ್ರಕರಣವೇ ಸಾಕ್ಷಿ.

ಅಲ್ಲಿನ ವೈಮಾನಿಕ ಪಡೆ ತರಬೇತಿಗೆಂದು ಬಹಳ ಹಣ ವೆಚ್ಚ ಮಾಡುತ್ತಿದ್ದುದನ್ನು ಕಂಡು ಆತ ಒಂದು ವೈಮಾನಿಕ ಉಪಕರಣವನ್ನು ತಯಾರಿಸಿದ. ಅದನ್ನು ಅಲ್ಲಿನ ವೈಮಾನಿಕಪಡೆಯ ವರಿಷ್ಠರು ಪರೀಕ್ಷಿಸಿ ಆ ಉಪಕರಣದ ಬಳಕೆಯಿಂದ ಸರಕಾರಕ್ಕೆ ಪ್ರತಿ ವರ್ಷ ೮೦ ಲಕ್ಷ ಡಾಲರುಗಳಷ್ಟು ಹಣ ಉಳಿತಾಯವಾಗುವುದೆನ್ನುವುದನ್ನು ಕಂಡುಕೊಂಡದ್ದೂ ಆಯಿತು. ಅದಕ್ಕಾಗಿ ಸ್ವೀಡನ್ನಿನ ಸರಕಾರ ಸೀವಾಸನಿಗೆ ೬೦,೦೦೦ ಡಾಲರುಗಳಷ್ಟು ಪಾರಿತೋಷಕವನ್ನು ಘೋಷಿಸಿದ್ದೂ ಆಯಿತು.

ಅದರೊಂದಿಗೆ ತನ್ನ ಕಷ್ಟಪರಂಪರೆಯೂ ಪ್ರಾರಂಭವಾಯಿತೆನ್ನುವುದು ಸೀವಾಸನ ಅನುಭವಕ್ಕೆ ಬರಲು ತಡವಾಗಲಿಲ್ಲ. ಸರಕಾರ ಅವನಿಗೆ ಬಹುಮಾನ ಘೋಷಿಸುವುದೇ ತಡ, ೩೦,೦೦೦ ಡಾಲರುಗಳಷ್ಟು ಟ್ಯಾಕ್ಸ್ ತುಂಬಬೇಕೆಂಬ ನೋಟೀಸು ಅವನಿಗೆ ಕಂದಾಯ ಇಲಾಖೆಯಿಂದ ಬಂತು. ಆದರೆ ಸೀವಾಸನ ಇಡೀ ವರ್ಷದ ಆದಾಯವನ್ನು ಗಮನಕ್ಕೆ ತೆಗೆದುಕೊಳ್ಳದೆ ಬರಿ ೪೦,೦೦೦ ಬಹುಮಾನದ ಮೇಲಷ್ಟೇ ಕಂದಾಯ ವಿಧಿಸಿದ್ದು ಕಂದಾಯ ಇಲಾಖೆಯ ಅಧಿಕಾರಿಗಳ ಲಕ್ಷ್ಯಕ್ಕೆ ಬಂದು, ಆತ ಇನ್ನೂ ಏಳುಸಾವಿರ ಡಾಲರುಗಳಷ್ಟು ಕರ ಕಟ್ಟಬೇಕೆಂಬ ನೋಟೀ

## ಜ್ಞಾನನಿಧಿ

# ದ್ರಾವಿಡ ಶಬ್ದದ ವ್ಯುತ್ಪತ್ತಿ

ಋಗ್ವೇದದಲ್ಲಿ 'ಇಂದ್ರಾಮಿತ್ರ' ಹಾಗೂ 'ಇಂದ್ರ' ಎಂಬ ಎರಡು ಶಬ್ದಗಳಿವೆ. ಸ್ವರ್ಗದ ಸಿಂಹಾಸನದ ಆಸೆಗೆ ಬಲಿ ಬಿದ್ದ ಇಂದ್ರನೇ ಲೋಕಕಲ್ಯಾಣಕ್ಕಾಗಿ ಟೊಂಕ ಕಟ್ಟಿ ನಿಂತಾಗ ಇಂದ್ರಾಮಿತ್ರನಾಗುತ್ತಾನೆ. ಇಂದ್ರಾಮಿತ್ರ ಶಬ್ದದಲ್ಲಿ 'ಇನ್' ಕಳಚಿ ದ್ರಾಮಿತ್ರ ಎಂಬ ಶಬ್ದದ ಮೇಲಿಂದ 'ದ್ರಾವಿಡ' ಶಬ್ದ ಬಳಕೆಯಲ್ಲಿ ಬಂತು.

ಬಲಶಾಲಿಯಾದ ಇಂದ್ರಾಮಿತ್ರನು ದಕ್ಷಿಣದಲ್ಲಿ ನೆಲಸಿದ. ಅಂದರೆ ಬಲ ಅಥವಾ ಶಕ್ತಿಯನ್ನು ದಕ್ಷಿಣ ದಿಕ್ಕಿಗೆ ಸೂಚಿಸುವುದರಿಂದ ದಕ್ಷಿಣ ಭಾರತವು ಇಂದ್ರಾಮಿತ್ರನ ನಾಡಾಯಿತು. ಇಂದ್ರನಿಂದ ಐಂದ್ರವಾಗಿ 'ಆಂಧ್ರ'ವಾಯಿತು. ಅವನ ಬಳಗವಾದ ಮರುದ್ಗಣವು ತಮಿಳಿನಲ್ಲಿ 'ಮರುಗನ್' (ನವಿಲಿನ ಚಿನ್ಹೆಯುಳ್ಳವರು) ಆಗಿ ಅದು ಉತ್ತರೋತ್ತರ ಸುಬ್ರಹ್ಮಣ್ಯ ಸೂಚಕವಾಗಿಯೂ ರೂಢಿಯಲ್ಲಿ ಬಂತು.

● 'ಗೌರಿ ಅಭಿ'

ಸನ್ನು ಕಳಿಸಿದರು.

ಆಯಿತು, ೩೭,೦೦೦ ಹೋದರೂ ಮೂರುಸಾವಿರ ಡಾಲರುಗಳಷ್ಟಾದರೂ ಉಳಿಯಿತು ಎಂದು ಲೆಫ್ಟಿನೆಂಟ್ ಸೀವಾಸ್ ಸಮಾಧಾನದ ನಿಟ್ಟುಸಿರುಬಿಟ್ಟ.

ಆದರೆ ಈ ಸಮಾಧಾನವೂ ಕ್ಷಣಿಕವಾಗಿತ್ತು. ಸ್ವೀಡನ್ನಿನಲ್ಲಿ ಇಷ್ಟು ದೊಡ್ಡ ಪ್ರಮಾಣದ ಟ್ಯಾಕ್ಸ್ ಕೊಡುವವರು ಸಾಮಾಜಿಕ ಭದ್ರತೆಯ ಯೋಜನೆಗಳಿಗಾಗಿಯೂ ಹಣ ಕಟ್ಟಬೇಕಂತೆ. ಕಂದಾಯ ಇಲಾಖೆಯ ಅಧಿಕಾರಿಗಳು ಅದನ್ನು ಮರೆತಿದ್ದರಿಂದ ಅದಕ್ಕಾಗಿ ಇನ್ನೂ ೧೬,೦೦೦ ಡಾಲರುಗಳನ್ನು ಕಟ್ಟಬೇಕೆಂಬ ನೋಟೀಸು ಸೀವಾಸನಿಗೆ ಹೋಯಿತು.

ಸರಕಾರಕ್ಕೆ ೮೦ ಲಕ್ಷ ಡಾಲರುಗಳನ್ನು 'ಉಳಿಸಿದ ತಪ್ಪಿಗಾಗಿ' ಪಾರಿತೋಷಕದ ಹಣವನ್ನಲ್ಲದೆ ೧೩,೦೦೦ ಡಾಲರುಗಳನ್ನು ಕೈಯಿಂದ ಕಳೆದುಕೊಳ್ಳುವ ಪ್ರಸಂಗ ಐವಾನ್ ಸೀವಾಸನಿಗೆ ಬಂತು.

ಏಕಾದರೂ ತಾನು ಈ ಸಂಶೋಧನೆ ಮಾಡಿದೆನಪ್ಪಾ ಎಂದಾತ ತಲೆಗೆ ಕೈಹಚ್ಚಿಕೊಂಡು ಕೂಡದೆ ವಿಧಿಯಿರಲಿಲ್ಲ.

● ಎಂ.ಆರ್.ಎಸ್. ರಾವ್



ಇವರು ಮರಾಠಿಯ ಗಣಮಾನ್ಯ ನಾಟಕಕಾರ ರಾಮ ಗಣೇಶ ಗಡಕರಿ. 'ಏಕಚ್ ಪ್ಯಾಲಾ' ಮುಂತಾದವು ಇವರ ಪ್ರಸಿದ್ಧ ನಾಟಕಗಳು. ಮಹಾರಾಷ್ಟ್ರದ ಠಾಣೆಯಲ್ಲಿವರ ಹೆಸರಿನಲ್ಲಿ 'ಗಡಕರಿ ರಂಗಾಯತನ'ವೆಂಬ ನಾಟ್ಯಮಂದಿರವೊಂದಿದೆ.

ಜ್ಞಾನನಿಧಿ

# ಕಂಪ್ಯೂಟರ್ ಜಾಲಕ್ಕೆ ವ್ಯಾಟಿಕನ್ ಗ್ರಂಥಾಲಯ

ಪ್ರಪಂಚದ ಅತ್ಯಂತ ಪ್ರಾಚೀನ ಗ್ರಂಥಾಲಯವಾದ 'ವ್ಯಾಟಿಕನ್ ಗ್ರಂಥಾಲಯ'ಕ್ಕೆ ಈಗ ೫೦೦ ವರ್ಷಗಳು. ಕ್ರಿ.ಶ. ೧೪೭೦ರಲ್ಲಿ ಪೋಪ್ ನಿಕೋಲಾಸ್ ಅವರಿಂದ ಸ್ಥಾಪಿತವಾದ ಈ ಗ್ರಂಥಾಲಯದಲ್ಲಿ, ಮುದ್ರಣ ಯಂತ್ರಗಳ ಆವಿಷ್ಕಾರದ ಮೊದಲ ೫೦ ವರ್ಷಗಳಲ್ಲಿ ಪ್ರಕಟವಾದ ೮೦೦೦ ಪುಸ್ತಕಗಳೂ ಸೇರಿ ಸುಮಾರು ೧,೫೦,೦೦೦ ಕೈಬರೆಹದ ಪುಸ್ತಕಗಳು ಹಾಗೂ ೧೦,೦೦,೦೦೦ ಮುದ್ರಿತ ಪುಸ್ತಕಗಳೂ ಇವೆ. ಜಗತ್ತಿನಲ್ಲೇ ಅಪರೂಪವಾದ, ಬೆಲೆ ಕಟ್ಟಲಾಗದ, ಪುರಾತನ ಹಸ್ತಪ್ರತಿಗಳ ಸಂಗ್ರಹ ಹೊಂದಿರುವ ಈ ಗ್ರಂಥಾಲಯದಲ್ಲಿ ಸ್ಥಳಾಭಾವ ಮತ್ತು ಸಿಬ್ಬಂದಿಗಳ ಕೊರತೆಯಿಂದಾಗಿ ಬಹುಜನರಿಗೆ ಇಲ್ಲಿಯ ಪುಸ್ತಕಗಳು ಸರಾಗವಾಗಿ ಎಟುಕದಂತಾಗಿವೆ. ಪ್ರಪಂಚದಲ್ಲಿ ಈಗ ಎಲ್ಲಿಯೂ ದೊರಕಲಾರದ ಎಷ್ಟೋ ಪುಸ್ತಕಗಳು ಇಲ್ಲಿ ಲಭ್ಯ. ಇಂಥ ಅತಿ ಅಪರೂಪದ ಪುಸ್ತಕಗಳ ಒಂದೊಂದು ಪ್ರತಿ ಇಲ್ಲಿವೆ. ಅಂದಮೇಲೆ ಈಗಾಗಲೇ ಜೀರ್ಣಾವಸ್ಥೆಗೆ ತಲುಪಿರುವ ಇಂತಹ ಪುಸ್ತಕಗಳ ಮೇಲೆ ಸಾಮಾನ್ಯರು ಕೈ ಆಡಿಸುವುದು ಕನಸೇ ಸರಿ.

ಈ ಎಲ್ಲ ತೊಂದರೆಗಳ ನಿವಾರಣೆಗಾಗಿ ಹಾಗೂ 'ಮುಟ್ಟಿದರೆ ಪುಟ ಕಿತ್ತು ಬರುವ' ಅತ್ಯಂತ ಹಳೆಯ ಪುಸ್ತಕಗಳಿಗೆ ಜೀವ ತುಂಬಲು ಶೀಘ್ರದಲ್ಲಿಯೇ ಇಡೀ ಗ್ರಂಥಾಲಯವನ್ನೇ ಕಂಪ್ಯೂಟರೀಕರಿಸುವ ಕಾರ್ಯ ಆರಂಭವಾಗಲಿದೆ. ಅಮೆರಿಕದ ಸುಪ್ರಸಿದ್ಧ ಕಂಪ್ಯೂಟರ್ ಸಂಸ್ಥೆಯಾದ 'ಐ.ಬಿ.ಎಂ. ಕಾರ್ಪೋರೇಶನ್' ಈ ಗ್ರಂಥಾಲಯದ ಕಂಪ್ಯೂಟರೀಕರಣದ ಉಸ್ತುವಾರಿ ವಹಿಸಲಿದೆ.

ಕಂಪ್ಯೂಟರೀಕರಣದ ಮೊದಲ ಹಂತದಲ್ಲಿ ಎಲ್ಲ ಪುಸ್ತಕಗಳ, ಪ್ರತಿಯೊಂದು ಪುಟದ ನೈಜ ಪ್ರತಿಬಿಂಬಗಳನ್ನು (True images), 'ಕಂಪ್ಯೂಟರ್ ಸ್ಕ್ಯಾನಿಂಗ್' ತಂತ್ರಜ್ಞಾನವನ್ನು ಬಳಸಿ, ಕಂಪ್ಯೂಟರ್ ಸುರುಳಿಗಳು ಮತ್ತು ಕಂಪ್ಯೂಟರ್ ತಟ್ಟೆಗಳ ಮೇಲೆ ಕಾಯಂ ಆಗಿ ಹಿಡಿದಿಡಲಾಗುತ್ತದೆ.

ಆನಂತರ ಹೀಗೆ ಬಹುಕಾಲ ಬಾಳಿಕೆ ಬರುವ ಕಂಪ್ಯೂಟರ್ ಸುರುಳಿಗಳು ಮತ್ತು ಕಂಪ್ಯೂಟರ್ ತಟ್ಟೆಗಳ ಮೇಲೆ ಮುದ್ರಿತಗೊಂಡ ಪುಟಗಳ ಪ್ರತಿಬಿಂಬಗಳು, ಗ್ರಂಥಾಲಯದ ಮುಖ್ಯ ಕಂಪ್ಯೂಟರ್‌ನ ಮೂಲಕ ದೂರದ ವಿಶ್ವವಿದ್ಯಾಲಯಗಳಲ್ಲಿ ಹಾಗೂ ತರಗತಿಗಳಲ್ಲಿ ಕುಳಿತ ವಿದ್ಯಾರ್ಥಿಗಳು ಹಾಗೂ ಪಂಡಿತರಿಗೆ (Scholars), ಅವರದೇ ಆದ ಕಂಪ್ಯೂಟರ್ ಪರದೆಗಳ ಮೇಲೆ ಮೂಡಿಸಿ ಓದಲು ಸಾಧ್ಯವಾಗುವಂತ ಸಂಪರ್ಕ ಜಾಲವನ್ನು (Communication network) ಒದಗಿಸಲಾಗುತ್ತದೆ.

ಈ ಕಂಪ್ಯೂಟರೀಕರಣದ ಮುಕ್ತಾಯದ ನಂತರ, ಅಮೆರಿಕದ ಬೇರೆ ಬೇರೆ ವಿಶ್ವವಿದ್ಯಾಲಯಗಳ ತರಗತಿಗಳಲ್ಲಿ ಈ ಗ್ರಂಥಾಲಯದಿಂದ ಸಾವಿರಾರು ಮೈಲಿಗಳ ದೂರದಲ್ಲಿ ಕುಳಿತ ವಿದ್ಯಾರ್ಥಿಗಳು ತಮಗೆ ಬೇಕೆನಿಸಿದ ಪುಸ್ತಕವನ್ನು ಆಗಿಂದಾಗ ಓದಲು ಸಾಧ್ಯವಾಗುವುದರ ಮೂಲಕ ಈ ಜಗತ್‌ಪ್ರಸಿದ್ಧ ವ್ಯಾಟಿಕನ್ ಗ್ರಂಥಾಲಯವು ಕಂಪ್ಯೂಟರ್ ಯುಗಕ್ಕೆ ಕಾಲಿರಿಸಲಿದೆ.

**ಸಂಜೀವ ಆರ್. ಹಲವಾಯಿ**

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

**ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ**

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. **ಆಪ್ಯಾಯನ**
(ಅ) ತುಪ್ಪ
(ಆ) ದೂರ ದೇಶಕ್ಕೆ ಹೋಗುವುದು
(ಇ) ಸಂತೋಷ ಉಂಟುಮಾಡತಕ್ಕ
(ಈ) ಹೀರಿದ್ದು

೨. **ವಿಪರೀತ**
(ಅ) ವಿರುದ್ಧ
(ಆ) ಬಹಳ
(ಇ) ಬ್ರಾಹ್ಮಣ
(ಈ) ಮೋಸ

೩. **ನಲ್ಮೆ**
(ಅ) ಆನಂದ
(ಆ) ಸುಂದರ
(ಇ) ಮೆತ್ತಗೆ
(ಈ) ಪ್ರೀತಿ

೪. **ಗಳಹು**
(ಅ) ಬಿದಿರಿನ ತುಂಡು
(ಆ) ಅತಿಯಾಗಿ ಮಾತಾಡು
(ಇ) ದುಃಖಿಸು
(ಈ) ಹಿಂದಿರುಗಿಸು

೫. **ದುಷ್ಕರ**
(ಅ) ಮಾಡಲು ಕಷ್ಟವಾದ
(ಆ) ಅವಲಕ್ಷಣದ ಕೈ
(ಇ) ಆನೆಯ ಸೊಂಡಿಲು
(ಈ) ದುರಾಚಾರ

೬. **ದುಸ್ತರ**
(ಅ) ಎತ್ತರವಾದ
(ಆ) ದಾಟಲು ಕಠಿನವಾದ
(ಇ) ಪುಸ್ತಕಗಳ ಕಟ್ಟು
(ಈ) ದುಃಖಕರ

೭. **ಪ್ರತಾರಣೆ**
(ಅ) ಮೋಸ
(ಆ) ಶೌರ್ಯ
(ಇ) ಪುಸಲಾಯಿಸುವಿಕೆ
(ಈ) ಪ್ರೋತ್ಸಾಹ

೮. **ತೆವಳು**
(ಅ) ಜಾರು
(ಆ) ಬೀಳು
(ಇ) ಕದಿ
(ಈ) ಹರಿದುಕೊಂಡು ಹೋಗು

೯. **ಓಜಸ್ಸು**
(ಅ) ಓಟ
(ಆ) ಶಕ್ತಿ
(ಇ) ಗುರು
(ಈ) ಪ್ರೇಮ

೧೦. **ಮುಸುರು**
(ಅ) ಬಾಡು
(ಆ) ಎಂಜಲು
(ಇ) ಮುಚ್ಚು
(ಈ) ಎಡಹು

೧೧. **ವಿಶ್ಲೇಷಣೆ**
(ಅ) ಕ್ರಿಯಾಪದದ ಗುಣವನ್ನು ಹೇಳುವ ಶಬ್ದ
(ಆ) ಒಂದುಗೂಡಿಸುವುದು
(ಇ) ಬಿಡಿಸುವುದು
(ಈ) ಒಂದೇ ಶಬ್ದಕ್ಕೆ ಹಲವು ಅರ್ಥ ವಿರುವುದು

೧೨. **ಸ್ಫುರಿಸು**
(ಅ) ಎತ್ತು
(ಆ) ಮಿಡುಕು
(ಇ) ರಭಸದಿಂದ ಓಡು
(ಈ) ಹೊಳೆ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

೧. ಆಪ್ಯಾಯನ

(ಇ) ಸಂತೋಷ ಉಂಟುಮಾಡತಕ್ಕ, ತೃಪ್ತಿಯುಂಟುಮಾಡುವ, ಉತ್ಸಾಹಗೊಳಿಸುವ, ಪೂರ್ಣವಾಗಿ ಅಥವಾ ಕೊಬ್ಬುವಂತೆ ಮಾಡುವ, ಸಂತುಷ್ಟಿ. ಉದಾ: ಅವನ ಉಪದೇಶವು ನಮಗೆ ಆಪ್ಯಾಯನವಾಯಿತು. (ಸಂ. ಆಪ್ಯೈ = ಉಬ್ಬು ಧಾತುವಿನಿಂದ)

೨. ವಿಪರೀತ

(ಅ) ವಿರುದ್ಧ, ಹಿಂದುಮುಂದಾದ, ತಪ್ಪು ದಾರಿ ಹಿಡಿದ, ಅನಿಷ್ಟವಾದ, ಮಿತಿಮೀರಿದ, ವಿಪರೀತಮತಿ = ದಾರಿಗೆಟ್ಟ ಬುದ್ಧಿ. ವಿಪರೀತ ಕಾಲ = ಅನಿಷ್ಟ ಕಾಲ. ವಿಪರೀತಗತಿ = ಹಿಂದುಮುಂದಾಗಿ ಸಾಗುವಿಕೆ. (ಸಂ. ವಿ + ಪರಿ + ಇತ)

೩. ನಲ್ಮೆ

(ಈ) ಪ್ರೀತಿ, ಪ್ರೇಮ, ಪ್ರಣಯ, ಒಲುಮೆ, ಸ್ನೇಹ, ಒಳಿತು, ಶುಭ. (ಕ.)

೪. ಗಳಹು

(ಅ) ಅತಿಯಾಗಿ ಮಾತಾಡು, ವ್ಯರ್ಥವಾಗಿ ಹರಟು, ಅತಿಯಾಗಿ ಮಾತಾಡುವಿಕೆ, ವ್ಯರ್ಥ ಭಾಷಣ. ಉದಾ: "ಪಾಂಡ್ಯ, ನೀಗಳಹದಿರು." (ಕ.)

೫. ದುಷ್ಕರ

(ಅ) ಮಾಡಲು ಕಷ್ಟವಾದ, ಕಠಿನವಾದ, ದುಸ್ಸಾಧ್ಯವಾದ, ಕಠಿನ ಕಾರ್ಯ. ಉದಾ: ಪಾಕಿಸ್ತಾನದೊಡನೆ ಒಡಂಬಡಿಕೆ ಸಾಧಿಸುವುದು ದುಷ್ಕರ (ಸಂ.)

೬. ದುಸ್ತರ

(ಅ) ದಾಟಲು ಕಠಿನವಾದ, ನಿಸ್ತರಿಸಲಸಾಧ್ಯವಾದ, ಅಸಹನೀಯವಾದ. ಉದಾ: ಈ ಕಷ್ಟ ನನಗೆ ದುಸ್ತರವಾದುದು. (ಸಂ. ದುರ್ + ತರ = ದಾಟಲು ಕಷ್ಟವಾದ.)

೭. ಪ್ರತಾರಣೆ

(ಅ) ಮೋಸ, ವಂಚನೆ. ಉದಾ: ದುಷ್ಟರ ಪ್ರತಾರಣೆಗೊಳಗಾಗಿ ಅವನು ಸರ್ವಸ್ವವನ್ನು ಕಳೆದುಕೊಂಡ. (ಸಂ.- ಪ್ರ + ತರ್ = ಹೆಚ್ಚಾಗಿ ದಾಟುವುದು ಎಂಬ ಸಂಸ್ಕೃತ ಧಾತುವಿನಿಂದ)

೮. ತೆವಳು

(ಈ) ನೆಲದ ಮೇಲೆ (ಮನುಷ್ಯ) ಹರಿದುಕೊಂಡು ಹೋಗು. ಉದಾ: ತೀರ ನಿರ್ಬಲನಾಗಿ ಆತ ತೆವಳಿಕೊಂಡು ಮನೆಗೆ ಬಂದನು. (ಕ.)

೯. ಓಜಸ್ಸು

(ಅ) ಶಕ್ತಿ, ಸತ್ವ, ಚೈತನ್ಯ, ಕಾಂತಿ, ತೇಜಸ್ಸು, ಉದ್ದುದ್ದ ಸಮಾಸಗಳಿಂದ ಕೂಡಿದ ಶೈಲಿ, ಸ್ಥೈರ್ಯ. ಉದಾ: ಅವನ ಮಾತಿನ ಓಜಸ್ಸು ಎಲ್ಲರನ್ನೂ ಮುಗ್ಧಗೊಳಿಸಿತು, ಅವನು ತುಂಬ ಓಜಸ್ವಿ. (ಸಂ. ಓಜಸ್)

೧೦. ಮುಸುರು

(ಇ) ಮುಚ್ಚು (ಸುತ್ತಲೂ ಸೇರಿ), ಮುತ್ತಿಗೆ ಹಾಕು, ಕವಿ, ಮರೆಮಾಡು. ಉದಾ: ಹೆಣಕ್ಕೆ ಹದ್ದುಗಳು ಮುಸುರುವಂತೆ. (ಕ.)

೧೧. ವಿಶ್ಲೇಷಣೆ

(ಇ) ಬಿಡಿಸುವುದು, ಬಿಡಿಬಿಡಿಯಾಗಿ ವಿಂಗಡಿಸಿ ಪರೀಕ್ಷಿಸುವುದು. ಉದಾ: ಸಮಸ್ಯೆಯ ವಿಶ್ಲೇಷಣೆಗೆ ಇದು ನೆರವಾಗುತ್ತದೆ. ಮನೋವಿಶ್ಲೇಷಣೆ = ಮನಸ್ಸಿನ ವ್ಯಾಪಾರಗಳನ್ನು ವಿಂಗಡಿಸಿ ಅರ್ಥ ಮಾಡುವುದು. (ಸಂ. ವಿ + ಶ್ಲಿಷ್)

೧೨. ಸ್ಫುರಿಸು

(ಈ) ಹೊಳೆ, ಮನಸ್ಸಿಗೆ ಒಮ್ಮೆಲೆ ತೋಚು. ಉದಾ: ಈ ಪದ್ಯದ ಅರ್ಥ ನನಗೆ ಒಮ್ಮೆಲೇ ಸ್ಫುರಿಸಿತು, ಕಂಪಿಸು. ಉದಾ: ಯುದ್ಧಕ್ಕೆ ಹೊರಟಾಗ ಕೌರವನ ಎಡಹೆಗಲು ಸ್ಫುರಿಸಿತು. (ಸಂ.)

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | |
|---|---|---|
| ೭-೮ ಸರಿಯಿದ್ದರೆ | ... | ಸಾಧಾರಣ |
| ೯-೧೦ ಸರಿಯಿದ್ದರೆ | ... | ಉತ್ತಮ |
| ೧೧-೧೨ ಸರಿಯಿದ್ದರೆ | ... | ಅತ್ಯುತ್ತಮ |

# ಅಧಿಕ ಮಾಸ ಏಕೆ ಬರುತ್ತದೆ ?

● ಶ್ರೀವತ್ಸ ಎಸ್. ವಟಿ

**ಚಾಂದ್ರಮಾನ ಕಾಲಗಣನೆಯಲ್ಲಿ ಮೂರು ವರ್ಷಕ್ಕೆ ಒಮ್ಮೆಯಂತೆ ಹೊಸ ಮಾಸದ ಸೇರ್ಪಡೆ ಅನಿವಾರ್ಯ**

ಭಾರತದ ಹಲವಾರು ರೀತಿಯ ಕಾಲಗಣನ ಸಂಪ್ರದಾಯಗಳಲ್ಲಿ ದಕ್ಷಿಣ ಭಾರತದಲ್ಲಿ ಹಿಂದೂಗಳ ಚಾಂದ್ರಮಾನ ಮತ್ತು ಸೌರಮಾನ ಕ್ರಮಗಳು ಮುಖ್ಯವಾಗಿದ್ದು ಅದರಲ್ಲೂ ದಕ್ಷಿಣ ಭಾರತದಲ್ಲಿ ಚಾಂದ್ರಮಾನವು ಹೆಚ್ಚು ಜನಪ್ರಿಯ. ಈ ಕಾಲಗಣನ ಕ್ರಮದಲ್ಲಿ ಆಗಾಗ ಅಧಿಕಮಾಸಗಳು ಬರುತ್ತಿರುತ್ತವೆ. ಇವು ಏಕೆ ಬರುತ್ತವೆ? ಎಂಬುದು ಕುತೂಹಲವೂ ಕೆಲವರಿಗೆ ಆಶ್ಚರ್ಯವೂ ಹೌದು. ಅಧಿಕಮಾಸವೆಂದರೆ ಆ ಸಂವತ್ಸರದಲ್ಲಿ ಒಂದು ಮಾಸ ಹೆಚ್ಚಾಗುವುದು ಎಂದರ್ಥ. ಹೀಗೆ ಅದು ಹದಿಮೂರು ಮಾಸಗಳುಳ್ಳ ಸಂವತ್ಸರವಾಗುತ್ತದೆ. ಇದರಿಂದ ಕಾಲಗಣನೆಯಲ್ಲಿ ಒಂದು ತಿಂಗಳ ವ್ಯತ್ಯಾಸ ಬರುತ್ತದೆ. ಉದಾ: ಕ್ರೈಸ್ತಪದ್ಧತಿಯ ಕಾಲಗಣನೆಗೆ ಹೋಲಿಸಿದರೆ ಹಿಂದೂಗಳ ಯುಗಾದಿಯು ಪ್ರತಿವರ್ಷ ಸಾಧಾರಣವಾಗಿ ಮಾರ್ಚ್‌ನಲ್ಲೂ ಗಣಪತಿ ಹಬ್ಬವು ಆಗಸ್ಟ್‌ನಲ್ಲೂ ಬರುತ್ತವೆ. ಆದರೆ ೧೯೯೪ರಲ್ಲಿ ಯುಗಾದಿಯು ಏಪ್ರಿಲ್-೧೧ರಂದೂ, ಗಣಪತಿ ಹಬ್ಬವು ಸೆಪ್ಟೆಂಬರ್-೯ರಂದೂ ಬಂದವು. ಇದಕ್ಕೆ ಕಾರಣ ೧೯೯೩ರ ಶ್ರೀಮುಖನಾಮ ಸಂವತ್ಸರದಲ್ಲಿ ಅಧಿಕ ಮಾಸ ಬಂದದ್ದು.

ಈ ಅಧಿಕಮಾಸವೆಂದರೆ ಏನು ? ಅದು ಏಕೆ ಬರುತ್ತದೆ ? ಯಾವಾಗ ಬರುತ್ತದೆ ? ಅದು ಬರದಿದ್ದರೆ ಏನು ತೊಂದರೆ ? ಅದಕ್ಕಾಗಿ ಏಕೆ ಕಷ್ಟಪಡಬೇಕು ? ಅದು ಬರದಿದ್ದರೆ ಲೆಕ್ಕಾಚಾರ ಸುಲಭವಲ್ಲವೇ ? ಎಂದು ನೀವು ಹಲವಾರು ಬಾರಿ ಯೋಚಿಸಿರಬಹುದು. ನಿಮ್ಮ ಸಂದೇಹಗಳ ಸರಮಾಲೆಯನ್ನು ಹಂತಹಂತವಾಗಿ ಬಿಡಿಸೋಣ.

ಭಾರತದ ಹಿಂದೂ ಕಾಲಗಣನ ಕ್ರಮದಲ್ಲಿ ಚಾಂದ್ರಮಾನ, ಸೌರಮಾನ, ಬಾರ್ಹಸ್ಪತ್ಯಮಾನ, ಶುಕ್ರಮಾನ, ನಕ್ಷತ್ರಮಾನ, ಮುಂತಾಗಿ ಅನೇಕ ಅಂತರಿಕ್ಷ ಕಾಯಗಳ ಚಲನೆಯನ್ನನುಸರಿಸುವ

ವಿವಿಧ ರೀತಿಯ ಕಾಲಗಣನ ಕ್ರಮಗಳಿವೆ. ಈ ಪ್ರತಿಯೊಂದೂ ಬೇರೆ ಬೇರೆ ಅವಧಿಯ ಕಾಲಮಾನಗಳನ್ನು ಹೊಂದಿವೆ.

ಚಂದ್ರನಿಗೆ ಕನ್ನಡ ಭಾಷೆಯಲ್ಲಿ 'ತಿಂಗಳು' ಎಂದು ಹೆಸರಿದೆ. ನಮ್ಮ ಜಾನಪದ ಉಲ್ಲೇಖಗಳಲ್ಲೂ ಈ ಅಂಶವನ್ನು ಕಾಣಬಹುದು. ಇದರಿಂದ ಹುಣ್ಣಿಮೆಯಿಂದ ಹುಣ್ಣಿಮೆಯ ಅವಧಿಯನ್ನು ತಿಂಗಳು ಎಂದು ಕರೆಯುವುದು ರೂಢಿಗೆ ಬಂತು. ಚಾಂದ್ರಮಾಸವನ್ನು ಹುಣ್ಣಿಮೆಯಿಂದ ಹುಣ್ಣಿಮೆಯತನಕ ಅಳೆಯುವುದನ್ನು ಪೂರ್ಣಿಮಾಂತವೆಂದೂ, ಅಮಾವಾಸ್ಯೆಯಿಂದ ಅಮಾವಾಸ್ಯೆಗೆ ಅಳೆಯುವುದನ್ನು ಅಮಾಂತವೆಂದೂ ಕರೆಯಲಾಗುತ್ತಿದೆ. ಒಂದು ಚಾಂದ್ರಮಾಸದಲ್ಲಿ ಹುಣ್ಣಿಮೆಯಿಂದ ಅಮಾವಾಸ್ಯೆಗೆ ಮತ್ತು ಅಮಾವಾಸ್ಯೆಯಿಂದ ಹುಣ್ಣಿಮೆಗೆ ಒಂದೊಂದರಂತೆ ಒಟ್ಟು ಎರಡು ಪಕ್ಷಗಳಿವೆ. ಒಂದು ಪಕ್ಷಕ್ಕೆ ಹದಿನೈದರಂತೆ ಒಟ್ಟು ಮೂವತ್ತು ತಿಥಿಗಳಿವೆ. ಹನ್ನೆರಡು ಚಾಂದ್ರಮಾಸಗಳಿಗೆ ಅಂದರೆ ೩೬೦ ತಿಥಿಗಳಿಗೆ ಒಂದು ಚಾಂದ್ರಮಾನ ಸಂವತ್ಸರ. ಹೀಗೆ ಮೇಲುನೋಟಕ್ಕೆ ಲೆಕ್ಕಾಚಾರ ಸರಳವಾಗಿ ಕಂಡರೂ ಅಧಿಕಮಾಸದ ಗೊಂದಲವೇಕೆ ? ಎಂಬ ಪ್ರಶ್ನೆ ಸಹಜ.

ನಿಜವಾಗಿ ಲೆಕ್ಕಾಚಾರ ಇಷ್ಟು ಸರಳವಾಗಿಲ್ಲ. ನಾವು ಒಂದು ಚಾಂದ್ರತಿಥಿಯನ್ನು ೨೪ ಗಂಟೆಗಳ ಅವಧಿಯ ಒಂದು ದಿನಕ್ಕೆ ಸಮವೆಂದುಕೊಳ್ಳುವುದು ತಪ್ಪಿನ ಮೊದಲ ಹಂತ. ಚಂದ್ರನ ಒಂದು ತಿಂಗಳಿಗೆ ೩೦ ದಿನಗಳೆಂದು ಭಾವಿಸುವುದು ಎರಡನೇ ತಪ್ಪು. ಒಂದು ಚಾಂದ್ರ ಸಂವತ್ಸರಕ್ಕೆ ೩೬೦ ದಿನಗಳೆಂದು ಭಾವಿಸುವುದು ಮೂರನೇ ತಪ್ಪು ಹಾಗೂ ಒಂದು ವರ್ಷವೆಂದರೆ ೩೬೦ ದಿನಗಳೆಂದು ಭಾವಿಸುವುದು ನಾಲ್ಕನೇ ತಪ್ಪು, ಹೀಗೆ ಸ್ವಾಭಾವಿಕ ಲೆಕ್ಕಾಚಾರದ ತಪ್ಪುಗಳಿಂದಾಗಿ ಒಟ್ಟಾರೆ ಘಟಿಸುವ ತಪ್ಪನ್ನು ಸರಿಹೊಂದಿಸುವುದಕ್ಕಾಗಿ ರೂಪಿಸಿರುವ ಕ್ರಮವೇ ಅಧಿಕಮಾಸ.

## ಖಗೋಲದ ಪರಿಣಾಮ

ನಾವು "ಇವತ್ತಿನ ತಿಥಿ ಪಾಡ್ಯ, ನಾಳೆ ಬಿದಿಗೆ, ನಾಡಿದ್ದು ತದಿಗೆ, ನಾಲ್ಕನೇ ದಿನ ಚೌತಿ," ಎಂದು ಲೆಕ್ಕ ಹಾಕುತ್ತೇವಷ್ಟೆ. ಈಗ "ತಿಥಿ ಎಂದರೇನು ?" ಎಂಬಲ್ಲಿಂದ ಆರಂಭಿಸೋಣ. ಭೂಮಿಯಲ್ಲಿ ನಿಂತ ನಮಗೆ ಆಕಾಶವು ಒಂದು ಗೋಲದಂತೆ ಕಾಣುತ್ತದೆ. ಭೂಮಿಯ ಸಮಭಾಜಕವೃತ್ತದ ಬಳಿ ವಾಸಿಸುವ ಭಾರತೀಯರಾದ ನಾವು ನಮ್ಮ ನೆತ್ತಿಯ ನೇರದ ಆಕಾಶವನ್ನು ಉತ್ತರ ಮತ್ತು ದಕ್ಷಿಣ ಭಾಗವಾಗಿ, ವಿಭಾಗಿಸಿದ್ದೇವೆ. ಹೀಗೆ ವಿಭಾಗಿಸುವ ರೇಖೆ ಪೂರ್ವ-ಪಶ್ಚಿಮವಾಗಿ ಹಾದು ಹೋಗುತ್ತದೆ. ಯಾವುದೇ ಗೋಲವನ್ನು ಸಮವಾಗಿ ವಿಭಾಗಿಸುವ ರೇಖೆಯು ವೃತ್ತವಾಗಿರುತ್ತದೆ. ಹಾಗೆ ನಮ್ಮ ಆಕಾಶವನ್ನು ಸಮವಾಗಿ ವಿಭಾಗಿಸುವ ರೇಖೆಯು ಒಂದು ಕಾಲ್ಪನಿಕವೃತ್ತ. ಯಾವುದೇ ವೃತ್ತದಂತೆ ಈ ವೃತ್ತವೂ ೩೬೦ ಡಿಗ್ರಿಯದಾಗಿದೆ. (ಈ ಜ್ಯಾಮಿತಿಯ ಲೆಕ್ಕ ವೇದ ಕಾಲದಿಂದಲೂ ಭಾರತದಲ್ಲಿ ಬಳಕೆಯಲ್ಲಿದೆ. ಆಗ ಡಿಗ್ರಿಯನ್ನು 'ಅಂಶ' ಎಂದು ಕರೆಯುತ್ತಿದ್ದರು, ಇಂದಿಗೂ ಜ್ಯೋತಿಷ್ಯಶಾಸ್ತ್ರದಲ್ಲಿ ಇದೇ ಲೆಕ್ಕ ಬಳಕೆಯಲ್ಲಿದೆ.) ಈ ಕಾಲ್ಪನಿಕ ವೃತ್ತದಲ್ಲಿ ಸುಮಾರು ೧೬ಡಿಗ್ರಿಯಷ್ಟು ಅಗಲಕ್ಕೆ ಸೂರ್ಯ-ಚಂದ್ರಾದಿ ಎಲ್ಲ ಗ್ರಹಗಳು ಭೂಮಿಯನ್ನು ಸುತ್ತಿದಂತೆ ನಮಗೆ ಕಾಣುತ್ತವೆ. ಆದ್ದರಿಂದ ಈ ೩೬೦ ಡಿಗ್ರಿ ಉದ್ದದ ಮತ್ತು ೧೬ ಡಿಗ್ರಿ ಅಗಲದ ರಸ್ತೆಯನ್ನು ಕಾಂತಿವೃತ್ತ (Zodiac) ಎಂದು ಕರೆಯುತ್ತೇವೆ. ಈ ಕಾಂತಿವೃತ್ತದ ವ್ಯಾಪ್ತಿಯಲ್ಲಿ ಬರುವ ಸ್ಥಿರವಾದ ನಕ್ಷತ್ರಗಳನ್ನು ಗ್ರಹಗಳ ಚಲನೆಯ ವೇಗವನ್ನಳೆಯುವ ಮೈಲಿಗಲ್ಲುಗಳನ್ನಾಗಿ ಬಳಸುತ್ತೇವೆ. ಸೂರ್ಯನು ಒಂದು ನಕ್ಷತ್ರ, ಚಂದ್ರನು ಒಂದು ಉಪಗ್ರಹ, ಎಂಬುದು ನಿಜವಾದರೂ ಅವು ಈ ಕಾಂತಿವೃತ್ತದಲ್ಲಿ ಪ್ರದಕ್ಷಿಣೆ ಹಾಕುವಂತೆ ಕಾಣುವ ಕಾರಣ ಅವನ್ನೂ ಗ್ರಹಗಳೆಂದೇ ಕರೆದು ಕಾಲಗಣನೆಗೆ ಬಳಸಲಾಗಿದೆಯೇ ವಿನಾ ನಮ್ಮ ಪುರಾತನ ಖಗೋಲಜ್ಞರು, ಅವನ್ನು ಗ್ರಹಗಳೆಂದು ಭ್ರಮಿಸಿದರೆಂದು ತಪ್ಪು ತಿಳಿಯಬಾರದು.

ಭೂಮಿಯಲ್ಲಿ ನಿಂತು ನೋಡುವ ನಮಗೆ ಈ ಕಾಂತಿವೃತ್ತದಲ್ಲಿನ ಗ್ರಹಗಳ ಚಲನೆಯ ವೇಗ ಹೀಗೆ ಕಾಣುತ್ತದೆ. ಸೂರ್ಯ ದಿನಕ್ಕೆ ೧ ಡಿಗ್ರಿಯಂತೆ ಒಂದು ವರ್ಷದಲ್ಲೂ, ಚಂದ್ರ ದಿನಕ್ಕೆ ೧೨.೧ ಡಿಗ್ರಿಯಂತೆ ಸುಮಾರು ೨೯.೫೦ ದಿನದಲ್ಲೂ, ಮಂಗಳನು ಒಂದೂವರೆ ವರ್ಷದಲ್ಲೂ, ಬುಧ ಒಂದು ವರ್ಷದಲ್ಲೂ, ಗುರು ೧೨ ವರ್ಷದಲ್ಲೂ,

ಶನಿ ೩೦ ವರ್ಷದಲ್ಲೂ ಕ್ರಾಂತಿವೃತ್ತವನ್ನು ಒಂದು ಬಾರಿ ಸುತ್ತುತ್ತಾರೆ. (ಎಲ್ಲಕ್ಕಿಂತ ಶನಿಗ್ರಹವು ನಿಧಾನವಾಗಿ ಚಲಿಸುತ್ತದೆಂಬುದನ್ನು ಗಮನಿಸಿಯೇ ಪುರಾತನರು ಅದನ್ನು ಶನೈಶ್ಚರ-ಶನೈ=ನಿಧಾನಕ್ಕೆ ಚರ=ಚಲಿಸುವವನು- ಎಂದು ಕರೆದರು. ಅದೇ ಈಗ ಶನೀಶ್ವರ ಎಂದಾಗಿದೆ ಅಷ್ಟೆ.) ಹೀಗೆ ಗ್ರಹಗಳು ಕ್ರಾಂತಿವೃತ್ತದಲ್ಲಿ ಒಂದು ಸುತ್ತು ಸುತ್ತಲು ತೆಗೆದುಕೊಳ್ಳುವ ಅವಧಿಯೇ ಅವುಗಳ ಒಂದು ವರ್ಷ. ಇದೇ ಆಯಾ ಕಾಲಗಣನೆಯ ಕ್ರಮಗಳಿಗೆ ಆಧಾರ.

ಸೂರ್ಯ-ಚಂದ್ರ ಭೂಮಿಯನ್ನು ಪ್ರತಿದಿನ ಪೂರ್ವದಿಂದ ಪಶ್ಚಿಮಕ್ಕೆ ಪ್ರದಕ್ಷಿಣೆ ಹಾಕಿದಂತೆ ಕಂಡರೂ ಕ್ರಾಂತಿವೃತ್ತದ ಹಿನ್ನೆಲೆಯಲ್ಲಿ ಅವು ಪಶ್ಚಿಮದಿಂದ ಪೂರ್ವಕ್ಕೆ ಚಲಿಸುತ್ತವೆ. ಹೀಗೆ ಪ್ರತಿದಿನ ಸೂರ್ಯನು ಕ್ರಾಂತಿವೃತ್ತದ ಒಂದು ಡಿಗ್ರಿಯಷ್ಟು ಮತ್ತು ಚಂದ್ರನು ಸುಮಾರು ೧೨.೧ ಡಿಗ್ರಿಯಷ್ಟು ಚಲಿಸಿದಂತೆ ಕಂಡು ಚಂದ್ರನು ಪ್ರತಿದಿನ ಸೂರ್ಯನಿಗಿಂತ ೧೨ ಡಿಗ್ರಿಯಷ್ಟು (ಅಂದರೆ ಕ್ರಾಂತಿವೃತ್ತದ ೩೦ನೇ ಒಂದು ಭಾಗದಷ್ಟು) ಹಿಂದಕ್ಕೆ ಸರಿದಂತೆ ಭಾಸವಾಗುತ್ತದೆ. ಇದರಿಂದಾಗಿಯೇ ಪ್ರತಿ ದಿನ ಚಂದ್ರನು ಸೂರ್ಯನಿಗಿಂತ ಸ್ವಲ್ಪ, ಸ್ವಲ್ಪ ತಡವಾಗಿ ಹುಟ್ಟುತ್ತಾನೆ. ಹೀಗೆ ಪ್ರತಿದಿನ ಚಂದ್ರ ಮತ್ತು ಸೂರ್ಯರ ಮಧ್ಯೆ ೧೨ ಡಿಗ್ರಿಯಷ್ಟು ವ್ಯತ್ಯಾಸ ಉಂಟಾಗುತ್ತಾ ಹೋಗುತ್ತದೆ. ವೈಜ್ಞಾನಿಕವಾಗಿ ಹೀಗೆ ಸೂರ್ಯ ಮತ್ತು ಚಂದ್ರರ ಅಂತರ ಪ್ರತಿ ೧೨ ಡಿಗ್ರಿಯಷ್ಟು ಹೆಚ್ಚಾಗಲು ತಗಲುವ ಅವಧಿಗೆ ಒಂದು 'ತಿಥಿ' ಎಂದು ಹೆಸರು. ಹೀಗೆ ಚಾಂದ್ರ ತಿಥಿಗಳೆಂದರೆ ಕ್ರಾಂತಿವೃತ್ತದಲ್ಲಿ ಸೂರ್ಯ ಮತ್ತು ಚಂದ್ರರ ನಡುವೆ ಇರುವ ಅಂತರವನ್ನು ನಿರ್ಧರಿಸುವ ವೈಜ್ಞಾನಿಕ ಅಂಶಗಳು: ಎರಡು ತಿಥಿ ಎಂದರೆ ೨೪ ಡಿಗ್ರಿ, ೫ ತಿಥಿ ಎಂದರೆ ೬೦ ಡಿಗ್ರಿ, ೧೫ ತಿಥಿಗೆ ೧೮೦ ಡಿಗ್ರಿ, ಹೀಗೆ ೩೦ ತಿಥಿಗೆ ೩೬೦ ಡಿಗ್ರಿ ಅಂತರ ಎಂದು ತಿಳಿಯಬಹುದು.

ಈ ತಿಥಿಗಳನ್ನು ಮೂಲ ಘಟಕಗಳಾಗಿ ಬಳಸಿ ಒಂದು ಸಂವತ್ಸರ ಅವಧಿಯನ್ನು ನಿರ್ಧರಿಸುವ ಕಾಲಗಣನ ಕ್ರಮವೇ ಚಾಂದ್ರಮಾನ. ಅದು ಹೀಗಿದೆ. ಸೂರ್ಯ-ಚಂದ್ರರು ಕ್ರಾಂತಿವೃತ್ತದ ಒಂದೇ ಭಾಗದಲ್ಲಿರುವಾಗ, ಕಾಲಗಣನೆಯನ್ನಾರಂಭಿಸಿ ಅದನ್ನು ಕ್ರಾಂತಿ ವೃತ್ತದ ೦ ಡಿಗ್ರಿ ಎಂದುಕೊಂಡರೆ ಸೂರ್ಯ-ಚಂದ್ರರು ಒಟ್ಟಿಗೆ ಇದ್ದು ಚಂದ್ರನು ಸೂರ್ಯನ ಜೊತೆಗೇ ಹುಟ್ಟಿ ಜೊತೆಗೇ ಮುಳುಗುವುದರಿಂದ, ಆ ದಿನ ಹಗಲಲ್ಲಾಗಲೀ ರಾತ್ರಿಯಲ್ಲಾಗಲೀ ಚಂದ್ರನು ಕಾಣುವುದಿಲ್ಲ. ಇದೇ ಅಮಾವಾಸ್ಯೆ. ನಂತರ ಒಂದು ದಿನ ಕಳೆದಾಗ, ಚಂದ್ರನು ಸೂರ್ಯನಿಂದ ೧೨ ಡಿಗ್ರಿ ಹಿಂದೆ ಹೋಗಿರುತ್ತಾನೆ. ಹಾಗಾಗಿ ಪಾಡ್ಯದ ದಿನ ಸೂರ್ಯಾಸ್ತವಾದ ನಂತರ ಸ್ವಲ್ಪಹೊತ್ತು ಚಂದ್ರ ಕಾಣುತ್ತಿರುತ್ತಾನೆ. ಹೀಗೆ ಪ್ರತಿದಿನ ೧೨ ಡಿಗ್ರಿಯಷ್ಟು ಹಿಂದೆ ಹಿಂದೆ ಸರಿಯುತ್ತಾ ೧೫ ದಿನಗಳ ಹೊತ್ತಿಗೆ ಈ ಅಂತರ ೧೮೦ ಡಿಗ್ರಿಯಷ್ಟಾಗುತ್ತದೆ.

೧೮೦ ಡಿಗ್ರಿ ಎಂಬುದು, ಒಂದು ವೃತ್ತವನ್ನು ಸರಿಯಾಗಿ ಎರಡು ಭಾಗ ಮಾಡುವ ವಿಶಾಲಕೋನವುಳ್ಳ ಒಂದು ಸರಳರೇಖೆ. ಇದರಲ್ಲಿ ಎರಡು ಅಂತಿಮಬಿಂದುಗಳು ಮತ್ತು ಒಂದು ಮಧ್ಯಬಿಂದು ಇರುತ್ತದೆ. ಕ್ರಾಂತಿವೃತ್ತವನ್ನು ಭಾಗಮಾಡುವ ಈ ಖಗೋಲ ಕಾಲ್ಪನಿಕ ಸರಳರೇಖೆಯ ಮಧ್ಯಬಿಂದುವೇ ಭೂಮಿ ಹಾಗೂ ಅತ್ತಿತ್ತಲ ಎರಡು ಬಿಂದುಗಳೇ ಸೂರ್ಯ-ಚಂದ್ರರು. ಈ ರೀತಿ ಅಮಾವಾಸ್ಯೆಯಾದ ೧೫ ತಿಥಿಗಳಿಗೆ ಸರಿಯಾಗಿ ಚಂದ್ರನು ಸೂರ್ಯನಿಂದ ಕ್ರಾಂತಿವೃತ್ತದಲ್ಲಿ ೧೮೦ ಡಿಗ್ರಿ ಹಿಂದೆ ಸರಿಯುವ ಮೂಲಕ ಭೂಮಿಯನ್ನು ಕೇಂದ್ರವಾಗಿರಿಸಿಕೊಂಡು ಸೂರ್ಯನೊಂದಿಗೆ ಸರಳ ರೇಖೆಯನ್ನುಂಟುಮಾಡುತ್ತಾನೆ. ಇದರಿಂದ ಆ ದಿನ ಸೂರ್ಯನು ಪಶ್ಚಿಮದಲ್ಲಿ ಅಸ್ತಮಿಸುವ ವೇಳೆಗೆ ಸರಿಯಾಗಿ ಚಂದ್ರನು ಪೂರ್ವದಿಂದುದಯಿಸಿ ಇಡೀ ರಾತ್ರಿ ಆಕಾಶದಲ್ಲಿ ಪೂರ್ಣಬಿಂಬವಾಗಿ ಕಾಣುತ್ತಾನೆ. ಇದೇ ಪೂರ್ಣಿಮಾ ಅಥವಾ ಹುಣ್ಣಿಮೆ. ಹೀಗೆ ಚಂದ್ರನು ಸೂರ್ಯನಿಂದ ೯೦ ಡಿಗ್ರಿಗಳಷ್ಟು ಅಂತರದಲ್ಲಿದ್ದಾಗ ಸೂರ್ಯ, ಭೂಮಿ ಮತ್ತು ಚಂದ್ರರ ಮಧ್ಯೆ ಲಂಬಕೋನವುಂಟಾಗುತ್ತದೆ. ಆಗ, ಚಂದ್ರನು ನೆತ್ತಿಯ ಮೇಲಿದ್ದಾಗ ಸೂರ್ಯನು ಪೂರ್ವ ಅಥವಾ ಪಶ್ಚಿಮದಲ್ಲಿ ಉದಯಾಸ್ತ ಹಂತದಲ್ಲಿರುತ್ತಾನೆ. ದಿನಕ್ಕೆ ೧೨ ಡಿಗ್ರಿಗಳಂತೆ ೯೦ ಡಿಗ್ರಿಗೆ ಏಳೂವರೆ ತಿಥಿಗಳಾಗುವುದರಿಂದ ಆ ದಿನ ಚಂದ್ರನು ಉದಯಿಸಿ ಅರ್ಧ ಆಕಾಶವನ್ನು ಕ್ರಮಿಸಿರುತ್ತಾನೆ. ಇದೇ ಸಪ್ತಮಿ. ಹೀಗೆ ಚಂದ್ರನು




ಸೂರ್ಯನೊಂದಿಗಿನ ಅಂತರವನ್ನು ವೃದ್ಧಿಸಿಕೊಳ್ಳುತ್ತಾ ೩೦ ತಿಥಿಗಳನ್ನು ಕಳೆಯುವಾಗ ೩೬೦ ಡಿಗ್ರಿಗಳು ಸಂಪೂರ್ಣವಾಗುವುದರಿಂದ ಸೂರ್ಯ ಚಂದ್ರರು ಪುನಃ ಸೊನ್ನೆ ಡಿಗ್ರಿಯಲ್ಲಿ ಸಂಧಿಸುತ್ತಾರೆ. ಇದೇ ಅಮಾವಾಸ್ಯೆ. (ಚಿತ್ರವನ್ನು ಗಮನಿಸಿ) ಈ ಕ್ರಮ ಸೌರಮಂಡಲದಲ್ಲಿ ಭೂಮಿ ಮತ್ತು ಚಂದ್ರರ ಸೃಷ್ಟಿಯಾದಾಗಿನಿಂದಲೂ 'ಆಚಂದ್ರಾರ್ಕ'ವಾಗಿದೆ. ಹೀಗೆ ೦ ಡಿಗ್ರಿಯಿಂದ ೧೮೦ ಡಿಗ್ರಿಯವರೆಗಿನ ಚಂದ್ರನ ಅರ್ಧಪಯಣವು ಅಮಾವಾಸ್ಯೆಯಿಂದ ಹುಣ್ಣಿಮೆಯತನಕದ್ದಾಗಿ, ಮತ್ತು ೧೮೦ ಡಿಗ್ರಿಯಿಂದ ೦ ಡಿಗ್ರಿಯವರೆಗಿನ ಅರ್ಧಪಯಣವು ಹುಣ್ಣಿಮೆಯಿಂದ ಅಮಾವಾಸ್ಯೆವರೆಗಿನ ಭಾಗದ್ದಾಗಿದೆ. ಹೀಗೆ ಒಂದು ಚಾಂದ್ರಮಾಸದಲ್ಲಿ ಎರಡು ಪಕ್ಷಗಳಿದ್ದು ಒಂದೊಂದರಲ್ಲಿ ೧೫ ತಿಥಿಗಳಿವೆ. ಹೀಗೆ ಒಟ್ಟು ೧೨ x ೩೦ -- ೩೬೦ ಡಿಗ್ರಿ. ಇದೇ ಚಾಂದ್ರಮಾನ ಲೆಕ್ಕಾಚಾರ. ೧೨ ಚಾಂದ್ರಮಾಸಕ್ಕೆ ಒಂದು ಚಾಂದ್ರಸಂವತ್ಸರ.

ಈ ಲೆಕ್ಕಾಚಾರದ ಹಿನ್ನೆಲೆಯಲ್ಲಿ ಉದ್ಭವವಾಗುವ ಒಂದೆರಡು ಸಮಸ್ಯೆಗಳನ್ನು ನೋಡೋಣ.

ಚಾಂದ್ರಮಾಸದಲ್ಲೇನೋ ೩೦ ತಿಥಿಗಳುಳ್ಳ ಒಂದು ಮಾಸವೂ ಅಂಥ ಹನ್ನೆರಡು ಮಾಸಗಳಿಗೆ ೩೬೦ ತಿಥಿಗಳುಳ್ಳ ಒಂದು ಸಂವತ್ಸರವು ಎಂದು ಸುಲಭವಾಗಿ ಗಣಿಸಿದೆವು. ಆದರೆ ಇಂದು ಪಾಡ್ಯ, ನಾಳೆಬಿದಿಗೆ ಎಂದು ದಿನಕ್ಕೊಂದು ತಿಥಿಯ ಲೆಕ್ಕ ಹಾಕುವ ನಾವು "ಒಂದು ತಿಥಿಯು ಒಂದು ದಿನದ ಸಮಾನ," ಎಂದುಕೊಳ್ಳುತ್ತೇವೆ. ಆದರೆ ನಿಜವಾಗಿ ತಿಥಿ ಎಂಬುದು ದಿನಕ್ಕಿಂತ ಸ್ವಲ್ಪ ಚಿಕ್ಕದು. ದಿನವು ೨೪ ಗಂಟೆಗಳದ್ದಾದರೆ ತಿಥಿಯು ೨೩ ಗಂಟೆ ೨೨ ನಿಮಿಷ ೨೮.೦೯೨ ಸೆಕೆಂಡುಗಳಷ್ಟು ಸರಾಸರಿ ಅವಧಿಯದು. ಆದ್ದರಿಂದ ಒಂದು ತಿಂಗಳ ಅವಧಿಯು ೩೦ x ೨೪ ಗಂಟೆ ಅಂದರೆ ೭೨೦ ಗಂಟೆಗಳಾದರೆ ಚಾಂದ್ರಮಾಸವು ೭೦೩.೭ ಗಂಟೆಗಳು. ಹೀಗಾಗಿ ೩೦ ದಿನಗಳ ಒಂದು ಮಾಸಕ್ಕಿಂತ ಒಂದು ಚಾಂದ್ರಮಾಸದ ಅವಧಿ ೧೬.೩ ಗಂಟೆಗಳಷ್ಟು ಕಮ್ಮಿ. ಆದ್ದರಿಂದ ಚಾಂದ್ರಮಾಸವೇದರೆ ೩೦ ದಿನಗಳಲ್ಲ; ೨೯.೫೩೦ (ಸರಾಸರಿ ೨೯.೫೩೦೫೮೮೭) ದಿನಗಳು. ಈ ಭಿನ್ನಾಂಕವನ್ನು ಪೂರ್ಣ ದಿನಗಳೊಂದಿಗೆ, ಸರಿ ಹೊಂದಿಸುವುದ

ಕ್ಕಾಗಿ ಒಂದು ಚಾಂದ್ರಮಾಸವು ೨೯ ದಿನಗಳಲ್ಲೂ ಮತ್ತೊಂದು ಚಾಂದ್ರಮಾಸವು ೩೦ ದಿನಗಳಲ್ಲೂ ಇರುವಂತೆ ಪಂಚಾಂಗವನ್ನು ರೂಪಿಸಲಾಗಿದೆ. (ದಿನ ಮತ್ತು ತಿಥಿಯ ಬಗ್ಗೆ ಗೊಂದಲ ಮಾಡಿಕೊಳ್ಳ ಬೇಡಿ.) ಈ ಹೊಂದಾಣಿಕೆಯ ದೊಂಬರಾಟವು ಮತ್ತೊಂದು ವಿಪರ್ಯಾಸಕ್ಕೆ ಕಾರಣವಾಗಿದೆ. ಈ ಹೊಂದಾಣಿಕೆಯಿಂದಾಗಿ, ಒಂದು ಸೂರ್ಯೋದಯದಿಂದ ಮತ್ತೊಂದು ಸೂರ್ಯೋದಯದತನಕದ ಅವಧಿಯಲ್ಲಿ, ಒಂದು ತಿಥಿಯ ಬದಲು ಎರಡು ತಿಥಿಗಳಿರುವಂತಹ 'ಉಪರಿ'ಯೂ, ಮೂರು ತಿಥಿಗಳುಳ್ಳಂಥ 'ಅವಮಾಹ'ವೂ ಅಥವಾ ಮೂರುದಿನಗಳ ಕಾಲ ಒಂದೇ ತಿಥಿ ಇರುವ 'ತ್ರಿ ದಿನಸ್ಪೃಕ್'ಗಳೂ ಉಂಟಾಗುತ್ತವೆ.

ಉದಾ: ೧೯೯೪ರ ಭಾವ ಸಂವತ್ಸರದ ಮೊದಲ ದಿನವೇ ಅಂದರೆ ಚೈತ್ರಶುಕ್ಲ ಪ್ರತಿಪದೆಯು ದಿನಾಂಕ ೧೧ ಮತ್ತು ೧೨ ಈ ಎರಡೂ ದಿನಗಳಲ್ಲಿ ವ್ಯಾಪಿಸಿತ್ತು. ಹಾಗೇ ಆ ಪಕ್ಷದ ಕೊನೆಯಲ್ಲಿ ತ್ರಯೋದಶಿ, ಚತುರ್ದಶಿ, ಅಮಾವಾಸ್ಯೆ ಈ ಮೂರೂ ತಿಥಿಗಳು ೨೪ನೇ ತಾರೀಖಿನಲ್ಲಿ ಅಡಕವಾಗಿದ್ದವು. ಅವಮಾಹ ಆಷಾಢಮಾಸದ ಕೃಷ್ಣಪಕ್ಷದ ನವಮಿಯು ಜುಲೈ ೩೦, ೩೧, ಆಗಸ್ಟ್ ೧ ಈ ಮೂರೂ ದಿನಗಳಲ್ಲಿ ವ್ಯಾಪಿಸಿತ್ತು. ಇದೇ ತ್ರಿದಿನಸ್ಪೃಕ್. ಈ ಕಾರಣದಿಂದಾಗಿ, ಒಮ್ಮೊಮ್ಮೆ ಒಂದು ಪಕ್ಷದಲ್ಲಿನ ೧೫ ತಿಥಿಗಳ ಒಟ್ಟು ಅವಧಿ ೧೩ ರಿಂದ ೧೬ ದಿನಗಳವರೆಗೂ ಇರುತ್ತದೆ. ಈ ಭಾವ ಸಂವತ್ಸರದಲ್ಲಿನ ೧೨ ಮಾಸಗಳ ಒಟ್ಟು ೨೪ ಪಕ್ಷಗಳಲ್ಲಿ ೧೪ ದಿನವುಳ್ಳ ೯, ೧೫ ದಿನದ ೧೧ ಮತ್ತು ೧೬ ದಿನದ ೪ ಪಕ್ಷಗಳಿವೆ. ಮತ್ತು ೧೨ ತಿಂಗಳಿನಲ್ಲಿ ೩೦ ದಿನದ ಏಳು, ೨೯ ದಿನದ ೫ ತಿಂಗಳುಗಳಿವೆ. ಅಂತೂ ಒಟ್ಟು ಒಂದು ಸಂವತ್ಸರದ ೩೬೦ ತಿಥಿಗಳು ೩೫೪ ದಿನಗಳಲ್ಲಿ ಹೊಂದಿಸಲ್ಪಟ್ಟವೆ. ಹೀಗೆ ಒಂದು ಚಾಂದ್ರ ಸಂವತ್ಸರದಲ್ಲಿ ೩೫೪(೩೫೪.೩೬) ದಿನಗಳಾದವು. ಚಾಂದ್ರಮಾಸದ ಇಷ್ಟು ವಿವರಗಳನ್ನು ತಿಳಿದ ನಂತರ ಅಧಿಕ ಮಾಸದ ನಿಜವಾದ ಸಮಸ್ಯೆಗೆ ಕಾಲಿರಿಸೋಣ.

ಯಾವುದೇ ಬಗೆಯ ಕಾಲಗಣನೆಯನ್ನು ಅದರ ಪಾಡಿಗೆ ನಡೆಯಲು ಸ್ವತಂತ್ರವಾಗಿ ಬಿಡಲು ಸಾಧ್ಯವಿಲ್ಲ. ಅದು ಭೂಮಿಯ ಋತುಮಾನದೊಂದಿಗೆ, ಸರಿಹೊಂದಿಸಲ್ಪಡಲೇಬೇಕು. ಋತುಮಾನವೆಂದರೆ ಭೂಮಿಯ ವಾರ್ಷಿಕ ಚಲನೆಯಿಂದಾಗಿ ಸೂರ್ಯನ ಕಿರಣಗಳು, ಭೂಮಿಯನ್ನು ತಲಪುವ ಕೋನ ಆಗಾಗ ಬದಲಾಗುತ್ತಾ ಭೂಮಿಯ ಹವಾಮಾನವನ್ನು ನಿಯಂತ್ರಿಸುವ ಪ್ರಾಕೃತಿಕ ಕ್ರಮ. ಚಾಂದ್ರಮಾನವಾಗಲೀ, ಸೌರಮಾನವಾಗಲೀ, ಯಾವುದೇ ಕಾಲಮಾನವು ಋತುಮಾನದೊಂದಿಗೆ ಸಾಮ್ಯತೆ ಇಟ್ಟುಕೊಳ್ಳುವುದು ಅನಿವಾರ್ಯ.

ಆದರೆ ಇಲ್ಲಿನ ತಾಂತ್ರಿಕ ತೊಂದರೆಯೆಂದರೆ ಋತು ಸಂವತ್ಸರದ ಅವಧಿ ೩೬೫.೨೫ (೩೬೫.೨೪೨೧೯೯) ದಿನಗಳು. ಆದರೆ ಚಾಂದ್ರ ಸಂವತ್ಸರವು ೩೫೪ ದಿನಗಳಾದ್ದರಿಂದ ಅದು ಋತು ಸಂವತ್ಸರಕ್ಕಿಂತ ೧೧.೨೫ ದಿನಗಳಷ್ಟು, ಚಿಕ್ಕದಾಗುತ್ತದೆ. ಇದನ್ನು ಲೆಕ್ಕಿಸದೇ ಚಾಂದ್ರಮಾನವು ಸ್ವತಂತ್ರವಾಗಿ ಮುಂದುವರೆದರೆ ಕ್ರಮೇಣ ಆ ವ್ಯತ್ಯಾಸ ಹೆಚ್ಚುತ್ತಾ ಋತುಮಾನದೊಂದಿಗಿನ ಲಯಬದ್ಧತೆಯನ್ನು ಕಳೆದುಕೊಳ್ಳುತ್ತದೆ. ಆದ್ದರಿಂದ ಚಾಂದ್ರಮಾಸವನ್ನಾಧರಿಸಿದ (ಚೈತ್ರ, ವೈಶಾಖ ವಸಂತಋತು ಮುಂತಾದ) ಋತುಮಾನವು ಪ್ರಾಕೃತಿಕ ಋತುಮಾನದೊಂದಿಗೆ ಏಕೀಭವಿಸಿ ಸಮತೋಲನದಲ್ಲೇ ಇರುವಂತೆ ಏನಾದರೂ ಮಾಡಲೇಬೇಕಲ್ಲ, ಆ ಯತ್ನವೇ ನಿಜವಾದ ಅಧಿಕಮಾಸಕ್ಕೆ ಮೂಲಕಾರಣ. ಅದು ಹೀಗೆ ಒಂದು ವರ್ಷಕ್ಕೆ ೧೧.೨೫ ದಿನದಂತೆ ೩ ವರ್ಷಕ್ಕೆ ಒಟ್ಟು ೩೩.೭೫ ದಿನಗಳ ವ್ಯತ್ಯಾಸ ಉಂಟಾಗುತ್ತದೆ. ಆದ್ದರಿಂದ ೩ ವರ್ಷಕ್ಕೊಮ್ಮೆ (ಪ್ರತಿ ಮೂರನೇ ವರ್ಷಕ್ಕೆ) ಒಂದು ಹೊಸ ತಿಂಗಳನ್ನು ಅಳವಡಿಸುವ ಮೂಲಕ ಇದನ್ನು ಸರಿಹೊಂದಿಸಬಹುದು, ಹೀಗೆ ಹೆಚ್ಚಾಗಿ ಸೇರಿಸಲ್ಪಟ್ಟ ತಿಂಗಳೇ ಅಧಿಕಮಾಸ. ಹೀಗೆ ೩೦ ದಿನಗಳು ಬಳಸಲ್ಪಟ್ಟರೂ ವ್ಯತ್ಯಾಸದ ೩೩.೭೫ ದಿನಗಳಲ್ಲಿ ಇನ್ನೂ ೩.೭೫ ದಿನ ಬಾಕಿ ಉಳಿಯುತ್ತವಷ್ಟೆ. ಇವನ್ನು ಹಾಗೇ ಬಿಟ್ಟುಕೊಂಡರೇ ಮುಂದಿನ ೨೪ ವರ್ಷಗಳಲ್ಲಿ ಇವು ಒಟ್ಟಾಗಿ ೩೦ ದಿನಗಳಷ್ಟಾಗಿ ಬಿಡುವುದರಿಂದ ಪುನಃ ೨೪ನೇ ವರ್ಷಕ್ಕೊಂದು ಅಧಿಕ ಮಾಸವನ್ನು ಸೇರಿಸಬೇಕಾಗುತ್ತದೆ. ಹೀಗೆ ಪ್ರತಿ ಮೂರು ವರ್ಷಕ್ಕೊಂದು ಮತ್ತು ಪ್ರತಿ ೨೪ನೇ ವರ್ಷಕ್ಕೆ ಎರಡೆರಡು, ಅಧಿಕಮಾಸಗಳನ್ನು ಸೇರಿಸಬೇಕಾಗುತ್ತದೆ. ಇದೂ

ಎಡವಟ್ಟು ಲೆಕ್ಕಾಚಾರವಲ್ಲವೇ ? ಹೇಗೂ ಅಧಿಕ ಮಾಸವನ್ನು ಸೇರಿಸಿಕೊಳ್ಳುವದು ಅನಿವಾರ್ಯವೇ ಎಂದಾದ ಮೇಲೆ ಅದಕ್ಕೊಂದು ನಿಗದಿಯಾದ ಅವಧಿಯನ್ನಾದರೂ ಖಚಿತಪಡಿಸಿಕೊಂಡರೆ, ಆ ಅವಧಿಗೊಮ್ಮೆ ಒಂದು ತಿಂಗಳನ್ನು ಅಧಿಕಮಾಸ ವಾಗಿ ಸೇರಿಸಿ ಸಮಸ್ಯೆಯನ್ನು ತೀರಿಸಬಹುದೆಂದು ಕಂಡುಕೊಂಡ ಪ್ರಾಚೀನ ಖಗೋಳಜ್ಞರು, ಲೆಕ್ಕಾ ಚಾರ ಮಾಡಿ ವರ್ಷಕ್ಕೆ ೧೧.೨೫ ದಿನದಂತೆ ಆಗುವ ವ್ಯತ್ಯಾಸವು ಒಟ್ಟು ೩೦ ದಿನದ ಪೂರ್ಣಾಂಕವನ್ನು ಮುಟ್ಟಲು ಎಷ್ಟು ಕಾಲ ಬೇಕೆಂದು ತರ್ಕಿಸಿ ಅದು ಎರಡು ಚಾಂದ್ರ ಸಂವತ್ಸರ, ೮ ಚಾಂದ್ರ ಮಾಸ, ೧೬ ದಿನ ಮತ್ತು ೪ ಘಟಿ (೪ ಘಟಿ ಅಂದರೆ ೯೬ ನಿಮಿಷ)ಗಳ ಅವಧಿಗೆ ಒಂದು ಅಧಿಕಮಾಸವನ್ನು ಸೇರಿಸುವ ಮೂಲಕ ಚಾಂದ್ರ ಮಾನ ಮತ್ತು ಋತುಮಾನಗಳನ್ನು ಸಮೀಕರಿಸಬಹುದೆಂದು ತೀರ್ಮಾನಿಸಿ ಅದರಂತೆ ಕಾಲಕಾಲಕ್ಕೆ, 'ಕಾಲ'ಕ್ಕೂ ಕಾಯಕಲ್ಪ ಚಿಕಿತ್ಸೆಯನ್ನು ನಡೆಸುತ್ತಾ ಬಂದಿದ್ದಾರೆ.

ಇತ್ತೀಚೆಗೆ ೧೯೯೩ರ ಶ್ರೀಮುಖನಾಮ ಸಂವತ್ಸರಕ್ಕೆ ೧ ಅಧಿಕಮಾಸ ಸೇರಿಸಲ್ಪಟ್ಟಿತು. ಆ ಸಂವತ್ಸರದಲ್ಲಿ ಎರಡು ಭಾದ್ರಪದಮಾಸಗಳಿದ್ದವು. ಹೀಗೆ ಪ್ರತಿ ೨ ವರ್ಷ ೮.೫೦ ತಿಂಗಳ ಅವಧಿಯಲ್ಲಿ ಒಂದೊಂದು ಅಧಿಕ ಮಾಸವನ್ನು ಸೇರಿಸಿಕೊಳ್ಳುತ್ತಾ ಕಾಲದ ಓಟಕ್ಕೆ ಕಡಿವಾಣ ಹಾಕುವ ಒಂದು ವ್ಯವಸ್ಥಿತ ಖಗೋಳಗಣಿತ ಯೋಜನೆಯೇ ಅಧಿಕ ಮಾಸದ ಆಂತರಿಕ ಗುಟ್ಟು. ಈ ಅಧಿಕಮಾಸದ ಹೊಂದಾಣಿಕೆಯಲ್ಲಿ ಇನ್ನೂ ಕೆಲವು ಕುತೂಹಲಗಳಿವೆ. ಅಧಿಕಮಾಸವು ಯಾವ ತಿಂಗಳಲ್ಲಿ ಬರುತ್ತದೋ ಅದೇ ಹೆಸರಿನ ಎರಡು ಮಾಸಗಳು ಆ ವರ್ಷ ಇದ್ದು ಒಟ್ಟು ಹದಿಮೂರು ಮಾಸಗಳಿರುತ್ತವೆ. ಆ ಸಂವತ್ಸರದಲ್ಲಿ ೩೫೪ರ ಬದಲು ೩೮೩ ದಿನಗಳಿರುತ್ತವೆ. ಒಮ್ಮೆ ಅಧಿಕಮಾಸ ಬಂದ ನಂತರ ಇನ್ನು ೨ ವರ್ಷ ೮.೫೦ ತಿಂಗಳ ಕಾಲ ಅಧಿಕಮಾಸ ಬರುವುದಿಲ್ಲ, ಒಮ್ಮೆ ಅಧಿಕವಾಗಿ ಬಂದ ಮಾಸವು ಪುನಃ ೧೯ ವರ್ಷಗಳವರೆಗೆ ಅಧಿಕವಾಗಿ ಬರುವುದಿಲ್ಲ. (ಅಂದರೆ ಈ ಬಾರಿ ಭಾದ್ರಪದ ಮಾಸವು ಅಧಿಕವಾಗಿ ಬಂದಿರುವುದರಿಂದ ಇನ್ನು ೧೯ ವರ್ಷಗಳ ಕಾಲ ಭಾದ್ರಪದದಲ್ಲಿ ಅಧಿಕವು ಬರಲಾರದು.) ಅಧಿಕಮಾಸವು ಚೈತ್ರ, ವೈಶಾಖ, ಜೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ(ಆಶ್ವೀಜ) ಮತ್ತು ಫಾಲ್ಗುಣಮಾಸಗಳಲ್ಲಿ ಮಾತ್ರ ಬರುತ್ತದೆ.

ಮಾಘವು ಅಧಿಕಮಾಸದಲ್ಲಿ ಬರುವುದಿಲ್ಲ.

ಇದಲ್ಲದೇ ಇನ್ನೂ ಒಂದು ರೀತಿಯಲ್ಲಿ ಅಧಿಕಮಾಸವು ಬರುತ್ತದೆ. ಚಾಂದ್ರಮಾನ ಮತ್ತು ಸೌರಮಾನಗಳ ಕಾಲಗಣನಪದ್ಧತಿಗಳಲ್ಲಿ ಪರಸ್ಪರ ಎಷ್ಟೊಂದು ಹೊಂದಾಣಿಕೆ ಸಾಧಿಸಲಾಗಿದೆಯಂದರೆ ಸೌರಮಾನಮಾಸಗಳಲ್ಲಿರುವ ಮಾಸಸಂಕ್ರಾಂತಿಯು ಚಾಂದ್ರಮಾನದ ಅಧಿಕಮಾಸದ ಅವಧಿಯಲ್ಲಿ ಇರುವುದಿಲ್ಲ. ಹೀಗೆ ನಡೆಯುತ್ತಾ ಸುಮಾರು ೧೪೧ ವರ್ಷಕ್ಕೊಮ್ಮೆ ಒಂದು ಚಾಂದ್ರ ಮಾಸದಲ್ಲಿ ೨ ಸೌರ ಸಂಕ್ರಾಂತಿಗಳು ಬಂದು ಬಿಡುತ್ತವೆ. ಇಂಥ ಮಾಸವನ್ನು ಕ್ಷಯ ಮಾಸವೆಂದು ಕರೆದು ಎಣಿಕೆಯಿಂದ ಕೈ ಬಿಡಲಾಗುತ್ತದೆ. ಹಾಗಾದರೆ ಆ ವರ್ಷದಲ್ಲಿ ೧೧ ಮಾಸಗಳು ಮಾತ್ರ ಇರುತ್ತವೆಯೇ ? ಇಲ್ಲ. ಒಂದು ಕ್ಷಯಮಾಸ ಬಂದಾಗ ಅದರ ಹಿಂದಿನ ಮತ್ತು ಮುಂದಿನ ತಿಂಗಳುಗಳೂ ಅಧಿಕವಾಗಿ ಬರುತ್ತವೆ. ಆದ್ದರಿಂದ ಕ್ಷಯಮಾಸವುಳ್ಳ ಸಂವತ್ಸರದಲ್ಲೂ ೧೨ ಮಾಸಗಳೇ ಇರುತ್ತವೆ. ಸಾಧಾರಣವಾಗಿ ಕಾರ್ತೀಕ, ಮಾರ್ಗಶಿರ, ಮತ್ತು ಪುಷ್ಯಗಳು ಕ್ಷಯಮಾಸಗಳಾಗುತ್ತವೆ. ಕ್ವಚಿತ್ತಾಗಿ ಮಾಘ, ಫಾಲ್ಗುಣಗಳೂ ಕ್ಷಯವಾಗಬ

## ವ್ಯತ್ಯಾಸ

ನನ್ನವಳ
ತವರಿನವರು
ಮನೆಗೆ ಬಂದರೆ
ಅಡಿಗೆ
ರುಚಿಕಟ್ಟಾಗಿರುತ್ತದೆ.
ನನ್ನವರು
ಬಂದಾಗ ರುಚಿ
ಕಟ್ಟಾಗಿರುತ್ತದೆ.

● 'ವೀರಪ್ಪನ್'

ಹುದು. ೧೯೮೩ರ ದುಂದುಭಿನಾಮ ಸಂವತ್ಸರದಲ್ಲಿ ಪುಷ್ಯಮಾಸವು ಕ್ಷಯವಾಗಿತ್ತು. ಇದೂ ಅಧಿಕಮಾಸದ ಮತ್ತೊಂದು ಮುಖ.

ಸುಮಾರು ೫೦೦೦ ವರ್ಷಗಳಿಂದಲೂ ಜಗತ್ತಿನಾದ್ಯಂತದ ಖಗೋಲಜ್ಞರು ಚಾಂದ್ರಮಾನವನ್ನು ಋತುಮಾನದೊಂದಿಗೆ ಸಮೀಕರಿಸಲು ತಿಪ್ಪರಲಾಗಗಳನ್ನು ಹಾಕುತ್ತಲೇ ಬಂದಿದ್ದಾರೆ. ಬ್ಯಾಬಿಲೋನಿಯ, ಈಜಿಪ್ತ್ ಮುಂತಾದ ಕಡೆಗಳಲ್ಲೂ ವಿವಿಧ ಕಾಲಗಣನ ಕ್ರಮಗಳನ್ನು ಋತುಮಾನದೊಂದಿಗೆ ತಾಳೆ ಹಾಕುವ ಕ್ರಮಗಳು ಆವಿಷ್ಕಾರಗೊಳ್ಳುತ್ತಲೇ ಬಂದಿವೆ. ಬ್ಯಾಬಿಲೋನಿಯದಲ್ಲಿ ೬ ವರ್ಷಕ್ಕೆ ಒಂದು ಮತ್ತು ೧೨೦ ವರ್ಷಕ್ಕೆ ಒಂದು ಅಧಿಕ ಮಾಸಗಳಿದ್ದು ನಂತರದ ಪರಿಷ್ಕರಣೆಯಲ್ಲಿ ಎರಡೂವರೆ ಸಾವಿರ ವರ್ಷಗಳ ಹಿಂದೆ ೮ ವರ್ಷದ ಅವಧಿಯಲ್ಲಿ ೩ ಅಧಿಕ ಮಾಸಗಳು ರೂಢಿಯಲ್ಲಿದ್ದವು. ಅದೂ ತೃಪ್ತಿದಾಯಕವಾಗದೆ ೧೯ ವರ್ಷಗಳಲ್ಲಿ ಏಳು ಅಧಿಕಮಾಸಗಳಿರುವ ರೂಢಿ ಬಂತು. ಭಾರತದಲ್ಲಿ ಕೂಡ ವೇದಕಾಲದಿಂದಲೂ ಇಂತಹ ಪ್ರಯತ್ನ ಮತ್ತು ಪರಿಷ್ಕರಣೆಗಳು ನಡೆದು ಸದ್ಯ ಈ ಮಟ್ಟಕ್ಕೆ ಮುಟ್ಟಿದೆ.

ಚಾಂದ್ರಮಾನ, ಸೌರಮಾನ, ಬಾರ್ಹಸ್ಪತ್ಯಮಾನ, ಕ್ರೈಸ್ತಮಾನ, ಯಾವುದೇ ಆಗಲಿ ಋತು ಸಂವತ್ಸರದೊಂದಿಗೆ ತಾಳೆಯಾಗುವುದು ಅನಿವಾರ್ಯ. ಆದಕ್ಕಾಗಿ ಖಗೋಲಗಣಿತದ ಈ ನಿರಂತರ ಸರ್ಕಸ್ಸುಗಳೂ ಅಷ್ಟೇ ಅನಿವಾರ್ಯ.

ಕ್ರೈಸ್ತಶಕೆಯಲ್ಲಿ ಪ್ರತಿ ನಾಲ್ಕನೇ ವರ್ಷದ ಫೆಬ್ರುವರಿಯಲ್ಲಿ ೨೯ ದಿನಗಳಿರುತ್ತವೆಂಬ "ಲೀಪ್ ಇಯರ್"ನ ಸಂಗತಿ ನಿಮಗೆ ಗೊತ್ತಲ್ಲ, ಅದಕ್ಕೂ ಇಂಥ ಒಂದು ದೊಡ್ಡ ಐತಿಹಾಸಿಕ ಹಿನ್ನಲೆಯೇ ಇದೆ. ●

(ವಿವಿಧ ಮೂಲಗಳಿಂದ)

# ಹೀಗಿತ್ತು ಒಂದು ಹಿರಿಯ ಚೇತನ!



• ಎಸ್ಕೆ ಹಳೆಯಂಗಡಿ

**ಕ**ನ್ನಡ ನವೋದಯ ಸಾಹಿತ್ಯದ ಮಹಾಪುರುಷರಲ್ಲಿ ಒಬ್ಬರಾದ ದಿ. ಟಿ.ಎಸ್. ವೆಂಕಣ್ಣಯ್ಯ ಅವರ ಗತಜೀವನದ ಒಂದು ಹೃದಯಸ್ಪರ್ಶಿ ಘಟನೆಯನ್ನು 'ಮೂರು ತಲೆಮಾರು' ಗ್ರಂಥದಲ್ಲಿ ಓದಿದಾಗ ದಿಗ್ಭ್ರಮೆಗೊಂಡೆ. ನನಗೆ ತಿಳಿಯದಂತೆ ನನ್ನ ಕಣ್ಣಿಂದ ಕಂಬನಿ ಮಿಡಿಯಿತು. ವೆಂಕಣ್ಣಯ್ಯನವರ ಕಿರಿಯ ಸಹೋದರರಲ್ಲಿ ಒಬ್ಬರಾದ ಪ್ರೊ. ತ.ಸು. ಶಾಮರಾಯರು ತಾವು ಕಣ್ಣಾರೆ ಕಂಡು ಅನುಭವಿಸಿದ ಆ ಘಟನೆಯನ್ನು ಈ ರೀತಿ ವರ್ಣಿಸಿದ್ದಾರೆ:

೧೯೩೦ನೇ ಇಸವಿಯ ಕನ್ನಡ ಸಾಹಿತ್ಯ ಸಮ್ಮೇಳನ ಮೈಸೂರಿನಲ್ಲಿ ಅತ್ಯಂತ ವಿಜೃಂಭಣೆಯಿಂದ ನೆರವೇರಿಸುವ ಪೂರ್ವ ತಯಾರಿ ವೆಂಕಣ್ಣಯ್ಯನವರ ಮನೆಯಲ್ಲಿ ನಡೆಯುತ್ತಿತ್ತು. ಸದ್ರಿ ಸಮ್ಮೇಳನದ ಅಂಗವಾಗಿ ಗಮಕ ಕಲೆಯ ಪ್ರದರ್ಶನ ನಡೆಸಬೇಕೆಂದು ಆಶಿಸಿ ಆ ಕಲೆಯ ದಿಗ್ಗಜರೆನಿಸಿರುವ, ಬಿಂದೂರಾವು, ಮಾಯಿಗೌಡ, ಕೃಷ್ಣರಾವು, ಸಂಪತ್‌ಕುಮಾರಾಚಾರ್ ಮೊದಲಾದವರನ್ನು ಒಂದು ದಿನ ಬೆಳಿಗ್ಗೆ ತಮ್ಮ ಮನೆಗೆ ಆಹ್ವಾನಿಸಿದರು. ಮಹಡಿ ಮೇಲಿನ ಕೊಠಡಿ ಕಲಾವಿದರಿಂದ ಅಂದು ತುಂಬಿತುಳುಕುತ್ತಿತ್ತು. ನಂಜನಗೂಡಿನ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾಗಿದ್ದ ಶ್ರೀ ರಾಜೀವ ಲೋಚನಂ ಎಂಬ ವೆಂಕಣ್ಣಯ್ಯನವರ ಪರಮ ಆತ್ಮೀಯ ಮಿತ್ರರು ಕೂಡ ಉಪಸ್ಥಿತರಿದ್ದರು. 'ಗದುಗಿನ ಭಾರತ'ದ ರಸವತ್ತಾದ ಭಾಗಗಳಲ್ಲಿ ಒಂದೊಂದನ್ನು ಒಬ್ಬೊಬ್ಬ ಪರಿಚಿತರು ಓದುವ ಕಾರ್ಯಕ್ರಮ ಭರದಿಂದ ಸಾಗಿತ್ತು. ಅಂದಿನ ಕಾರ್ಯಕ್ರಮಕ್ಕೆ ಆಹ್ವಾನಿತರಾದವರಿಗೆಲ್ಲ ಅಲ್ಲಿಯೇ ಭೋಜನಕ್ಕೂ ಆಹ್ವಾನವಿದ್ದುದರಿಂದ 'ಪಾಕಗೃಹ'ದಲ್ಲಿ ಅಡಿಗೆಯ ಕೆಲಸ ಕೂಡ ಭರದಿಂದ ನಡೆದಿತ್ತು. ಅದಕ್ಕಾಗಿ ನುರಿತ ಒಳ್ಳೆಯ ಅಡಿಗೆಯವರೊಬ್ಬರನ್ನು ನೇಮಿಸಲಾಗಿತ್ತು.

ಮನೆಯ ಮಹಡಿಯ ಕೊಠಡಿಯಲ್ಲಿ ನಡೆಯುತ್ತಿದ್ದ ಸಂತೋಷ-ಸಂಭ್ರಮ-ಸಡಗರಗಳ ನಡುವೆ ಒಮ್ಮೆಲೇ ಹೃದಯವನ್ನು ಭೇದಿಸುವ

ಮೂರು ತಲೆಮಾರು
ಲೇಖಕ: ತ.ಸು. ಶಾಮರಾಯ
ಪ್ರಕಾಶಕರು: ಸುವಿದ್ಯಾ ಪ್ರಕಾಶನ,
೭, ಸರ್ವೇಯರ್ ರಸ್ತೆ,
ಬಸವನಗುಡಿ,
ಬೆಂಗಳೂರು-೫೬೦ ೦೦೪.

'ಅಯ್ಯೋ-ಅಯ್ಯೋ' ಎಂಬ ಮಹಿಳೆಯ ಕ್ಷೀಣ ಚೀತ್ಕಾರವೊಂದು ಕೆಳಗಿನಿಂದ ವೆಂಕಣ್ಣಯ್ಯನವರಿಗೆ ಕೇಳಿಸಿದಂತಾಯಿತು. ಅವರು ರಾಜೀವಲೋಚನಂ ಅವರನ್ನು ತನ್ನ ಪ್ರತಿನಿಧಿಯನ್ನಾಗಿ ಕೂರಿಸಿ ಕೆಳಗಿಳಿದು ಹೋದರು. ಎರಡು ನಿಮಿಷಗಳ ನಂತರ ಮಹಡಿಯ ಮೇಲಿನ ಮತ್ತೊಂದು ಕೊಠಡಿಯಲ್ಲಿ ಕುಳಿತಿದ್ದ ನನ್ನನ್ನೂ ಅವರ ಅಳಿಯನಾದ ವೆಂಕಟೇಶನನ್ನೂ ಕೆಳಗಿಳಿದು ಬರುವಂತೆ ಕೂಗಿ ಕರೆದರು. ಹೋಗಿ ನೋಡಿದಾಗ ಅದೊಂದು ಕರುಣಾಜನಕವಾದ ಹೃದಯವಿದ್ರಾವಕ ದೃಶ್ಯವಾಗಿತ್ತು. ವೆಂಕಣ್ಣಯ್ಯನವರ ಎರಡನೆ ಹೆಂಡತಿಯ ಚೊಚ್ಚಲ ಮುದ್ದಾದ ಗಂಡು ಮಗು ಕೊನೆಯುಸಿರೆಳೆದಿತ್ತು. ಅವರ ಮಡದಿ ಮಗುವಿನ ಶವವನ್ನು ತನ್ನ ತೊಡೆಯ ಮೇಲೆ ಹಾಕಿಕೊಂಡು ರೋಧಿಸುತ್ತಿದ್ದರು. ವೆಂಕಣ್ಣಯ್ಯನವರ ಕಣ್ಣಿನಲ್ಲೂ ನೀರು ತುಂಬಿತ್ತು. ಅವರು ತಕ್ಷಣವೇ ಅದನ್ನು ಒರೆಸಿಕೊಂಡು ಹೆಂಡತಿಗೆ ಸಮಾಧಾನ ಹೇಳಿ, ನನ್ನ ಕಡೆ ತಿರುಗಿ ಮೆಲುದನಿಯಿಂದ ಆ ಶವವನ್ನು ಮೌನದಿಂದ ಮೇಲೆ ಕುಳಿತಿದ್ದ ಅತಿಥಿಗಳಿಗೆ ತಿಳಿಯದಂತೆ, ಕೊಂಡೊಯ್ದು ರುದ್ರಭೂಮಿಯಲ್ಲಿ ಒಪ್ಪ ಮಾಡಿ ಬರುವಂತೆ ಆದೇಶ ನೀಡಿದರು. ಹಾಗೆ ತಿಳಿಸುವಾಗ ಅವರ ಮುಖದಲ್ಲಿ ವಿಷಾದದ ಛಾಯೆಯಲ್ಲ ಮಾಯವಾಗಿದ್ದು ಮುಖ ಪ್ರಶಾಂತವಾಗಿತ್ತು.

ನಾವು ಸ್ಮಶಾನದಿಂದ ಹಿಂತಿರುಗಿ ಬರುವಾಗ ಮನೆಯಲ್ಲಿ ಊಟದ ಸಂಭ್ರಮ ಭರದಿಂದ ನಡೆಯುತ್ತಿತ್ತು. ಎಲ್ಲರೊಂದಿಗೆ ವೆಂಕಣ್ಣಯ್ಯ ಕೂಡ ಊಟಕ್ಕೆ ಕುಳಿತು ಉಪಚಾರೋಕ್ತಿಗಳಿಂದ ಎಲ್ಲರನ್ನೂ ಸಂತೋಷಗೊಳಿಸುತ್ತಿದ್ದರು.... ದೂರ್ವಾಸಾತಿಥ್ಯ, ಧರ್ಮರಾಯನ ರಾಜಸೂಯಯಾಗದ ಮೃಷ್ಟಾನ್ನ ಭೋಜನಗಳ ಕುರಿತು ರಂಗುರಂಗಾಗಿ ಟೀಕೆ-ಟಿಪ್ಪಣಿಗಳನ್ನು ನಡೆಸುತ್ತ ಅತಿಥಿಗಳು ಕಂಠಪೂರ್ತಿ ಭೋಜನ ಮುಗಿಸಿ, ತಾಂಬೂಲ ಚರ್ವಣ ಮಾಡಿ, ಮತ್ತೊಮ್ಮೆ ಲೋಕಾಭಿರಾಮವಾಗಿ ಹರಟೆಹೊಡೆದು, ನಾಲ್ಕು ಗಂಟೆಯ ವೇಳೆಗೆ ಕಾಫಿ ಪರಿಸೇವನೆಯ ನಂತರ ಎಲ್ಲರೂ ಹೊರಟು ಹೋದರು, ಆಪ್ತ ಮಿತ್ರರಾದ ರಾಜೀವಲೋಚನಂ ಒಬ್ಬರ ಹೊರತು.

ಮನೆಯಲ್ಲಿ ನಡೆದ ಇಂತಹ ಸಂತೋಷ



ಸಮಾರಂಭದಲ್ಲಿ ಮನೆ ಗೃಹಿಣಿಯ ಸುಳಿವೇ ಇಲ್ಲದಿದ್ದುದನ್ನು ಗ್ರಹಿಸಿ ರಾಜೀವಲೋಚನಂ ಅವರಿಗೆ ಪ್ರಾಯಶಃ ಕೌತುಕ-ಕುತೂಹಲ ಉಂಟಾಗಿರಬೇಕು. ಅಲ್ಲದೆ ಅತಿಥಿ ಸೇವೆಯಲ್ಲಿ ಆ ಗೃಹಿಣಿ ಎತ್ತಿದ ಕೈ ಎಂಬುದು ಅವರಿಗೆ ತಿಳಿದಿತ್ತು. ಇಂದು ಆಕೆಯ ಸುಳಿವೇ ಇಲ್ಲವಲ್ಲ! ಆತ ಸಹಜವಾಗಿ ಪ್ರಶ್ನಿಸಿದರು- "ನಿಮ್ಮ ಶ್ರೀಮತಿ ಊರಲ್ಲಿಲ್ಲವೆ ?" ವೆಂಕಣ್ಣಯ್ಯ ಆ ಪ್ರಶ್ನೆಗೆ ನೇರ ಉತ್ತರ ಕೊಡದೆ ಪಂಪನ ಆದಿ ಪುರಾಣದಲ್ಲಿ ಬರುವ ನೀಲಾಂಜ

ನೆಯ ನೃತ್ಯದ ಕಥೆಯನ್ನು ಹೇಳಿದರು, "ವೃಷಭ ನಾಥನ ಸಭೆಯಲ್ಲಿ ನೀಲಾಂಜನೆ ನೃತ್ಯ ಮಾಡುತ್ತ ಮಾಡುತ್ತ ಆಯುಷ್ಯ ತೀರಿ ಹಾಗೆಯೇ ಕರಗಿ ಹೋದಳು. ಆಗ ದೇವೇಂದ್ರ ಏನು ಮಾಡಿದ ಗೊತ್ತ ? ಅಂತಹವಳೇ ಸುಂದರಿಯೊಬ್ಬಳನ್ನು ಪ್ರತಿ ಸೃಷ್ಟಿಸಿ ನರ್ತನ ಯಥಾವತ್. ಮುಂದುವರಿಯು ವಂತೆ ಮಾಡಿದ. ಯಾಕೆ ಗೊತ್ತೆ ? ರಸಾಭಾವಸವಾ ಗದಿರಲೆಂದು. ಅದು ಅಲ್ಲಿಯ ಸಭೆಯಲ್ಲಿ ನೆರೆದ ಯಾರೊಬ್ಬರ ಗಮನಕ್ಕೂ ಬರಲಿಲ್ಲ. ಆದರೆ ವೃಷ ಭನಾಥನಿಗೆ ಅದು ತಿಳಿಯಿತು. ನಾನು ಇಂದು ದೇವೇಂದ್ರನ ಪಾತ್ರ ವಹಿಸಬೇಕಾಯಿತು. ನನ್ನ ಮನೆಯಲ್ಲಿ ನಡೆದ ಅಚಾತುರ್ಯ ಯಾರಿಗೂ ತಿಳಿಯಲಿಲ್ಲ, ಆದರೆ ನಿನ್ನ ಕಣ್ಣಿಗೆ ಆಭಾಸ ಗೊತ್ತಾಗಿದೆ. ನೀನು ವೃಷಭನಂತೆ ಪುಣ್ಯಜೀವಿ," ಎಂದು ಹೇಳಿ ಅಂದು ನಡೆದ ನಿಜ ಸಂಗತಿ ತಿಳಿಸಿದರು. ಅದನ್ನು ಕೇಳಿ ರಾಜೀವಲೋಚನಂ ತಮ್ಮ ಕೋಪ ವನ್ನು ಹತ್ತಿಕ್ಕಲಾರದೆ ಪ್ರಲಾಪಿಸುತ್ತ, "ವೆಂಕಣ್ಣಯ್ಯ ನೀನು ಮನುಷ್ಯನಲ್ಲ" ಎಂದು ಗುಡುಗಿದರು. ಆಗ ವೆಂಕಣ್ಣಯ್ಯ, "ಅಯ್ಯ, ಈ ಸಂದರ್ಭದಲ್ಲಿ ನಾನು ಇನ್ನೇನು ಮಾಡಬೇಕಾಗಿತ್ತು ? ಮಗು ಇರುವವ ರೆಗೆ ನನ್ನ ಕರ್ತವ್ಯವನ್ನು ಮಾಡಿದೆ. ಡಾಕ್ಟರ್ ನಿತ್ಯ ಬಂದು ಮಗುವನ್ನು ನೋಡಿಕೊಂಡು ಹೋಗುತ್ತಿದ್ದರು. ಈ ದಿನ ಬೆಳಗ್ಗೆ ಕೂಡ ಡಾಕ್ಟರ್ ಮಗು ವನ್ನು ಪರೀಕ್ಷಿಸಿ ಯಾವ ಹೆದರಿಕೆಯೂ ಇಲ್ಲ ಗುಣಮುಖವಾಗಿದೆ ಎಂದಿದ್ದರು. ಇದ್ದಕ್ಕಿದ್ದಂತೆ ಆ ಮಗು ಅಸುನೀಗಿದರೆ ಮುಂದೇನು ಮಾಡ ಬೇಕು ? ನಾನು, ನೀನು ಇಬ್ಬರೂ ಒಂದೇ ಗುರು ವಿನ ಶಿಷ್ಯರು. ಗುರುಗಳ ಉಪದೇಶ ಕೇಳಿದ್ದೇವೆ. ಭಗವದ್ಗೀತೆ ಓದಿದ್ದೇವೆ. ಶಾಸ್ತ್ರ ಓದುವುದಕ್ಕ-ಬದನೆಕಾಯಿ ತಿನ್ನುವುದಕ್ಕ ಎಂದಾಗಬೇಕೆ ? ನಮ್ಮ ವೇದಾಂತ ಕರ್ಣನ ಅಸ್ತ್ರವಾದರೆ ಹೇಗೆ ?" ಎಂದರು. ರಾಜೀವಲೋಚನಂ ಒತ್ತಿ ಬರುತ್ತಿರುವ ಕಂಬನಿಯನ್ನು ತಡೆದುಕೊಳ್ಳುತ್ತ ಮತ್ತೊಮ್ಮೆ "ವೆಂಕಣ್ಣಯ್ಯ ನಿಜವಾಗಿಯೂ ನೀನು ಮನುಷ್ಯ ನಲ್ಲ," ಎಂದರು.

ವೆಂಕಣ್ಣಯ್ಯ ಎಂತಹ 'ಅನಾಸಕ್ತ' ಹಿರಿಯ ಚೇತನವಾಗಿದ್ದರು !

●

## ನಾರೀ ಪುರುಷರು

ನಾರಿಯರು ಪುರುಷರಂತೆ ವೇಷಧರಿಸಿ, ಉದ್ಯೋಗ ಮಾಡಿದ ದೃಷ್ಟಾಂತಗಳು ನಿಮಗೆ ಗೊತ್ತೆ ?

ಡಾ. ಬಾರೀ ಎಂಬಾತ ಸರ್ಜನ್ನನಾಗಿ ನಲವತ್ತು ವರ್ಷ ವಿಕ್ಟೋರಿಯಾ ರಾಣಿಯ ವೈದ್ಯ ತಂಡದಲ್ಲಿ ಕೆಲಸ ಮಾಡಿ ಆಸ್ಪತ್ರೆಗಳ ಇನ್ಸ್‌ಪೆಕ್ಟರ್ ಜನರಲ್ ಆಗಿ ೧೮೬೫ರಲ್ಲಿ ಮೃತನಾದ. ಆತ ಪುರುಷ ರೂಪದಲ್ಲಿದ್ದ ಸ್ತ್ರೀ ಎಂದು ಆಗ ಗೊತ್ತಾಯಿತಂತೆ ! ಬಾರ್ಕರ್ ಎಂಬವನು ೧೯೨೩ರಲ್ಲಿ ಮದುವೆ ಮಾಡಿಕೊಂಡು ಮೂರು ವರ್ಷದ ನಂತರ ಹೆಂಡತಿಯಿಂದ ವಿಚ್ಛೇದನ ಪಡೆದು ನೇಷನಲ್ ಫ್ಯಾಸಿಸ್ಟ್ ಎಂಬ ಒಂದು ಸೈನ್ಯ ಕೂಟ ಸೇರಿ ಮಲ್ಲಯುದ್ಧ ವೀರನೆಂದು, ಬೇಟೆಗಾರನೆಂದು, ಉಲ್ಲಾಸ ಪುರುಷನೆಂದು ಹೆಸರು ಪಡೆದ. ೧೯೨೯ರಲ್ಲಿ ದಿವಾಳಿ ಪ್ರಕರಣದಲ್ಲಿ ಬಂಧಿತನಾದ ಆವನನ್ನು ಬ್ರಿಕ್ಸ್‌ಟನ್ ನ್ಯಾಯಾಲಯದ ವೈದ್ಯರು ಒತ್ತಾಯದಿಂದ ಪರೀಕ್ಷಿಸಿದಾಗ ಆತ ಹೆಂಗಸೆಂಬುದು ತಿಳಿಯಿತು.

ಲೋರೆಟ್ಟಾ ವೇಲನ್‌ಕ್ವೆಜ್ ಎಂಬವಳು ಪುರುಷ ವೇಷಧಾರಿಯಾಗಿ ಸೈನ್ಯದಲ್ಲಿ ಸೇರಿದಳು. ಅವಳು ತನ್ನ ತಲೆ ಕೂದಲನ್ನು ಚಿಕ್ಕದಾಗಿ ಕತ್ತರಿಸಿಕೊಂಡು ಕೃತ್ರಿಮ ಮೀಸೆಗಳನ್ನು ಹಚ್ಚಿಸಿಕೊಂಡು ಅಮೆರಿಕಾ ಸಿವಿಲ್ ಯುದ್ಧದಲ್ಲಿ ಹಾರೀ ಟಿ. ಬುಫೋರ್ಡ್ ಎಂಬ ಹೆಸರನ್ನು ಇಟ್ಟುಕೊಂಡಿದ್ದಳು. ಲೆಫ್ಟಿನೆಂಟ್ ಆಗಿ ಬಡ್ತಿಯನ್ನು ಹೊಂದಿದ್ದಳು. ಅವಳಿಗೆ ಯುದ್ಧದಲ್ಲಿ ಗಾಯವಾಗಿ ಆಸ್ಪತ್ರೆಗೆ ಚಿಕಿತ್ಸೆಗೆ ತೆಗೆದುಕೊಂಡು ಹೋದಾಗ ಅವನು 'ಅವನಲ್ಲ' 'ಅವಳು' ಎಂದು ಗೊತ್ತಾಯಿತು.

ಇವರ ಚರಿತ್ರೆಗಳನ್ನು ಓದಿದ ನಂತರ ನಮ್ಮ ಭಾರತ ಪುರಾಣದಲ್ಲಿ ಅರ್ಜುನ ಬೃಹನ್ನಳೆಯಾಗಿ ಒಂದು ವರ್ಷ ಯಾರಿಗೂ ತಿಳಿಯದೇ ಕಾಲ ಕಳೆದನೆಂದು ಓದಿದರೆ ಅದನ್ನು ಸಂದೇಹಿಸುವುದೇಕೆ ?

● **ಕೋಲಾರ ಕೃಷ್ಣ ಅಯ್ಯರ್**

## 'ಉತ್ತರ ಕನ್ನಡದ ಮೂಗುತಿ'



# ಮಿರ್ಜಾನ ಕೋಟೆ

ಉತ್ತರಕನ್ನಡ ಜಿಲ್ಲೆಯಲ್ಲಿ ಹಲವು ಪ್ರಸಿದ್ಧ ಐತಿಹಾಸಿಕ ತಾಣಗಳು ಕಾಲನ ತುಳಿತಕ್ಕೆ ಸಿಕ್ಕು ಹೇಳಹೆಸರಿಲ್ಲದಂತಾಗಿವೆ. ಇನ್ನೂ ಕೆಲವು ಆ ದಾರಿಯಲ್ಲಿವೆ. ಇದಕ್ಕೊಂದು ಉದಾಹರಣೆ ಎಂದರೆ ಮಿರ್ಜಾನ ಮತ್ತು ಕೋಡಕಣಿ ಗ್ರಾಮಗಳ ನಡುವಿನ ದಿನ್ನೆಯೊಂದರ ಮೇಲೆ ಅನಾಥವಾಗಿರುವ ಕೋಟೆ. ಪುರಾತತ್ವ ಇಲಾಖೆಯ ದಿವ್ಯ ನಿರ್ಲಕ್ಷ್ಯದಿಂದಾಗಿ ಈ ಕೋಟೆ ಇವತ್ತು ಹಾವುಗಳಿಗೆ ಹುತ್ತವಾಗಿದೆ. ತೋಳ-ನರಿಗಳಿಗೆ ನೆಲೆಯಾಗಿದೆ. ಹೆಗಲೆತ್ತರ ಬೆಳೆದ ಹುಲ್ಲು ಕೋಟೆಯ ಹಾಳು ಬಾಳಿನ ನಗ್ನತೆಯನ್ನು ತುಸುಮಟ್ಟಿಗೆ ಮುಚ್ಚಿದೆ. ತನ್ನ ದುರವಸ್ಥೆಯನ್ನು ಮನುಷ್ಯರು ನೋಡದಿರಲೆಂದು ಕೋಟೆ ಈ ಮಾರ್ಗವನ್ನು ಅನುಸರಿಸಿದೆಯೋ ಏನೋ.

ಕುಮಟಾದಿಂದ ಸುಮಾರು ಆರು ಕಿಲೋಮೀಟರ್ ದೂರವಿರುವ ಮಿರ್ಜಾನ ಕೋಟೆಯ ಮೇಲೆ ಕಾರವಾರದ ಇತಿಹಾಸ ಸಂಶೋಧಕ ದಿ. ಎಸ್. ಸಿಲ್ವಾ ಮತ್ತು ಜಿಲ್ಲೆಯ ಸಾಹಿತಿ ಗೌರೀಶ ಕಾಯ್ಕಿಣಿ ಸಾಕಷ್ಟು ಬೆಳಕು ಚೆಲ್ಲಿದ್ದಾರೆ. ಆದರೂ ಈ 'ಉತ್ತರ ಕನ್ನಡದ ಮೂಗುತಿ'ಯ ಕುರಿತಾಗಿ ಪೂರ್ಣ ಪ್ರಮಾಣದ ಇತಿಹಾಸ ಇನ್ನೂ ರೂಪಿತ

● ಆರ್.ಜಿ. ಶ್ಯಾನಭಾಗ

ವಾಗಿಲ್ಲ ಎಂಬುದೇ ವ್ಯಸನಕಾರಿ.

## ಐತಿಹಾಸಿಕ ಮಹತ್ವ

ಕ್ರಿಸ್ತಶಕ ಮೂರನೇ ಶತಮಾನದಲ್ಲಿ ಮಿರ್ಜಾನ ಅಂತಾರಾಷ್ಟ್ರೀಯ ಬಂದರು ಕೇಂದ್ರವಾಗಿತ್ತು. ಗ್ರೀಸ್ ದೇಶದ ಹಡಗುಗಳು ಇಲ್ಲಿ ಲಂಗರು ಹಾಕುತ್ತಿದ್ದವೆಂಬುದನ್ನು ಹುಲೇಕಲ್ ಬಳಿ ದೊರೆತಿರುವ ರೋಮನ್ ನಾಣ್ಯಗಳನ್ನಾಧರಿಸಿ ದಿ. ಸಿಲ್ವಾ ಪ್ರತಿಪಾದಿಸಿದ್ದಾರೆ. ಕ್ರಿಸ್ತಶಕ ೭೭ರಿಂದ ೨೪೭ರ ನಡುವೆ ಪ್ಲೇನಿ, ಪುಂಚೆದರ, ಟಾಲೆಮಿ, ಈರಿಯನ್ ಮೊದಲಾದ ವಿದೇಶೀ ಪ್ರವಾಸಿಗರು ಇಲ್ಲಿಗೆ ಬಂದಿದ್ದರು. ಮಿರ್ಜಾನವನ್ನು ಅವರು ಮುರ್ಝುರಿಸ್ ಎಂದು ಹೆಸರಿಸಿದ್ದರು. ಬ್ರಿಟಿಶರು ಮಿರಜಿ ಎನ್ನುತ್ತಿದ್ದರು. ಉತ್ತರಕನ್ನಡ ಪ್ರವೇಶಿಸಲು ಮಿರ್ಜಾನವೇ ಮಹಾದ್ವಾರವಾಗಿತ್ತಂತೆ.

ಛತ್ರಪತಿ ಶಿವಾಜಿ ತನ್ನ ಹಡಗುಪಡೆಯನ್ನು ಮಿರ್ಜಾನದಲ್ಲಿ ನಿಲ್ಲಿಸಿ ಗೋಕರ್ಣಕ್ಕೆ ಹೋಗಿ ಮಹಾಬಲೇಶ್ವರದ ದರ್ಶನ ಪಡೆದುಕೊಂಡನೆಂಬುದಾಗಿ ಜದುನಾಥರು ಬರೆದಿರುವ ಶಿವಾಜಿ ಚರಿತ್ರೆಯಿಂದ ತಿಳಿದು ಬರುತ್ತದೆ.

೧೭೮೪ರಲ್ಲಿ ಟಿಪ್ಪುಸುಲ್ತಾನನ ವಿರುದ್ಧ ಸಮರ ಕಾರ್ಯಾಚರಣೆಗೆ ಹೊರಟ ಜನರಲ್ ಮ್ಯಾಥ್ಯೂಸ್ ನೇತೃತ್ವದ ಬ್ರಿಟಿಶ್ ಸೈನ್ಯ ಮಿರ್ಜಾನದಲ್ಲಿ ಬೀಡುಬಿಟ್ಟಿತ್ತು. ರಕ್ಷಣಾ ವ್ಯೂಹದ ತಂತ್ರ ಭೌಗೋಳಿಕವಾಗಿ ಇಲ್ಲಿ ಒಡಮೂಡಿದ್ದೇ ಕಾರಣ. ಗತಕಾಲದಲ್ಲಿ ರಕ್ಷಣ ಹಾಗೂ ವಾಣಿಜ್ಯ ವಹಿವಾಟಿನ ದೃಷ್ಟಿಯಲ್ಲೂ ಮಿರ್ಜಾನ ಸುರಕ್ಷಿತ ಸ್ಥಾನದಲ್ಲಿತ್ತು. ಆಗಿನ ಆಳರಸರು ಇಲ್ಲಿ ಕೋಟೆಯನ್ನು ನಿರ್ಮಿಸಿದ್ದು ಈ ಕಾರಣದಿಂದಲೇ.

## ನಿಗೂಢ ಸುರಂಗ

ಕೋಟೆಯು ಹತ್ತು ಎಕರೆ ಎಂಟು ಗುಂಟೆ ಪ್ರದೇಶವನ್ನು ಆಕ್ರಮಿಸಿಕೊಂಡಿದೆ. ಕೋಟೆಯ ಒಳಹೊಕ್ಕು ನೋಡಿದರೆ ಆಗಸೆಯ ಕಮಾನು ಕುಸಿಯುವ ಸ್ಥಿತಿಯಲ್ಲಿದೆ. ಕೋಟೆಯ ಮೂಲ ವಾಸ್ತುಶಿಲ್ಪ ರಚನೆ ಊಹಿಸಲಾಗದಷ್ಟು ಕೆಟ್ಟ ರೀತಿಯಲ್ಲಿ ಅಂದಗೆಟ್ಟಿದೆ. ಒಂದೆರಡು ಕೊತ್ತಳಗಳು ಅಳಿದ ವೈಭವದ ಕುರುಹುಗಳಾಗಿ ಉಳಿದಿವೆಯಾದರೂ ಕೆಲವು ಮರಗಳು ಗೋಡೆಗಳನ್ನೇ ಸೀಳಿ ಬೆಳೆದಿವೆ. ಮತ್ತು ಕೆಲವು ಬೇರುಗಳನ್ನು ತೂರಿಸಿ ಕಟ್ಟಡವನ್ನು ಶಿಥಿಲಗೊಳಿಸಿವೆ. ಅರಮನೆ ಸುಡುಗಾಡಾದಂತಾಗಿದೆ.

ಸುರಂಗ ಮಾರ್ಗವೊಂದು ನೆಲಮನೆಗೆ ಕರೆದೊಯ್ಯುತ್ತದೆ. ಆದರೆ ಪಾವಟಿಗೆಗಳನ್ನು ತುಳಿದು ನೆಲಮನೆಗೆ ಇಳಿಯುವ ಸಾಹಸಕ್ಕೆ ಯಾರೂ ಧೈರ್ಯ ಮಾಡಲಾರರು. ಯಾಕೆಂದರೆ ಯಾವ ಕ್ಷಣದಲ್ಲಿ ಬೇಕಾದರೂ ಛಾವಣಿ ಕುಸಿಯಬಹುದು ! ಕೆಲವೆಡೆ ಈಗಾಗಲೇ ಛಾವಣಿ ಕುಸಿದು ಅಡ್ಡಾಡದಂತಾಗಿದೆ.

ಮಿರ್ಜಾನ ಕೋಟೆಯನ್ನೂ ಅಂಕೋಲೆಯ ಕೋಟೆಯನ್ನೂ ಒಂದಾಗಿಸುವ ಸುರಂಗ ಮಾರ್ಗವೊಂದು ಇಲ್ಲಿನ ನೆಲಮನೆಯಿಂದ ಪ್ರಾರಂಭವಾಗುತ್ತಿತ್ತಂತೆ. ಅದಕ್ಕೆ ಹೊಂದಿಕೊಂಡಂತೆ ಕವಲೊಡೆದ ಎರಡು ಸುರಂಗಗಳಿದ್ದವಂತೆ. ಈಗ 'ಆ' ಎಂದು ವಿಕಾರವಾಗಿ ಬಾಯ್ತೆರೆದ ಎರಡೇ ಸುರಂಗ ಮಾರ್ಗಗಳಿವೆ. ಕೋಟೆಯಲ್ಲಿನ ಬಾವಿಯೊಂದು ಮಣ್ಣಿನಿಂದ ಮುಚ್ಚಿ ಹೋಗಿದೆ. ಸಭಾಂಗಣವೊಂದೇ ಇಲ್ಲಿ ತಕ್ಕಮಟ್ಟಿಗೆ ಸುಸ್ಥಿತಿಯಲ್ಲಿರುವುದು.

## ಕೋಟೆಯ ನಿರ್ಮಾಣ

ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಮಿರ್ಜಾನವು ಸುಬೇದಾರನ ವಶದಲ್ಲಿತ್ತು. ನಂತರ ವಿಜಾಪುರದ ಆದಿಲ್‌ಶಾಹಿಗಳು ಸುಪಾದಿಂದ ಮಿರ್ಜಾನವರೆಗಿನ ಭೂ ಪ್ರದೇಶವನ್ನು ವಶಪಡಿಸಿಕೊಂಡರು. ೧೬ನೇ ಶತಮಾನದ ಉತ್ತರಾರ್ಧದಲ್ಲಿ ಬಿದನೂರು ಸಾಮ್ರಾಜ್ಯ ದಕ್ಷಿಣ ಕನ್ನಡದಿಂದ ಮಿರ್ಜಾನ ಹೊಳೆಯವರೆಗೆ ಪಸರಿಸಿತ್ತು. ಹೊಳೆಯೀಚೆಗಿನ ಆಧಿಪತ್ಯವನ್ನು ಮುರಿಯಲು ವಿಜಾಪುರದ ದೊರೆ ಪೋಂಡಾದಲ್ಲಿ ನೇಮಕವಾಗಿದ್ದ ಸರದಾರ್ ಶರೀಫ್ ಉಲ್ ಮುಲಕ್‌ನನ್ನು ದಂಡಿನೊಂದಿಗೆ ಕಳುಹಿಸಿದ. ಈ ಸರದಾರನೇ ಮಿರ್ಜಾನ ಕೋಟೆಯ ನಿರ್ಮಾಪಕ. ಅವನ ಇನ್ನೊಂದು ಹೆಸರು ಸರ್ಪಮಲ್ಲಿಕನೆಂದು. ಆ ಹೆಸರು ಅವನಿಗೆ ಅಂಟಿಕೊಂಡ ಬಗ್ಗೆ ಉತ್ತರ ಕನ್ನಡದಲ್ಲಿ ಪ್ರಚಲಿತವಾಗಿರುವ ರೋಚಕ ಕಥೆಯೊಂದು ಹೀಗಿದೆ:

ಅಚವೆ ಎಂಬ ಊರಿನ ಹೆಬ್ಬಾರ ಮನೆತನದಲ್ಲಿ ಮುಲಕ್ ಗೋಪಾಲಕನಾಗಿದ್ದನು. ಒಂದು ದಿನ ದನಕರುಗಳನ್ನು ಮೇಯಿಸಲು ಬೆಟ್ಟಕ್ಕೆ

ಹೋದ ಬಾಲಕ ಎಷ್ಟು ಹೊತ್ತಾದರೂ ಮನೆಗೆ ಹಿಂತಿರುಗಲಿಲ್ಲ. ಹುಡುಕಲು ಹೊರಟ ಯಜಮಾನ ಕಂಡದ್ದೇನು ? ಮರವೊಂದರ ಕೆಳಗೆ ಮಲಗಿರುವ ಮುಲಕ್‌ನ ಮುಖದ ಮೇಲೆ ಬೀಳುತ್ತಿದ್ದ ಸೂರ್ಯ ಕಿರಣಗಳನ್ನು ನಾಗರಹಾವು ಹೆಡೆ ಬಿಚ್ಚಿ ತಡೆಯುತ್ತಿದೆ ! ಇವರನ್ನು ಕಂಡದ್ದೇ ಆ ಹಾವು ಹೆಡೆ ಮಡಚಿಕೊಂಡು ಬಿಲ ಹೊಕ್ಕಿತು. ಮುಲಕ್‌ನಿಗೆ ರಾಜಯೋಗದ ದಿನಗಳು ದೂರವಿಲ್ಲ ಎಂಬುದು ಹೆಬ್ಬಾರನಿಗೆ ಮನದಟ್ಟಾಯಿತು. ಅವತ್ತಿನಿಂದ ಆ ಹುಡುಗ ಸರ್ಪಮಲ್ಲಿಕನಾದ. ಮುಂದೆ ವಿಜಾಪುರದ ಆದಿಲ್‌ಶಾಹಿ ರಾಜ್ಯದಲ್ಲಿ ಸೇವಕನಾಗಿ ಸೇರಿ ಸುಬೇದಾರನಾಗಿ ಬಳಿಕ ಸರದಾರನಾಗಿ ಪದೋನ್ನತಿ ಪಡೆದ. ತನ್ನ ಅಧಿಕಾರಾವಧಿಯಲ್ಲಿ ಚಂದಾವರ, ಅಂಕೋಲಾ ಮತ್ತು ಮಿರ್ಜಾನಗಳಲ್ಲಿ ಕೋಟೆಗಳನ್ನು ನಿರ್ಮಿಸಿದ. ತನ್ನನ್ನು ಜೋಪಾನ ಮಾಡಿದ ಹೆಬ್ಬಾರನಿಗೆ ಅಚವೆ ಗ್ರಾಮವನ್ನು ಉಂಬಳಿಯಾಗಿ ನೀಡಿ ಋಣಮುಕ್ತನಾದ. ಇದಕ್ಕೆ ಪ್ರತಿಯಾಗಿ ಹೆಬ್ಬಾರನು ಮುಲಕನಿಗೆ ಸರ್ಪವು ನೆರಳು ನೀಡಿದ ತಾಣದಲ್ಲಿದ್ದ ಅರಳಿ ಮರಕ್ಕೆ ಕಟ್ಟೆಯನ್ನು ಕಟ್ಟಿಸಿ ಪ್ರತಿ ವರ್ಷದ ದಸರೆಯಂದು ಅದನ್ನು ಪೂಜಿಸುವ ಸಂಪ್ರದಾಯವನ್ನು ಪ್ರಾರಂಭಿಸಿದ.

ಕೋಟೆಯ ಮೇಲ್ವಿಚಾರಣೆಯನ್ನು ನಡೆಸಲು ಹವಾಲ್ದಾರ ಎಂಬ ಅಧಿಕಾರಿಗಳು ನೇಮಿಸಲ್ಪಟ್ಟು ೧೨ ಹವಾಲ್ದಾರರು ೩೫ ವರ್ಷಗಳ ಕಾಲ ಕೋಟೆಯ ಉಸ್ತುವಾರಿ ನೋಡಿಕೊಂಡರು. ನಂತರ ಮಹಲ್ ಮೊಹಾಸಿನ್ ಎಂಬ ಹತ್ತು ಅಧಿಕಾರಿಗಳು ಆಗಿ ಹೋದರು. ಕೊನೆಯ ಮೇಲ್ವಿಚಾರಕ ಮತಿಜಾಖಾನ್. ಕೆಲ ಪುಂಡಾಳುಗಳು ಮತಿಜಾನನ್ನು ಸೆರೆಯಲ್ಲಿರಿಸಿ ಕೋಟೆಯನ್ನು ಆಳಿದರು. ಬಳಿಕ ಬಿದನೂರ ದೊರೆಗಳಿಂದಲೂ ಸ್ವಾದಿ ಅರಸರಿಂದಲೂ ಮಿರ್ಜಾನ ಆಳಲ್ಪಟ್ಟಿತು. ೧೭೬೩ರಲ್ಲಿ ಮಿರ್ಜಾನ ಕೋಟೆ ಹೈದರಾಲಿಯ ವಶವಾಯಿತು. ಶ್ರೀರಂಗಪಟ್ಟಣ ಯುದ್ಧದಲ್ಲಿ ಅಲಿ ಸೋಲುವುದರೊಂದಿಗೆ ಕೋಟೆ ಬ್ರಿಟಿಶರಿಗೆ ಸೇರಿತು.

ಮಿರ್ಜಾನ ಕೋಟೆ ಸರ್ಪಮಲ್ಲಿಕ ಮತ್ತು ವಿಜಾಪುರದ ಸುಲ್ತಾನರಿಗೆ ಜೀವಾಳವಾಗಿತ್ತು. "ಮೇರೆ ಜಾನ್" ಎಂದೇ ಅಧನ್ನವರು ಕರೆಯುತ್ತಿದುದು. "ಮೇರೆ ಜಾನ್" ಎಂಬ ಪದ ಮೇರ್ಜಾನ ಬಳಿಕ ಮಿರ್ಜಾನ ಎಂದು ಅಪಭ್ರಂಶವಾಗಿ ಉಚ್ಚಾರಣೆಗೊಂಡಿತು. ಕೋಟೆಯ ಸುತ್ತಮುತ್ತಲಿನ ಪ್ರದೇಶ ಮಿರ್ಜಾನ ಎಂದು ಹೆಸರಾಯಿತು.

ಇದು ಮಿರ್ಜಾನ ಕೋಟೆಯ ಕಥೆ. ಕೋಟೆಯ ಹೆಸರನ್ನು ಮರಳಿ ದೊರಕಿಸುವುದೂ ಅಥವಾ ಕೋಟೆಯನ್ನು ಹೇಳಹೆಸರಿಲ್ಲದಂತೆ ಮಾಡುವುದೂ ಪುರಾತತ್ವ ಇಲಾಖೆಯ ಕೈಲಿದೆ. ●



# ಎದೆಗುದಿ 'ಜಾಸ್ತಿ', ನೆಮ್ಮದಿ 'ನಾಸ್ತಿ'

ಧರೆಯೊಳಗೆ ಸಿರಿ ಎಂಬುದು ಹೇರಳ. ಆದರೆ ಸಿರಿವಂತರು ವಿರಳ. ಅದೇ ತೆರನಾಗಿ ಎದೆ ಎಂಬುದು ಎಲ್ಲರಿಗೂ ಉಂಟು. ಆದರೆ ಕೆಲವರು ಮಾತ್ರ ಎದೆಗಾರಿಕೆಗೆ ಪಾತ್ರ. ರಾಜಕೀಯ ಪಕ್ಷಗಳಂತಹ ಸಂಸ್ಥೆಗಳ ಚುಕ್ಕಾಣಿ ಹಿಡಿದವರು ಅಲ್ಲಿನ ವರಿಷ್ಠರು. ಒಂದಿಲ್ಲೊಂದು ಬಗೆಯ ಪಟ್ಟಭದ್ರ ಹಿತಾಸಕ್ತಿ ಉಳ್ಳವರು. ಒಮ್ಮೊಮ್ಮೆ ಅವರ ತೀರ್ಮಾನಗಳು ಸಮಗ್ರ ರಾಷ್ಟ್ರದ ಹಿತದ ದೃಷ್ಟಿಯಿಂದ ಸರಿ ಇಲ್ಲವಾದರೂ ಬಹುಮಂದಿ ಸದಸ್ಯರು ಹೌದಪ್ಪಗಳೇ. ಒಳಗೊಳಗೆ ಗೊಣಗಿ ತಣ್ಣಗೆ ಕುಳಿತುಕೊಳ್ಳುವವರು ಕೆಲವರು. ಮಳೆಗಾಲದ ಆರಂಭದ ದಿನಗಳ ಕಪ್ಪೆಗಳಂತೆ ಬರಿದೆ ವಟಗುಡುವವರು ಇನ್ನಷ್ಟು ಜನ. "ಇದು ಸರ್ವಥಾ ಸರಿಯಲ್ಲ" ಎಂದು ಎತ್ತಿ ತೋರಿಸಿ ತರ್ಕಬದ್ಧವಾಗಿ ವಾದಿಸಿ ಸಿಡಿದೇಳುವ ಎದೆಗಾರಿಕೆಯುಳ್ಳವರು ಅದೆಷ್ಟು ಜನ? ಎದೆಗುಂಡಿಗೆ ಗಟ್ಟಿಯಾಗಿದ್ದರೆ ತಾನೆ ಅನ್ಯಾಯವನ್ನು ಎದುರಿಸುವ ದಿಟ್ಟತನ ತೋರ್ಪಡಿಸಲು ಶಕ್ಯ. ಅಂಥವರು ಬಿರುಗಾಳಿಯ ಹೊಡೆತಕ್ಕೆ ಮರ ಉರುಳುವಂತೆ ಮುರಿದು ಬಿದ್ದಾರೆಯೆ ಹೊರತು ಎಂದಿಗೂ ಮಣಿಯರು. ದುರ್ಧರ ಪ್ರಸಂಗದಲ್ಲಿ ಅವರ ಮಸ್ತಕ ರಕ್ತ ಸಿಕ್ತವಾದೀತೆ ವಿನಾ ಅದು ಎಂದಿಗೂ ಬಾಗದು- "My head is bloody but unbowed" ಎಂದು ಆಂಗ್ಲಕವಿ ಹೆನ್ಲೆ ಉದ್ಗರಿಸುವಂತೆ.

ಎದೆ ಎಂಬ ಸುಭದ್ರವಾದ ಕೋಟೆಗೆ ಲಗ್ಗೆ ಹತ್ತುವ ಅಳುಕು ಮುಂತಾದ ಆಂತರ್ಯದ ಶತ್ರುಗಳಿಗೆ ಕೊರತೆ ಇಲ್ಲ. ಮದುವೆಯನ್ನು ನೆರವೇರಿಸಿ ಆದ ಮೇಲೆ ಕಾರ್ಯ ಸಾಂಗವಾಗುವವರೆಗೆ "ಎದೆಯೊಳಗೆ ಎದೆ" ಇರಲಿಲ್ಲ ಎಂಬ ಕನ್ಯಾ ಪಿತೃವಿನ ಉದ್ಗಾರವನ್ನು ಎಲ್ಲರೂ ಕೇಳಬಲ್ಲರು. ಇದು ಆತನ ಎದೆಗುಂಡಿಯ ಸಂಕೇತ. "ಕುಕ್ಕರ್" ಪಾತ್ರೆಯಲ್ಲಿಯೆ ಅಕ್ಕಿ, ಬೇಳೆ ಬೇಯಿಸುವ ಇಂದಿನ ಗೃಹಿಣಿಯರಿಗೆ ಅನ್ನದ ಕುದಿ ಕಣ್ಣಿಗೆ ಬೀಳುವುದು ತುಂಬ ಅಪರೂಪ. ಆದರೆ ಎದೆಗುದಿ ಎಲ್ಲರಿಗೂ ನಿತ್ಯದ ಅನುಭವ. ಮಿತಿಮೀರಿ ಬೆಳೆಯುತ್ತಿರುವ ಮಹಾನಗರಗಳ ದೈನಂದಿನ ಜೀವನದಲ್ಲಿ ಎದುರಿಸಬೇಕಾಗಿ ಬರುವ ಸಮಸ್ಯೆಗಳು ಎಣಿಸಲಾರದಷ್ಟು, ಸುಲಭವಾಗಿ ಬಗೆಹರಿಯಲಾರದಷ್ಟು. ಒಂದಿಲ್ಲೊಂದು ಬಗೆಯ ಎದೆಗುದಿ ತಪ್ಪಿದ್ದಲ್ಲ. ಎಷ್ಟೆಷ್ಟು ಎದೆಗುದಿ "ಜಾಸ್ತಿ"- ಅಷ್ಟಷ್ಟು ನೆಮ್ಮದಿ "ನಾಸ್ತಿ" ಇದೆಲ್ಲ ಆಧುನಿಕತೆಯ ಹೆಸರಿನಲ್ಲಿಯ "ನಿತ್ಯದ ಕುಸ್ತಿ!!"

ಅತೀವ ಧೂಮ್ರಪಾನದ ದುರಭ್ಯಾಸಕ್ಕೆ ದಾಸಾನುದಾಸರಾದವರ ಎದೆ ಗಟ್ಟಿಮುಟ್ಟಾಗಿ ಉಳಿಯುವದರ ಬದಲು ಗೂಡು ಕಟ್ಟುತ್ತದೆ. ಗೂರಲಿನಂತಹ ಬೇನೆಯ ಬೀಡಾಗುತ್ತದೆ. ಹಳೆಯ ಕಾಲದ ಅಡುಗೆ ಮನೆಯ ಹೊಗೆಮಾಡಿನಂತೆ ಆಗುತ್ತದೆ.

ಮಾನವನಿಗೆ ತಲೆ ಪ್ರಧಾನ ಅಂಗವಾದರೆ, ಹಾವಿಗೆ ಹೆಡೆ. ಹೆಡೆಯನ್ನು ಪಡೆದುದರಿಂದ ಅದು "ಫಣಿ". ಹೆಡೆ ಹೊಡೆತಕ್ಕೆ ಸಿಲುಕಿತೋ ಪ್ರಾಣಕ್ಕೆ ಸಂಚಕಾರ. ಮುಂದೆ ಮುಂದೆ ಸರಿಯುವಾಗ ಹಾವು ಎದೆಯನ್ನು ಸಾಧನವನ್ನಾಗಿಸುವದರಿಂದ ಅದು "ಉರಗ" ಎನಿಸಿಕೊಂಡಿದೆ.

ಎದೆಗಾಗಲಿ, ತಲೆಗಾಗಲಿ, ತಗುಲಿದ ತೀವ್ರತರನಾದ ಪೆಟ್ಟು ಬಹಳಷ್ಟು ಸಲ ಖಂಡಿತವಾಗಿ ಪ್ರಾಣಾಂತಿಕ. ಅಬ್ರಾಹಂ ಲಿಂಕನ್, ಮಹಾತ್ಮಾ ಗಾಂಧಿ ಅವರಂತಹ ಮಹಾಪುರುಷರು ಮಹತ್ತರವಾದ ಸಾಧನೆಯ ಪಥದಲ್ಲಿ ಮುಂದುವರೆಯುತ್ತಿದ್ದಂತೆಯೇ ಅವರ ಜೀವನ ಕಾರ್ಯ ಮೊಟಕುಗೊಂಡುದು ಗುರಿಯಿಟ್ಟು ಹೊಡೆದ ಗುಂಡಿನೇಟಿನಿಂದಲ್ಲವೆ ? ದೇವನಿರ್ಮಿತ ಸುಭದ್ರ ಕೋಟೆಯ ರಕ್ಷಾ ವ್ಯವಸ್ಥೆ ದಾನವ ಶಕ್ತಿ, ಕುಯುಕ್ತಿಗಳೆದುರು ಕುಸಿದು ಬಿದ್ದಿತಲ್ಲವೆ ?

ಸಾಮಾನ್ಯವಾಗಿ ಇರುವುದು ಒಂದೇ ಒಂದು ಎದೆ. ಆದರೂ ದಿಟ್ಟತನವನ್ನು ಸೂಚಿಸಲು 'ಎಂಟೆದೆಯ ಬಂಟ' ಎಂದು ಬಣ್ಣಿಸುವ ರೂಢಿ. "ರನ್ನನ ಕೃತಿ ಪರೀಕ್ಷಪಂಗೆ ಎಂಟೆರ್ದೆಗಳು ಸಲ್ಲು" ಎಂದು ಕವಿಚಕ್ರವರ್ತಿ ರನ್ನ ತನ್ನ ಗದಾಯುದ್ಧ ಕಾರ್ಯದ ಮೇಲ್ಮೆಯನ್ನು ತೋರಿಸಲು ಪರೀಕ್ಷಕನ ಎದೆಗಾರಿಕೆಯನ್ನೇ ಆಹ್ವಾನಿಸುತ್ತಾನೆ.

ಎದೆ ಸೀಳಿದರೆ ಮೂರಕ್ಷರವೂ ಸಿಕ್ಕಲಾರದ ಅನೇಕರು, ಗರುವದಿಂದ ಎದೆ ಸೆಟೆಸಿಕೊಂಡು ಎಲ್ಲ ಬಲ್ಲವರಂತೆ ಮೆರೆದಾಡುತ್ತಾರೆ. ಆದರೆ ನಿಷ್ಠಾವಂತ ಸೇವೆ, ಶ್ರದ್ಧಾಪೂರ್ಣ ಭಕ್ತಿಗೆ ಹೆಸರುವಾಸಿಯಾದ ರಾಮನ ಬಂಟ ಹನುಮಂತ ತನ್ನ ಎದೆಯನ್ನೇ ತೆರೆದು ತೋರಿದಾಗ ಅದರೊಳಗಿಂದ ತೂರಿ ಬಂದುದು ಆದೇ ಶ್ರೀರಾಮನ ದಿವ್ಯರೂಪ ತಾನೆ ? "ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ" ಎಂಬ ಗೀತೆಯ ಮಾತಿಗೆ ಮಾರುತಿಯ ಈ ಪ್ರಸಂಗವೇ ಸಾಕ್ಷಿ.

ದ್ರೌಪದಿ ಸ್ವಯಂವರದ ಕಾಲಕ್ಕೆ ಮತ್ಸ್ಯಯಂತ್ರವನ್ನು ಭೇದಿಸಲು ಕ್ಷತ್ರಿಯರೆಲ್ಲರೂ ವಿಫಲರಾಗಿ ಕಂಗೆಡಲು, "ಬ್ರಾಹ್ಮಣರಲ್ಲಿ ಯಾರಾದರೂ ಸಿದ್ಧರೆ ?" ಎಂದು ಘೋಷಿಸಲಾಯಿತು. ಆಗ ದ್ವಿಜರ ಮಧ್ಯದೊಳಗಿಂದ ಬ್ರಾಹ್ಮಣ ವೇಷಧಾರಿ ಪಾರ್ಥ ಎದ್ದು ನಿಂತ. ಎದೆ ತಟ್ಟಿಕೊಂಡು ತಾನು ಸಿದ್ಧನೆಂದು ಸಾರಿದ. ಅಕ್ಕಪಕ್ಕದಲ್ಲಿದ್ದ ಉಳಿದ ಹಾರುವರ ಎದೆಗಳು ಡವ ಡವ ಬಡಿದುಕೊಂಡವು. "ಏನು ಸುದ್ದಿ ಉಪಾಧ್ಯರೆದ್ದಿರಿ ?" ಎಂದು ಆತನನ್ನು ಮೂದಲಿಸಿ, "ಬಂದ ದಕ್ಷಿಣೆ ಮೃಷ್ಟ ಭೋಜನದಿಂದ ತೃಪ್ತರು" ಎಂದು ತಮ್ಮನ್ನು ತಾವೇ ಬಣ್ಣಿಸಿಕೊಳ್ಳುತ್ತ "ಹಾರುವರಿಗೇಕೆ ಈ ಯಂತ್ರಭೇದದ ಗೊಡವೆ ?" ಎಂದು ತಮ್ಮ ಎದೆಯಾಳದ ಅನಿಸಿಕೆಯನ್ನು ವ್ಯಕ್ತಪಡಿಸಿದರಂತೆ.

ಅನೇಕ ದುಷ್ಕೃತ್ಯಗಳನ್ನೆಸಗಿದ ದುರುಳ ದುಶ್ಶಾಸನನ ಎದೆಯನ್ನು ಬಗೆದ ಭೀಮಸೇನನು ಬೊಗಸೆಯಿಂದ ಅವನ ನೆತ್ತರವನ್ನು ಕುಡಿದು, ಒಂದಿಷ್ಟು ಅದನ್ನೇ ದ್ರೌಪದಿಯ ಬಿಚ್ಚಿಬಿಟ್ಟ ಹೆಳಲಿಗೆ ಹಚ್ಚಿ ಬಾಚಿದುದರಲ್ಲಿ ಎದೆ ಎಂಬುದು ಗರ್ವದ ಸಂಕೇತ ಎಂಬುದು ಸ್ಪಷ್ಟ.

ಉಗ್ರವಾದ ತಮೋನುಷ್ಠಾನದಲ್ಲಿ ನಿರಂತರ ನಿರತನಾದ ಬಡಕಲು ಶರೀರದ ಹಾರೀತ ಮುನಿಯ ಎದೆಯ ಪಕ್ಕೆಲುವುಗಳು ಮಹಾಕವಿ ಬಾಣಭಟ್ಟನ ದೃಷ್ಟಿಯಲ್ಲಿ ಮೆಟ್ಟಿಲುಗಳ ಸಾಲಿಗೆ ಸಮಾನ ಎನಿಸಿದವು. ದುರ್ಗುಣಗಳೆಲ್ಲ ಕೆಳಕೆಳಗೆ ಇಳಿಯುತ್ತ ಹೋಗಲು ಸದ್ಗುಣಗಳು ಮೇಲೆಮೇಲಕ್ಕೆ ಏರಲು ಇದೊಂದು ಸೋಪಾನ ಎಂಬ ಕಲ್ಪನೆ ಅದೆಷ್ಟು ಅರ್ಥಪೂರ್ಣ ! ಇದರಿಂದಾಗಿ ಇಂಥವರ ಎದೆ ನೈರ್ಮಲ್ಯದ ನಿಕೇತನವೆಂದೆನಿಸಿದರೆ ಏನಚ್ಚರಿ ?

ಎದೆ ಪರಂಜ್ಯೋತಿ. ವಿರಾಜಿಸುವ ಹಣತೆ. "ಹೃದಯ ಕಮಲ ಮಧ್ಯೆ ದೀಪವದ್ ವೇದಸಾರಮ್ ಪ್ರಣವಮಯಮತರ್ಕ್ಯಂ ಯೋಗಿಹೃದ್ ಧ್ಯಾನ ಗಮ್ಯಮ್" ಓಂಕಾರ ಸ್ವರೂಪವಾದ, ತರ್ಕಾತೀತ ವಾದ ಕೈಕೊಳ್ಳುವ ಧ್ಯಾನಕ್ಕೆ ಮೊತ್ತವೆ ನಿಲುಕುವ ವೇದಸಾರದಂತಿರುವ ಆ ದಿವ್ಯ ಪ್ರದೀಪವು ಯೋಗಿಗಳ ಹೃದಯವನ್ನು ಸದ್ಯವ ಬೆಳಗುವಂಥದು. ಎದೆಯ ಮಹತಿಗೆ ಬೇರೊಂದು ಸಾಕ್ಷಿ ಬೇಕೆ ?

"ತದ್ ವಕ್ಷಃಸ್ಥಲ ನಿತ್ಯವಾಸ ರಸಿಕಾ" ಎಂದು ಸ್ತೋತ್ರಕಾರರ ಸ್ತುತಿಗೆ ಪಾತ್ರಳಾದ ಮಹಾಲಕ್ಷ್ಮಿ ಕೂಡ ಶ್ರೀವಿಷ್ಣುವಿನ ಸುವಿಶಾಲವಾದ ವಕ್ಷಸ್ಥಳವನ್ನೇ ತನ್ನ ಶಾಶ್ವತವಾದ ನಿವಾಸ ಸ್ಥಾನವನ್ನಾಗಿ ಆಯ್ದುಕೊಂಡಿದ್ದಾಳೆ. ಇದು ಕೂಡ ಎದೆಯ ಹೆಗ್ಗಳಿಕೆಯಲ್ಲದೆ ಇನ್ನೇನು ? ●



# ನುಡಿಚಿತ್ರಗಳ ಮೋಡಿಗಾರ ಎಚ್ಚೆಸ್ಕೆ

ಕೆಲವೇ ಕೆಲವು ರೇಖೆಗಳ ಮೂಲಕ ವ್ಯಕ್ತಿತ್ವದ ಎತ್ತರ ಬಿತ್ತರಗಳನ್ನೆಲ್ಲ ಸೆರೆಹಿಡಿದು ಬಿಂಬಿಸುವುದು ಕೆ.ಕೆ. ಹೆಬ್ಬಾರರಂಥ ಕಲಾವಿದರ ರೀತಿ. ಬಿಡಿನುಡಿಗಳ ಚಿತ್ತಾರದ ಮೂಲಕ ಅಥವಾ ನುಡಿಚಿತ್ರಗಳ ಮಾಲೆಯ ಮೂಲಕ ವ್ಯಕ್ತಿತ್ವವನ್ನು ನಿಮ್ಮೆದುರು ಕಡೆದು ನಿಲ್ಲಿಸುವುದು 'ಎಚ್ಚೆಸ್ಕೆ' (ಎಚ್.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್) ಅವರ ಶೈಲಿ. ಕನ್ನಡದ ಕಾರ್ಯಕ್ಕಾಗಿಯೇ ತಮ್ಮನ್ನು ಅರ್ಪಿಸಿಕೊಂಡ ಹಿರಿಯ ಚೇತನ ಅವರು. ಕಳೆದ ಆಗಸ್ಟ್ ೨೬ಕ್ಕೆ ೭೫ರ ಹೊಸ್ತಿಲು ದಾಟಿರುವ ಅವರದು ಬಹುಶ್ರುತ ಪಾಂಡಿತ್ಯ. ಎಚ್ಚೆಸ್ಕೆ ಕವಿ, ಪ್ರಬಂಧಕಾರ, ಕಾದಂಬರಿಕಾರ, ಪತ್ರಕರ್ತ, ಅಂಕಣಕಾರ, ವಿಮರ್ಶಕ, ಅರ್ಥಶಾಸ್ತ್ರಜ್ಞ ಹಾಗೂ ಶಿಕ್ಷಣವೇತ್ತ. ಅವರೊಂದಿಗೆ ನಡೆಸಿದ 'ಮಾತು-ಕತೆ'ಯನ್ನು ಯಥಾವತ್ತಾಗಿ ಕೊಡುವುದರ ಮೂಲಕ ಅವರದೊಂದು ವ್ಯಕ್ತಿಚಿತ್ರವನ್ನು ಪಡಿಮೂಡಿಸುವ ಪ್ರಯತ್ನ ಇಲ್ಲಿದೆ.

● ಎ. ಮಾಧವ ಉಡುಪ

## ಮೊದಲ ಬರಹ....

ನಾನಾಗಿ ಒಂದು ವಿಚಾರವನ್ನಾಯ್ದುಕೊಂಡು ಬರೆಯತೊಡಗಿದ್ದು ಮೈಸೂರಿನಲ್ಲಿ, ನಾನು ಎಸ್.ಎಸ್.ಎಲ್.ಸಿ. ಓದುತ್ತಿರುವಾಗ. ಅವಶ್ಯಕತೆಯೇ ಅನ್ವೇಷಣೆಗೆ ಮೂಲ ಅಂತಾರಲ್ಲ- ಅಂತೇನೇ ಪರಿಸ್ಥಿತಿಯ ಒತ್ತಡಕ್ಕೆ ಮಣ'ದು ನನ್ನ ಅಂತರಂಗವನ್ನು ತೋಡಿಕೊಳ್ಳಲು ನಾನಂದು ಲೇಖನಿ ಹಿಡಿದೆ. ಅಂದು ನಾವು ನಾಲ್ಕಾರು ಜನ ಗೆಳೆಯರು ಅರಮನೆಯ ಮುಂದೆ ಸೇರಿದ್ದೆವು. ಕೇವಲ ಮೋಜಿಗಾಗಿ ನಮ್ಮ ನಮ್ಮಲ್ಲೇ ಸ್ವಂತ ಪ್ರತಿಭೆಯನ್ನು ಪ್ರದರ್ಶಿಸುವ ಸ್ಪರ್ಧೆ ಏರ್ಪಟ್ಟಿತು. ನಮ್ಮವರಲ್ಲೊಬ್ಬ ಅಲ್ಲಿನ ಪರಿಸರದ ಚಿತ್ರ ಬರೆದ. ಮತ್ತೊಬ್ಬ ಕವಿತೆ ರಚಿಸಿ ಹಾಡಿದ. ನಾನು ಎದುರಿನ ದೊಡ್ಡ ಕೆರೆಯ ಬಗ್ಗೆ (ಈಗಿನ 'ದೊಡ್ಡಕೆರೆ ಮೈದಾನ') ಒಂದು ಪ್ರಬಂಧ ಬರೆದು ಓದಿದೆ. ಅದೇ ನನ್ನ ಮೊದಲ ಸ್ವತಂತ್ರ ಕೃತಿ.

ಬಾಲ್ಯದಿಂದಲೇ ಓದುವ ಹುಚ್ಚು, ತಿಳಿಯುವ ಆಸಕ್ತಿ ನನ್ನಲ್ಲಿತ್ತು. ಅದಕ್ಕೆ ಕಾರಣ ನನ್ನ ತಂದೆ ಶ್ರೀನಿವಾಸ ಅಯ್ಯಂಗಾರರು. ವೃತ್ತಿಯಲ್ಲಿ ಅಧ್ಯಾಪಕರಾಗಿದ್ದ ಅವರು ನನಗೂ ಗುರುಗಳೇ. ರಾಮಾಯಣ, ಮಹಾಭಾರತಗಳನ್ನು ಚೆನ್ನಾಗಿ ಓದಿಕೊಂಡಿದ್ದ ಅವರು ಹೇಳುತ್ತಿದ್ದ ನೀತಿಕತೆಗಳು ನನ್ನಲ್ಲಿ ಓದುವ ಆಸಕ್ತಿಯನ್ನು ಅರಳಿಸಿದವು, ತಿಳಿವಿನ ಹಂಬಲವನ್ನು ಹೆಚ್ಚಿಸಿದವು. ರಾಮಾಯಣ, ಮಹಾಭಾರತದ ಕತೆಗಳಲ್ಲದೆ ವೆಂಕಟಾಚಾರ್, ಗಳಗನಾಥರ ಕಾದಂಬರಿಗಳೂ ನನ್ನನ್ನಾಕರ್ಷಿಸಿದ್ದವು. ಆದರೆ ಪತ್ತೇದಾರಿ ಕಾದಂಬರಿಗಳೇ ನನಗೆ ಪ್ರಿಯವಾಗಿದ್ದವು.

ಇಂಟರ್‌ಮೀಡಿಯೇಟ್ ತರಗತಿಯಲ್ಲಿದ್ದಾಗ 'ಅರಿಂದಮನ ಸಾಹಸ' ಎಂಬ ಒಂದು ಪತ್ತೇದಾರಿ ಕಾದಂಬರಿಯನ್ನೂ ನಾನು ಬರೆದಿದ್ದೆ. ಕೃಷ್ಣರಾಜನಗರದಿಂದ ಮೈಸೂರಿಗೆ ರೈಲಿನಲ್ಲಿ ದಿನವೂ ತಿರುಗುತ್ತಿದ್ದ ಆ ಕಾಲದಲ್ಲಿ ಒಮ್ಮೆ ರೈಲಿನಲ್ಲಿ ಪುಸ್ತಕ ಮಾರಾಟ ಮಾಡುತ್ತಿದ್ದ ಒಬ್ಬ ವ್ಯಾಪಾರಿಯೊಡನೆ ಅದನ್ನು ಪ್ರಕಟಿಸುವ ಬಗ್ಗೆಯೂ ಪ್ರಸ್ತಾಪಿಸಿದ್ದೆ. ಆತ ಪರಿಶೀಲಿಸುವುದಾಗಿ ಭರವಸೆ ಇತ್ತು ಅದನ್ನು ಪಡೆದಿದ್ದ. ಮತ್ತೆ ಆತನ ಭೇಟಿಯೂ ಆಗಿರಲಿಲ್ಲ. ನನಗೂ ಅದು ಮರೆತೇ ಹೋಗಿತ್ತು. ಕೆಲವು

## ಒಂದೆರಡೇ ಉಕ್ತಿಗಳಲ್ಲಿ

'ಅಂಗಿ- ಧೋತರ, ಛತ್ರಿ- ಕನ್ನಡಕ, ಟೊಪ್ಪಿಗೆ- ಕೆರ. ರೂಪಿನಲ್ಲಿ ಮಾಸ್ತರ, ವೃತ್ತಿಯಲ್ಲೂ ಮಾಸ್ತರ. ವೇದಾಂತಿಯ ಸ್ವಭಾವ. ಕಾವ್ಯ ಜೀವನ ಯೋಗ. ಒಡಲ ನೂಲಿನಿಂದ ನೇದ ಇಂದ್ರಜಾಲ.'

- ಬೇಂದ್ರೆ ಮಾಸ್ತರ

'ಬಿಳಿಯ ಖಾದಿ ಲುಂಗಿ, ಅಂಗವಸ್ತ್ರ, ಚಿಕ್ಕದಾಗಿ ಕತ್ತರಿಸಿದ ತಲೆಗೂದಲು. ದುಂಡು ಮುಖ, ಗುಂಡು ದೇಹ. ಗಂಡೆದೆ, ಗುರು, ಮಹಾ ವಾಗ್ಮಿ. ನಿಂತು ಮಾತನಾಡಿದರೆ ಪೆಂಟೆ ಕಂಚು. ಮಾತಿನ ಮೋಡಿಗೆ ಮರುಳಾಗಿ ಕೂತ ಶ್ರೋತೃ ಸಮೂಹ. ಮೊಳಗುವ ಮಾತಿನ ಹಿಂದೆ ವಿಚಾರದ ಕೋಲ್ಮಿಂಚು. ಕಣ್ಣಿಗೆ ಕಟ್ಟುವಂಥ ಶಬ್ದಚಿತ್ರ: ವೀರ, ಕರುಣ, ಅದ್ಭುತ, ಆವೇಶ, ಆಗ್ರಹ, ನವರಸಗಳ ಸರಿಗಮ. ನಗೆಯ ಸಂಪುಟವಲ್ಲಿ ನೀತಿಬೋಧೆ. ಪರಮಾರ್ಥ ಚಿಂತನೆ. ಶಿಷ್ಯರ ಬುದ್ಧಿ- ಹೃದಯಗಳಿಗೆ ವಿವೇಕದ ಕಸಿ; ಸಾಹಿತ್ಯ ದೀಕ್ಷೆ, ಕಸರತ್ತು, ಕವಾಯತು.'

- ಜಿ.ಪಿ. ರಾಜರತ್ನಂ

'ಖಾಕಿ ನಿಕ್ಕರ್, ಬಿಳಿಯ ಶರ್ಟು, ದಪ್ಪ ಅಟ್ಟೆಯ ಪರಂಗಿ ಟೊಪ್ಪಿಗೆ, ಹಳೆಯ ಕಾಲದ ಓವರ್ಸಿಯರ ಹಾಗೆ. ಎತ್ತರದ ಕಟ್ಟಾಳು, ಅಪಾಲೊ ಹಣೆ, ಪ್ರಮುಖವಾದ ಮೂಗು, ಮಿನುಗುವ ಕಣ್ಣು, ಬಿಳುಪೆನಿಸದ ಬಣ್ಣ, ಬಿಚ್ಚುನುಡಿಯ ನೇರ ನಡೆಯ ಸ್ನೇಹಪ್ರಿಯ. ಬಾಳಿನ ಆಳವನ್ನೂ, ವಿಸ್ತಾರವನ್ನೂ ಕಂಡು ಅನುಭವಿಸಿದವರು ಎಂದು ಮೊದಲ ನೋಟಕ್ಕೇ ಸ್ಪಷ್ಟ.'

- ಡಾ. ಬಿ.ಜಿ.ಎಲ್. ಸ್ವಾಮಿ

ತಿಂಗಳುಗಳ ನಂತರ ಫೂಟ್‌ಪಾತ್ ಮೇಲಿನ ಪುಸ್ತಕ ವ್ಯಾಪಾರಿಯ ಬಳಿ ಮುದ್ರಿತವಾದ 'ಅರಿಂದಮನ ಸಾಹಸ'ವನ್ನು ಕಂಡೆ! ನನ್ನ ಹೆಸರನ್ನು ಅದರಲ್ಲಿ ನಮೂದಿಸಿರದಿದ್ದರೂ, ನನ್ನ ಬರಹ ಅಚ್ಚಾದುದನ್ನು ಕಂಡು ನನಗಾದ ಹಿಗ್ಗು ಹೇಳತೀರದು. ನನ್ನ ಬರಹಕ್ಕೆ ಪ್ರಕಟಣೆಯ ಯೋಗ ದೊರಕುತ್ತದೆಂಬ ಭರವಸೆಯನ್ನದು ಮೂಡಿಸಿದ್ದರಿಂದಲೋ ಏನೋ ನನ್ನಲ್ಲಿ ಬರೆಯುವ ತುಡಿತ ಹೆಚ್ಚಿತು.

ಇಂಟರ್‌ಮೀಡಿಯೇಟ್‌ನಲ್ಲಿ ನಾನು ಸಂಸ್ಕೃತದ ವಿದ್ಯಾರ್ಥಿ ಆಗಿದ್ದರೂ ಟಿ.ಎಸ್. ವೆಂಕಣ್ಣಯ್ಯ ಮತ್ತು ಕುವೆಂಪು ಅವರ ಕನ್ನಡ ತರಗತಿಗಳಿಗೆ ನಾನು ಹೋಗಿ ಕುಳಿತುಕೊಳ್ಳುತ್ತಿದ್ದುದುಂಟು. ಆದರೆ ನನ್ನ ಪಾಲಿಗೆ ಅವರ ಕನ್ನಡ ಪಾಠಗಳ ಸವಿ ಹೆಚ್ಚು ದಿನ ದೊರಕದಾಯಿತು. ಬಡತನದಿಂದಾಗಿ ನಾನು ವಿದ್ಯಾಭ್ಯಾಸಕ್ಕೆ ವಿದಾಯ ಹೇಳಬೇಕಾಯಿತಾದರೂ ನನ್ನ ಓದಿ ಬರೆಯುವ ಆಸಕ್ತಿಯೇನೂ ಬಡವಾಗಲಿಲ್ಲ. ಆ ಆಸಕ್ತಿಯೇ 'ತಾಯಿನಾಡು', 'ದಿ ಹಿಂದು' ಪತ್ರಿಕೆಗಳನ್ನು ತರಿಸಿ ಹಂಚಲು ನನ್ನನ್ನು ಪ್ರೇರೇಪಿಸಿತು. ಆ ಪತ್ರಿಕೆಗಳಿಗೆ ಸುದ್ದಿ ಒದಗಿಸುವ ನಮ್ಮೂರಿನ ಬಾತ್ಮೀದಾರನೂ ನಾನಾದೆ. ನನ್ನ ಮತ್ತು ಪತ್ರಿಕೆಗಳ ನಂಟು ಅಷ್ಟು ಹಳೆಯದು. ಪತ್ರಿಕೆಗಳಿಗೆ ಬರೆಯುವ ವರದಿ ಚೆನ್ನಾಗಿರಬೇಕೆಂದು ನಾನಾಗ ಕೈಗೆ ಸಿಕ್ಕಿದ ಪುಸ್ತಕಗಳನ್ನೆಲ್ಲ ಓದಿ ಅವುಗಳ ಒಳಿತನ್ನು ವಿಮರ್ಶಿಸಿ ಅದನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೆ. ಬೇಂದ್ರೆ, ಷೆಲ್ಲಿ, ಬೈರನ್, ಕೀಟ್ಸ್, ಕುವೆಂಪು, ರಾಜರತ್ನಂ, ಡಿ.ವಿ.ಜಿ., ಮಾಸ್ತಿ, ಷೇಕ್ಸ್‌ಪಿಯರ್, ಮಾಮ್, ಡಿಕನ್ಸ್ ಇವರೆಲ್ಲ ಆ ರೀತಿ ನನ್ನ ಹೃದಯ ಬಾಗಿಲು ತೆರೆದರು.

ಕನ್ನಡಕ್ಕಾಗಿ ದುಡಿಯಬೇಕೆಂಬ ನನ್ನ ತುಡಿತದ ತೀವ್ರತೆಯಿಂದಾಗಿಯೇ ಏನೋ ನಾವು ಕೆಲವರು ಮಿತ್ರರು ಸೇರಿ ಅಂದೇ ನಮ್ಮೂರಿನಲ್ಲಿ ಕನ್ನಡ ಸಂಘ ಸ್ಥಾಪಿಸಿ ಕಾರ್ಯಕ್ರಮ ನಡೆಸತೊಡಗಿದೆವು. ನಮ್ಮೂರಿಗೆ ಅಂದು ಬಂದಿದ್ದ ದಿವಾನ ಮಿರ್ಜಾ ಇಸ್ಮಾಯಿಲ್‌ರ ದೃಷ್ಟಿಗೂ ನಾನು ಬಿದ್ದಿದ್ದೆ. ಅವರೂ ನನ್ನ ಉತ್ಸಾಹವನ್ನು ಕಂಡು ಬೆನ್ನು ತಟ್ಟಿದ್ದರು. ಇದರಿಂದ ಇನ್ನಷ್ಟು ಓದಬೇಕು, ಹೆಚ್ಚಿನದನ್ನು ಸಾಧಿಸಬೇಕು ಎಂಬ ಹಂಬಲ ನನ್ನಲ್ಲಿ ಹೆಚ್ಚಿತು.

ಎಲ್.ಕಾಂ. ತರಗತಿಗಳು ಬೆಂಗಳೂರಿನಲ್ಲಿ ಪ್ರಾರಂಭವಾದಾಗ ನಾನು ಅಲ್ಲಿಗೆ ಹೋದೆ. ಆಗಲೆ ನಾನು 'ಕನ್ನಡ ಜಾಣ' ಪರೀಕ್ಷೆಯನ್ನು ಕಟ್ಟಿದ್ದು, ಆ ಪರೀಕ್ಷೆಗೆ ಪಾಠ ಹೇಳಲು ಬಿ.ಎಂ.ಶ್ರೀ., ವಿ.ಸೀ., ತಿ.ತಾ. ಶರ್ಮ, ರಾಜರತ್ನಂ ಇವರೆಲ್ಲ ಬರುತ್ತಿದ್ದರು. ಈ ದಿಗ್ಗಜಗಳ ಸಂಪರ್ಕದಿಂದ ನನ್ನಲ್ಲಿ ಓದು ಬರೆಹದ ಆಸಕ್ತಿ ಇನ್ನಷ್ಟು ಹೆಚ್ಚಿತು. ಏಕಾಂತಪ್ರಿಯನಾಗಿದ್ದ ನನಗೆ ಪುಸ್ತಕಗಳೇ ಸಂಗಾತಿಗಳಾದವು. ನನ್ನೊಳಗಿನ ಭಾವನೆಗಳನ್ನು ತೋಡಿಕೊಳ್ಳಲು ಕವಿತೆಗಳನ್ನು ಬರೆದೆ, ರಚಿಸಿದೆ. ಪ್ರಬಂಧಗಳನ್ನು ಬರೆದೆ.

## 'ಎಚ್ಚೆಸ್ಕೆ' ಆದದ್ದು...

ನನ್ನ ಹೆಸರು ತೀರ ದೊಡ್ಡದಾದುದರಿಂದ ಬರಹಗಳಿಗಾಗಿ ನಾನು 'ಎಚ್ಚೆಸ್ಕೆ' ಆದೆ. ಈ 'ಎಚ್ಚೆಸ್ಕೆ' ಎನ್ನುವುದು ಹಳೆಯೂರು (ನನ್ನ ಹುಟ್ಟೂರು) ಶ್ರೀನಿವಾಸ (ನನ್ನ ತಂದೆ), ಕೃಷ್ಣಸ್ವಾಮಿ (ನನ್ನ ಹೆಸರು). ಇವುಗಳ ಇಂಗ್ಲಿಷ್ ಮೊದಲಕ್ಷರಗಳಿಂದಾದ ಒಂದು ಸಂಯುಕ್ತ ಪದ. ನನ್ನ ಪ್ರಯತ್ನದ ಜೊತೆ ನನ್ನ ಹುಟ್ಟೂರಿನ ಪರಿಸರ ಹಾಗೂ ನನ್ನ ಹೆತ್ತವರ ಪ್ರಭಾವಗಳು ಸೇರಿ ನನ್ನನ್ನು ರೂಪಿಸಿವೆ ಎಂಬುದೇ ಇದರ ಅರ್ಥ. 'ಎಚ್' ಎಂಬುದಕ್ಕೆ ಕೊಟ್ಟ ಒತ್ತು, ನನ್ನ ಹುಟ್ಟೂರಿನ ನದಿ ತೊರೆ, ಹೊಲಗದ್ದೆ, ಫಲಪುಷ್ಪಗಳ ಸುಂದರ ಪರಿಸರದ ಅಗಾಧ ಪರಿಣಾಮವನ್ನು ಎತ್ತಿ ತೋರಿಸುತ್ತದೆ. ಕಾದಂಬರಿ, ಕವಿತೆ, ವಿಮರ್ಶೆ, ವ್ಯಕ್ತಿಚಿತ್ರಗಳನ್ನು ಬರೆಯುವಾಗ ಎಚ್ಚೆಸ್ಕೆ ಎಂದು ಬರೆದರೂ, ಮುಂದೆ ಸುದ್ದಿಯ ಹಿನ್ನೆಲೆ, ರಾಜಕೀಯ ವಿದ್ಯಮಾನಗಳ ಬಗ್ಗೆ ಬರೆಯುವಾಗ ಅವುಗಳ ಧಾಟಿಗೊಪ್ಪುವಂತೆ ನಾನು 'ಸಮದರ್ಶಿ'ಯೂ ಆದೆ, 'ವಿಚಾರಪ್ರಿಯ'ನೂ ಆದೆ.

ನನಗೆ ಇವೆಲ್ಲವೂ ಪ್ರಿಯವೇ. ಅವೆಲ್ಲವುಗಳ ಬರಹವೂ ನನಗೆ ಸಂತೋಷವನ್ನು ನೀಡಿದೆ. ಆದರೆ ನಾನು ಕಲಿತುದನ್ನು ಜನಸಾಮಾನ್ಯರಿಗೆ ಹಂಚುವುದರ ಮೂಲಕ ಸಾರ್ಥಕತೆ ಪಡೆಯುವುದು ಆರ್ಥಿಕ ಚಿಂತನೆಯಿಂದ ಮಾತ್ರ. ಜನಪ್ರಿಯತೆಯ ದೃಷ್ಟಿಯಿಂದ ನನಗೆ ಕೀರ್ತಿ ತಂದಿರುವವು ನನ್ನ ವ್ಯಕ್ತಿಚಿತ್ರಗಳು. ಈ ವ್ಯಕ್ತಿಚಿತ್ರ ಚಿಕ್ಕದಾದರೂ, ವ್ಯಕ್ತಿಯ ಯಾವತ್ತೂ ಬದುಕಿನ ಸಮಗ್ರ ಅಧ್ಯಯನ,

ಆಚಾರ-ವಿಚಾರ, ಅನುಭವ, ಅನುಭಾವಗಳ, ಚಿಂತನ-ಮಂಥನಗಳ ಸಮುದ್ರಮಥನವೇ ಅದರ ಹಿನ್ನೆಲೆಯಲ್ಲಿದೆ.

ಉರಿಯುವ ಒಂದು ದೀಪ ಅನೇಕ ದೀಪಗಳನ್ನು ಹೊತ್ತಿಸಬಲ್ಲುದಾದಂತೆ, ಯೋಗ್ಯ ಸಾಧಕನ ಬಗ್ಗೆ ಬರೆದ ವ್ಯಕ್ತಿಚಿತ್ರವೂ ಅನೇಕರ ಬಾಳಿಗೆ ಸ್ಫೂರ್ತಿಯನ್ನೂ, ಬೆಳಕನ್ನೂ ನೀಡಬಲ್ಲದು. ನಿಜ. ಆದರೆ ಆ ಸ್ಫೂರ್ತಿಯ ಚಿಲುಮೆಯಾಗಲೀ, ಬೆಳಕಿನ ಹೊನಲಾಗಲೀ ನಿರಂತರವೂ ಹರಿಯುತ್ತಿರಬೇಕಾದರೆ ಎಲ್ಲ ದೇಶಗಳ, ಎಲ್ಲ ಕ್ಷೇತ್ರಗಳ ಸಾಧಕರ, ಸಾಹಸಿಗರ ತಿಳಿವೂ ಲೇಖಕನಿಗೆ ಇರಬೇಕಾಗುತ್ತದೆ. ಆ ತಿಳಿವನ್ನು ಓದುಗರ ಮನಕ್ಕೆ ಮುಟ್ಟಿಸುವ ಕಲೆಯೂ ಆತನಿಗೆ ಕರಗತವಾಗಿರಬೇಕಾಗುತ್ತದೆ. ಆ ಮಟ್ಟಿಗೆ ನಾನು ಧನ್ಯ. ನನ್ನ ಪಾಲಿಗೊದಗಿದ ಪರಿಸ್ಥಿತಿಗಳೇ ವಿಷಯ ವೈವಿಧ್ಯ, ವ್ಯಾಪಕ ತಿಳಿವು, ನಿತ್ಯನೂತನ ನಿರೂಪಣೆ ಇವುಗಳ ಸಮನ್ವಯ ಸಮತೋಲನಗಳ ಪಾಠವನ್ನು ನನಗೆ ಕಲಿಸಿವೆ.

ಬೆಂಗಳೂರಿನಲ್ಲಿದ್ದಾಗ ಜಾಣ ತರಗತಿಗೆ ಪಾಠ ಹೇಳಲು ಬರುತ್ತಿದ್ದ ಕನ್ನಡದ ಅತಿರಥಮಹಾರಥರ ಸಂಪರ್ಕ ಅಲ್ಲದೆ, ಕನ್ನಡ ಸಾಹಿತ್ಯ ಪರಿಷತ್ತಿಗೆ ಬರುತ್ತಿದ್ದ ಡಿ.ವಿ.ಜಿ., ಬೆಳ್ಳಾವೆ ವೆಂಕಟನಾರಾಯಣಪ್ಪ ಮೊದಲಾದ ಧೀಮಂತರನ್ನು ಹತ್ತಿರದಿಂದ ಕಂಡು ಮಾತನಾಡುವ ಸದವಕಾಶವೂ ನನಗೆ ದೊರೆತಿತ್ತು. ಒಂದೊಂದು ಕ್ಷೇತ್ರದಲ್ಲಿ ಅಗಾಧ ಪಾಂಡಿತ್ಯ ಹೊಂದಿ ಸಾಹಿತ್ಯ ಶಿಖರಗಳಂತಿದ್ದ ಅವರ ಒಡನಾಟ ನನ್ನ ಅಂತಃಸತ್ವವನ್ನು ಉದ್ದೀಪನಗೊಳಿಸಿತು- ನನ್ನ ವ್ಯಾಸಂಗಕ್ಕೆ ಆಳ ಪ್ರಾಪ್ತವಾಗುವಂತೆ ಮಾಡಿತು. ಅದೇ ವೇಳೆಗೆ ನಾನು ಸೇರಿದ್ದ ಶ್ರೀ ರಾಮಕೃಷ್ಣ ವಿದ್ಯಾರ್ಥಿ ನಿಲಯದಲ್ಲಿ ನನ್ನ ಓರಗೆಯವರಾಗಿದ್ದ, ವಿವಿಧ ವಿಚಾರಗಳಲ್ಲಿ ವ್ಯಾಸಂಗ ಮಾಡುತ್ತಿದ್ದ ಪ್ರತಿಭಾವಂತ ವಿದ್ಯಾರ್ಥಿಗಳ ಸ್ನೇಹ-ಸಂಪರ್ಕ ನನ್ನ ವ್ಯಾಸಂಗಕ್ಕೆ ಮತ್ತೊಂದು ಆಯಾಮವನ್ನು ಒದಗಿಸಿತು. ನನ್ನ ವ್ಯಾಸಂಗ ವಿಶಾಲವಾಗುವಂತೆ ಮಾಡಿತು. ಸ್ವಾತಂತ್ರ್ಯ ಹೋರಾಟದ ಆ ದಿನಗಳಲ್ಲಿ ಗಾಂಧಿಯವರ ಜೀವನ ವಿಚಾರಧಾರೆಗಳಿಂದಲೂ ನಾನು ಪ್ರಭಾವಿತನಾದೆ. ಶ್ರೀ ರಾಮಕೃಷ್ಣ ವಿವೇಕಾನಂದ ಸಾಹಿತ್ಯವೂ ನನ್ನನ್ನು ಕಚ್ಚಿನ ಕಲಿಯಾಗುವಂತೆ ಪ್ರೇರೇಪಿಸಿತು. ಪರಿಣಾಮವಾಗಿ ಎಲ್.ಕಾಂ.ನಲ್ಲಿ ನಾನು ಅತ್ಯುನ್ನತ ಮಟ್ಟದಲ್ಲಿ ತೇರ್ಗಡೆಯಾಗುವಂತಾಯಿತು.

ಮುಂದೆ ಬಿ.ಕಾಂ. ತರಗತಿಗೆ ಸೇರುವ ಇಚ್ಛೆಯೇನೋ ಇತ್ತು. ಆದರೆ ಅದೇ ವೇಳೆಗೆ ನನ್ನ ಮದುವೆಯೂ ಆಗಿ ನನ್ನ ಹೊಣೆಯೂ ಹೆಚ್ಚಿತು. ಹಾಗಾಗಿ ಕೆಲಸ ಯಾಚಿಸಿ 'ದೇಶಬಂಧು' ಪತ್ರಿಕೆಯ ಬಿ.ಎಸ್. ವೆಂಕಟರಾಂ ಅವರನ್ನು ಸಂಪರ್ಕಿಸಿದೆ. ಕೆಲಸ ಸಿಕ್ಕಿತು. ಅವರು ಬಯಸಿದ್ದನ್ನು- ಕಥೆಯನ್ನೋ, ವಿಮರ್ಶೆಯನ್ನೋ ಲೇಖನವನ್ನೋ- ಅದು ಸಾಹಿತ್ಯಕ್ಕೆ ಸಂಬಂಧಿಸಿದ್ದಿರಲಿ, ವಿಜ್ಞಾನ, ಅರ್ಥಶಾಸ್ತ್ರ, ರಾಜಕೀಯಕ್ಕೆ ಸಂಬಂಧಿಸಿದ್ದೇ ಆಗಿರಲಿ-ನಾನು ಬರೆದುಕೊಡಬೇಕಾಗಿತ್ತು. ಇದು ನನ್ನ ಜ್ಞಾನದ ಸೀಮೆ ವಿಸ್ತರಿಸಲು ಪಂಥಾಹ್ವಾನವಾಯಿತು. ಒಮ್ಮೆ ಆ ಪತ್ರಿಕೆಗೆ , ನಿಯಮಿತವಾಗಿ ಬರೆದು ಕೊಡುವವರಿಂದ ವಾರ ಭವಿಷ್ಯ ಬಾರದಾಗ, ನಾನು ಆ ವಾರದ ಮಟ್ಟಿಗೆ 'ಭವಿಷ್ಯಕಾರ'ನಾಗಬೇಕಾಗಿಯೂ ಬಂದಿತು.

ಇದೇ ವೇಳೆಗೆ ತಿ.ತಾ. ಶರ್ಮ ಅವರು ತಮ್ಮ 'ವಿಶ್ವ ಕರ್ನಾಟಕ' ಪತ್ರಿಕೆಗೆ ಬರುತ್ತಿದ್ದ ಎಲ್ಲ ಬಗೆಯ ಪುಸ್ತಕಗಳನ್ನು ಓದಿ ವಿಮರ್ಶೆ ಬರೆಯುವ ಕೆಲಸವನ್ನು ನನಗೊಪ್ಪಿಸಿದರು. ಬಗೆಬಗೆಯ ಗ್ರಂಥಗಳ ಅಧ್ಯಯನದ ಯೋಗ ನನಗೆ ಪ್ರಾಪ್ತವಾಯಿತು. ಹೊಟ್ಟೆಪಾಡಿಗಾಗಿ ಈ ಅಧ್ಯಯನದ ಜೊತೆ ನಾನಂದು ಅಧ್ಯಾಪನಕ್ಕೂ ತೊಡಗಿದೆ. ನ್ಯಾಶನಲ್ ಹೈಸ್ಕೂಲು, ಬೆಂಗಳೂರು ಹೈಸ್ಕೂಲುಗಳಲ್ಲಿ ಅರೆಕಾಲಿಕ ಅಧ್ಯಾಪಕನಾಗಿ ಕಾರ್ಯ ನಿರ್ವಹಿಸಿದೆ. ಅರೆಕಾಲಿಕ ಅಧ್ಯಾಪಕನಾದರೂ ವಿದ್ಯಾರ್ಥಿಗಳ ಅಥವಾ ಬೇರೊಬ್ಬರ ಮನಕ್ಕೆ ಮುಟ್ಟುವಂಥ ಭಾಷೆ ಹೇಗಿರಬೇಕೆಂಬ ಪೂರ್ಣ ಅರಿವನ್ನದು ನನ್ನಲ್ಲಿ ಉಂಟುಮಾಡಿತೆಂದೇ ಹೇಳಬೇಕು. ಈ ಅಧ್ಯಯನ-ಅಧ್ಯಾಪನಗಳು ನನ್ನ ಬರೆಹಕ್ಕೆ ಸಾರನೀರುಗಳಾದವು. ಬೋಧನ, ಚಿಂತನೆಗಳ ಅನುಭವದ ಮೂಸೆಯಲ್ಲಿ ಅವು ಪುಟಗೊಂಡು ಪ್ರಕಟವಾದವು. ಅಂತೂ ಆ ದಿನಗಳಲ್ಲಿ ನಾನು ಬೆಳಗ್ಗೆ ವಿದ್ಯಾರ್ಥಿ, ಮಧ್ಯಾಹ್ನ ಅಧ್ಯಾಪಕ, ರಾತ್ರಿ ಪತ್ರಕರ್ತನಾಗಿರುತ್ತಿದ್ದೆ. ಜೀವನದ ಈ ಹೋರಾಟ ನನ್ನ ಅಂತರಂಗ ಸಂಸ್ಕರಣಗೈದು ನನ್ನ ವ್ಯಕ್ತಿತ್ವ ವಿಕಸನಕ್ಕೆಡೆಮಾಡಿತು. ಅದರಿಂದಾಗಿ ಬಿ.ಕಾಂ.ನಲ್ಲಿ ಉನ್ನತ ಸ್ಥಾನದಲ್ಲಿ ನಾನು

# ನುಡಿಚಿತ್ರಕ್ಕೊಂದು ನಿದರ್ಶನ

## ಭಾರತದ ಶ್ರೀಸಾಮಾನ್ಯ

ಇದು ಶ್ರೀಸಾಮಾನ್ಯನ ಯುಗವಂತೆ. ಶ್ರೀಸಾಮಾನ್ಯನ ಅಭ್ಯುದಯವೇ ಎಲ್ಲರ ಪರಮೋದ್ದೇಶವಂತೆ.

ನಮ್ಮ ಪ್ರಧಾನಿಗಳೂ ಶ್ರೀಸಾಮಾನ್ಯರೇ ಅಂತೆ. ಅವರು ಭಾರತದ ಬಹುಸಂಖ್ಯಾತರ ಖಾಸಾ ಪ್ರತಿನಿಧಿಯಂತೆ. ಅಸಾಧಾರಣ ಪ್ರತಿಭೆಯೇನೂ ತಮ್ಮಲ್ಲಿಲ್ಲವೆಂಬುದು ಅವರ ಮಾತಿನ ಪಲ್ಲವಿಯಂತೆ.

ಶ್ರೀಸಾಮಾನ್ಯನೇ ಇಂದು ರಾಷ್ಟ್ರದ ಸಾರ್ವಭೌಮ. ಪ್ರಜೆಯೇ ಪ್ರತ್ಯಕ್ಷ ದೇವತೆ. ಆಳುವವನೂ ಶ್ರೀಸಾಮಾನ್ಯನ ಆಳೇ. ಎಲ್ಲ ಕಾರ್ಯವೂ ಅವನಿಗಾಗಿ. ಅವನ ಚೋಟು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ.

ಹಳ್ಳಿಯಿಂದ ದಿಲ್ಲಿವರೆಗೆ ಸಾಲಾಗಿ ನಿಂತಿದೆ- ಶ್ರೀಸಾಮಾನ್ಯನ ಸೇವಕರ ತಂಡ. ಅವನ ಕೃಪಾಕಟಾಕ್ಷದಿಂದ ಇವರೆಲ್ಲರ ಸಂಪ್ರೀತಿ. ಅವನ ವೋಟಿನ ಚೀಟಿಯ ಮೇಲೆ ಇವರ ಕಣ್ಣು, ಅದನ್ನು ಲಪಟಾಯಿಸಲು ಎಲ್ಲ ತಂತ್ರ. ಕೊಟ್ಟವನಿಗೆ ಕೊಟ್ಟದ್ದರ ಬೆಲೆಯೇ ಗೊತ್ತಿಲ್ಲ. ಮರ ಕಡಿಯುವವನ ಕೊಡಲಿಯ ಕಾವಿಗೆ ಕಾಡಿನ ಮರದಿಂದಲೇ ಕೊಂಬೆಯ ದಾನ. 'ಕೊಟ್ಟವನು ಕೋಡಂಗಿ; ಇಸುಕೊಂಡವನು ಈರಭದ್ರ.'

ಹಳ್ಳಿಯ ಪುಢಾರಿಗೂ ದಿಲ್ಲಿಯ ನೇತಾರನಿಗೂ ಇವನೇ ಪರದೈವ. ಎಲ್ಲ ದಾನಗಳೂ, ಎಲ್ಲ ಧರ್ಮಗಳೂ, ಎಲ್ಲ ಕರ್ಮಗಳೂ 'ಇಲ್ಲಿಗೇ- ಕೊನೆಗಿಲ್ಲಿಗೇ !' ಇವನ ಬಳಿಗೇ !

ರಾಷ್ಟ್ರ, ಸಂವಿಧಾನ ಇವನದು, ಇವನಿಗಾಗಿ; ಇವನೇ ಇವನಿಗೇ ಕೊಟ್ಟುಕೊಂಡದ್ದು. ಸಮಾನ ಹಕ್ಕು, ಸಮಾನ ಬಾಧ್ಯತೆ, ಸಮಾನ ಅವಕಾಶ ಸಂಪತ್ತು. ಸಾಮಾನ್ಯನಿಗೆ ಸರ್ವ ಸ್ವಾತಂತ್ರ್ಯ. ಅವನ ಮೂಲಭೂತ ಹಕ್ಕಿನ ರಕ್ಷಣೆಗಾಗಿಯೇ ಸರಕಾರದ ಅಚ್ಚುಕಟ್ಟು. ನವಿರಾದ ನೀರ್ಗುಳ್ಳೆಯನ್ನು ಕಾಪಿಡಲು ಉಕ್ಕಿನ ಚೌಕಟ್ಟು. ಬೆದರುಗಣ್ಣಿನ ಚಿಗರೆಯ ಕ್ಷೇಮ ಸಾಧನೆಗೆ ಠಾಣಾವ ಪೊಲೀಸ; ಕೋರ್ಟು ಕಚೇರಿ; ಸೈನ್ಯ; ಸರ್ವಸ್ವ.

ಐದು ವರ್ಷಕ್ಕೊಮ್ಮೆ ನಾಡಿನ ನಾಯಕರೆಲ್ಲ ಬರುತ್ತಾರೆ ಇವನ ಬಳಿಗೆ. 'ಕೊಟ್ಟ ಬುತ್ತಿ ಬರಿದಾಯಿತು. ಮತ್ತೆ ಇಡಿ, ಓಟಿನ ತತ್ತಿ'.

ಯಥಾಪ್ರಕಾರ ಮುಂದುವರೆಯುತ್ತದೆ- ಶ್ರೀಸಾಮಾನ್ಯನ ದಿನದಿನದ ದುಡಿತ. ರಾಮರಾಜ್ಯ ಬಂದರೂ ತಪ್ಪದು ರಾಗಿ ಬೀಸುವ ತುಡಿತ.

ಪಂಚವಾರ್ಷಿಕ ಯೋಜನೆಯೂ ಕೂಡ ಶ್ರೀಸಾಮಾನ್ಯನಿಗಾಗಿಯೇ. ಆದ್ದರಿಂದ ಅವನಿಗಾಗಿ ಅವನೇ ಈಗ, ಇನ್ನಷ್ಟು ಶ್ರಮಿಸಬೇಕು. ಸಿಗದಿರುವುದನ್ನು ಆಶಿಸದಿರಬೇಕು. ಸಿಕ್ಕದ್ದನ್ನು ಬಿಡಬೇಕು. ಬಿಟ್ಟದ್ದನ್ನು ಕೊಡಬೇಕು. ಬಡವಾದ ಒಡಲನ್ನು ಇನ್ನಷ್ಟು ಕೃಶಿಸಬೇಕು. ಭವಿಷ್ಯಕ್ಕಾಗಿ ತ್ಯಾಗ ಮಾಡಬೇಕು.

ಯಾವುದೋ- ಈ ಭವಿಷ್ಯ ! ಕಣ್ಣಿಗೆ ಕಂಡೂ ಕೈಗೆ ಎಂದೂ ಎಟುಕದ ಭವಿಷ್ಯ! ಅವನಿಗಾಗಿ ಏನು ಮಾಡಿದೆ, ಈ ಭವಿಷ್ಯ? ಅದಕ್ಕಾಗಿ ಇವನಿಗೇಕೆ ಉಪವಾಸ, ವನವಾಸ ?

ಆದರೆ ಈ ಪ್ರಶ್ನೆಗೆ ಸಿಗುವುದಿಲ್ಲ ಉತ್ತರ. ಅವನಿಗೆ ಅವನೇ ಹೊಣೆ. ರಾಬಿನ್ಸನ್ ಕ್ರೂಸೋ ತೆರ.

ಅಂತೂ ಎಲ್ಲರೂ ಹೇಳುವರು ಶ್ರೀಸಾಮಾನ್ಯನ ಹೆಸರು. ಅವನಿಗಾಗಿ ಸುಲಿಯುವರು ಅವನ ತೊಗಲನ್ನೇ. ಅವನ ತುಪ್ಪಟ ತರಿದು ತಮಗಾಗಿ ಮಾಡಿಕೊಳ್ಳುವರು ಬೆಚ್ಚನೆಯ ಅಂಗಿ; ಊದುವರು ಅವನ ಪುಂಗಿ.

ಶ್ರೀಸಾಮಾನ್ಯನೂ ಸಾಮಾನ್ಯನೇನಲ್ಲ. ಸುಲಿಗೆದಾರರ ಮಾತಿನಲ್ಲಿ ಅವನಿಗೆ ಕುರುಡು ಕಾಸಿನ ಬೆಲೆಯೂ ಇಲ್ಲ. ದಿನಬೆಳಗಾದರೆ ಮಾತಿನ ಮಳೆಗರೆಯುವ ಪುಢಾರಿಗಳಲ್ಲಿ ಅವನಿಗೆ ಇನಿತೂ ಗೌರವವಿಲ್ಲ.

ಮನಸ್ಸು ಮಾಡಿದರೆ ಇವನೂ ಅವರಂತೆ ಪ್ರತಿಷ್ಠೆಯ ತೆಂಗಿನ ಮರ ಏರಬಲ್ಲ. ಮಂತ್ರಿ, ಅಧ್ಯಕ್ಷ ಏನೂ ಆಗಬಲ್ಲ.

ಆದರೆ ಇವನು ನಂಬಲೊಲ್ಲ. ಎಲ್ಲವನ್ನೂ ಅಲ್ಲಗಳೆಯುವುದೇ ಇವನ ಹವ್ಯಾಸ, ಹಂಬಲ.

ಭಾರತದ ಶ್ರೀಸಾಮಾನ್ಯನಿಗೆ ಎಲ್ಲಿಯೂ ನೆಮ್ಮದಿಯಿಲ್ಲ. ಅವನದು ಯಾವುದನ್ನೂ ಒಪ್ಪದ ಜಾಯಮಾನ. ಬ್ರಿಟಿಷರು ಆಳುತ್ತಿದ್ದಾಗ ಅವರಲ್ಲಿ ಇವನ ವಿರೋಧ. ಕಾಂಗ್ರೆಸ್ಸಿಗರ ಆಡಳಿತ ಬಂದ ಮೇಲೆ, ಬ್ರಿಟಿಷರೇ ಇದ್ದಿದ್ದರೆ ಚೆನ್ನಿತ್ತೇನೋ ಎಂಬ ಚಿಂತೆ ಅನುಗಾಲ. ಬೇರೊಂದು ಪಕ್ಷವೇ ಏಕೆ ಅಧಿಕಾರ ನಡೆಸಬಾರದು- ಎಂದೂ ಚಪಲ. ಆದರೆ ಓಟಿನ ಪೆಟ್ಟಿಗೆಯ ಮುಂದೆ ಮನ ಚಂಚಲ.

ಹಿಂದಿ ಭಾಷೆಯ ಅಧಿಕಾರ ಇಲ್ಲದಾಗ ಇವನು ಅದನ್ನು ಕಲಿಯಲು ಮುನ್ನುಗ್ಗುವ. ಅದಕ್ಕೇ ಮಣೆ ಹಾಕಿದಾಗ ಮನಸಾರೆ ವಿರೋಧಿಸುವ, ಇಂಗ್ಲಿಷರು ಇದ್ದಾಗ ಪರಭಾಷೆ ಬೇಡೆಂದು ಬಡಕೊಳ್ಳುವ, ಅವರು ಹೋದ ಮೇಲೆ ಆ ಭಾಷೆಗೇ ಬಾಗಿ ಕೈ ಮುಗಿಯುವ, ಪರಕೀಯರನ್ನು ದಿಡ್ಡಿ ಬಾಗಿಲಿನಿಂದ ದಬ್ಬುವ, ಅವರನ್ನೇ ಹಿತ್ತಲ ಬಾಗಿಲಿನಿಂದ ಒಳಕರೆದು ಕೂರಿಸುವ.

ಹಳೆಯ ಸಂಸ್ಕೃತಿಯ ಮಾತು ಮಾರುದ್ದ ಆಡುವ, ಪಾಶ್ಚಾತ್ಯರ ಮೇಜವಾನಿಗೆ ಮಾರುಹೋಗುವ, ಕಾರಿಗರ ಶ್ರೀಮಂತಿಕೆಯನ್ನು ಕಂಡು ಕೆಂಡ ಕಾರುವ. ತಾನೇ ಅದರಲ್ಲಿ ಕೂತಾಗ ಹಾರುವ ಧೂಳಿಗೆ ಬೆನ್ನು ತೋರಿಸುವ.

ಶ್ರೀಸಾಮಾನ್ಯನ ಮನಸ್ಸೂ ವಿಚಿತ್ರ. ಅವನ ಆಚಾರ-ವಿಚಾರ ಬಹು ಸಂಕೀರ್ಣ. ತನ್ನ ವ್ಯಕ್ತಿತ್ವವನ್ನು ಕಾಯ್ದುಕೊಳ್ಳಲು ಅವನ ಆಸಕ್ತಿ. ಆದರೆ ಗುಂಪಿನಲ್ಲಿ ಸೇರಿದಾಗ ಅವನು ಗೋವಿಂದ. ಯೋಗಿಗೂ, ಕಮಂಗಿಗೂ ಏಕನಿಷ್ಠೆ. ಹಸಿಯೂ, ಬಿಸಿಯೂ ಸಮಾನ. ಅನೀತಿಯೆಂದರೆ ಅಸಹ್ಯ. ಆದರ ಸೇವೆಯಲ್ಲೇ ಆಸಕ್ತ. ಆದರ್ಶದ ಆರಾಧಕ. ಆದರ್ಶದ ಹೆಸರಿನಲ್ಲೇ ನಾಯಕರು ನಡೆಸುವ ದೇಶಕ್ಷೋಭೆಯನ್ನು ಕಂಡು ಕನವರಿಸುವವ. ಇತರರು ಆದರ್ಶದ ಕುದುರೆಯ ಬೆನ್ನೇರಿ ಸ್ವಾರ್ಥದ ಫಲ ಎಟುಕಿಸಿಕೊಳ್ಳುವುದನ್ನು ನೋಡಿ ಸಂತಾಪ. ದೇಶಪ್ರೇಮದ ಹೆಸರಿನಲ್ಲಿ ಹಣದ ಕೊಳ್ಳೆ ಹೊಡೆಯುವವರನ್ನು ಕಂಡು ಅವನಿಗೆ ತಾತ್ಸಾರ. ದೇಶಪ್ರೇಮದ ಡಂಬಿನ ಬಕುತರಿಗಿಂತ, ಹಣವನ್ನೇ ನಂಬಿ ನಡೆಯುವವರೇ ವಾಸಿಯೆಂದು ಅವನ ಅಭಿಪ್ರಾಯ.

ಇಂದು ನಡೆಯುತ್ತಿರುವ ವೈಭವ ಅಟ್ಟಹಾಸ ಕಾರುಬಾರುಗಳೆಲ್ಲವೂ ಶ್ರೀಸಾಮಾನ್ಯನ ಹೆಸರಿನಲ್ಲಿ. ಅವನಿಗಾಗಿ ಎಲ್ಲ ತರಾತುರಿ.

ಉತ್ತಮವಾಗಿಲ್ಲವೆ ಈಗ- ಅವನ ಜೀವನ ವೈಖರಿ ?

ಹಿಂದೆ ಒಂದು ರಾಜ್ಯಕ್ಕೆ ನಾಲ್ವರು ಮಂತ್ರಿಗಳಿದ್ದಲ್ಲಿ ಈಗ ಇಪ್ಪತ್ತು ಮಂತ್ರಿಗಿರಿ.

ಸಿಕ್ಕಲಿಲ್ಲವೆ, ಶ್ರೀಸಾಮಾನ್ಯರಿಗಿಷ್ಟೊಂದು ನೌಕರಿ ?

ಶ್ರೀಸಾಮಾನ್ಯನ ಸಂಸಾರ ಬೆಳೆಯುತ್ತಿದೆ- ಅಖಂಡ. ವರ್ಷಕ್ಕೆ ಎಂಬತ್ತು ಲಕ್ಷ. ಸಾಮಗ್ರಿಯ ಉತ್ಪಾದನೆಗಿಂತ ಸಂಸಾರದ ಸಂಖ್ಯೆಯ ಸಮೃದ್ಧಿ.

ಬೆಲೆಯಲ್ಲೂ ಸಮೃದ್ಧಿ. ಸಂಬಳದ ಹಣದಲ್ಲೂ ಸಮೃದ್ಧಿ. ನೌಕರರೆಲ್ಲರಿಗೂ ಈಗ ಸಂಚುರಿ ಕ್ಲಬ್ಬಿನ ಸದಸ್ಯತ್ವ ಪಡೆಯುವ ಅರ್ಹತೆ. ಎಡೆಬಿಡದೆ ಬೆಳೆಯುತ್ತಿರುವ ಹಣದ ಶನಿ ಸಂತಾನ. ಅದರದೇ ಆಡಳಿತ ವಿಧಾನ.

ಗಾಂಧೀಜಿ ಹೇಳಿದ್ದರು- ಬಹು ಹಿಂದೆ: ಸಾಮಾನ್ಯನಿಗೆ ಸುಖ ದೊರಕಿದಾಗ ಸರ್ವೋದಯ, ಆ ಹಾದಿಯಲ್ಲೇ ನಡೆಯುತ್ತಿದ್ದಾನಲ್ಲವೆ- ಶ್ರೀಸಾಮಾನ್ಯ ?

ಅಂದ ಹಾಗೆ, ಶ್ರೀಸಾಮಾನ್ಯ ಎಂಬುವನು ಯಾರು ?

(ಆಗಸ್ಟ್ ೧೫, ೧೯೭೫)

ತೇರ್ಗಡೆಯಾದೆ. ಸ್ವತಂತ್ರ ಅಭಿವ್ಯಕ್ತಿ ಮಾಧ್ಯಮದಲ್ಲಿ ನಾನು ಪಳಗಿದುದರಿಂದಲೇ ಮುಂದೆ ಬನುಮಯ್ಯ ಕಾಲೇಜಿನಲ್ಲಿ ಅಧ್ಯಾಪಕನಾಗಿರುವಾಗಲೇ ಅರ್ಥಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನೂ ಗಳಿಸಲು ಸಮರ್ಥನಾದೆ. ಅಲ್ಲಿ ಪ್ರಾಧ್ಯಾಪಕನಾಗಿದ್ದಾಗಲೂ, ಮುಂದೆ ಅದನ್ನು ಬಿಟ್ಟು ಕನ್ನಡ ವಿಶ್ವಕೋಶದ ಮಾನವಿಕ ಸಂಪಾದಕನಾದಾಗಲೂ ನನ್ನ ತಿಳಿವಿನ ಪರಿಧಿ ವಿಸ್ತರಿಸಿಕೊಳ್ಳಲು ನನಗೆ ವಿಪುಲ ಅವಕಾಶಗಳು ದೊರತವು.

**ಭಾಷೆ-ವಿನ್ಯಾಸ....**

ಮುಂಚಿನಿಂದಲೂ ನಾನು ಕನ್ನಡದಲ್ಲೇ ಯೋಚಿಸಿ ಕನ್ನಡದಲ್ಲೇ ಬರೆಯುತ್ತ ಬಂದವನು. ಸಿದ್ದವನಹಳ್ಳಿ ಕೃಷ್ಣಶರ್ಮರ ಸಣ್ಣ ಸಣ್ಣ ವಾಕ್ಯಗಳ ಶೈಲಿಯಿಂದ ಪ್ರಭಾವಿತನಾಗಿದ್ದ ನಾನೂ ಅದೇ ಪ್ರಯೋಗ ಮುಂದುವರಿಸಿದೆ. ಗದ್ಯದಲ್ಲೂ ಒಂದು ಲಯವಿರುವಂತೆ ನೋಡಿಕೊಂಡೆ. ಚಿಂತನ ಲಹರಿಯನ್ನು ಭಾವನಾ ವಿಲಾಸದೊಂದಿಗೆ ಮೇಳೈಸಿದೆ. ಬಿಡಿಬಿಡಿ ಶಬ್ದಗಳಲ್ಲೇ ಸನ್ನಿವೇಶದ ಇಡಿ ಇಡಿ ಚಿತ್ರವನ್ನು ಬಿಂಬಿಸಲು ಪ್ರಯತ್ನಿಸಿದೆ. 'ವ್ಯಕ್ತಿಚಿತ್ರ' ಜೀವನಚರಿತೆ ಆಗದಂತೆ ಆ ವ್ಯಕ್ತಿ ವಿಚಾರಗಳನ್ನೆಲ್ಲ ಸಂಗ್ರಹಿಸಿದರೂ ಅವುಗಳ ವೈಶಿಷ್ಟ್ಯದ ಎಳೆಗಳಿಗೆ ಮಾತ್ರ ಒತ್ತು ಕೊಟ್ಟೆ. ನನ್ನ ಈ ಪ್ರಯತ್ನ ಜನಸಾಮಾನ್ಯರಂತೆಯೇ ಆಚಾರ್ಯ ಬಿ.ಎಂ. ಶ್ರೀಯವರ ಮೆಚ್ಚುಗೆಗೂ ಪಾತ್ರವಾಯಿತು. ಅವರು ಅಧ್ಯಕ್ಷರಾಗಿದ್ದ ಒಂದು ಸಭೆಯಲ್ಲಿ ಬೆಳ್ಳಾವೆ ವೆಂಕಟನಾರಾಯಣಪ್ಪ ಅವರ ಬಗ್ಗೆ ನಾನು ಬರೆದ ವ್ಯಕ್ತಿಚಿತ್ರವನ್ನು ಓದುವ ಯೋಗ ನನಗೊದಗಿತ್ತು. ಅದನ್ನು ಕೇಳಿದ ಬಿ.ಎಂ. ಶ್ರೀ.ಯವರು ವೇದಿಕೆಯಿಂದೆದ್ದು ಬಂದು ನನ್ನ ಬೆನ್ನುತಟ್ಟಿ 'ಕನ್ನಡಕ್ಕಾಗಿ ಏನಾದರೂ ಮಾಡು' ಎಂದಿದ್ದರು. ಒಂದು ದೃಷ್ಟಿಯಲ್ಲಿ ಅದು ನನಗೆ ಕನ್ನಡದ ದೀಕ್ಷೆ ಕೊಡಿಸಿತು. ಅನೇಕರ ಬಾಳಿನ ಅಧ್ಯಯನದಿಂದ ನನ್ನ ಬಾಳಿಗೂ ಬೆಳಕು ಬರುವಂತಾಗಿದೆ. ನನ್ನ ಬಾಳಿನಲ್ಲಿ ನಾನೇನು ಮಾಡಬೇಕು, ಮಾಡಬಾರದು ಎಂಬುದನ್ನದು ನನಗೆ ಮೌನವಾಗಿ ಬೋಧಿಸಿದೆ. ಅನ್ಯಾಯದೊಂದಿಗೆ ರಾಜಿ ಮಾಡಿಕೊಳ್ಳದ ಸತ್ಯನಿಷ್ಠುರತೆ ಆ ಅಧ್ಯಯನದ ಫಲಗಳಲ್ಲೊಂದು. ಈ ಅಧ್ಯಯನದಿಂದಾಗಿಯೇ ನನ್ನ ಜೀವನೋಲ್ಲಾಸ ಮಿಡಿಯುವಂತಾಗಿದೆ.

★ ★ ★

ಎಚ್ಚೆಸ್ಕೆಯವರ ಸಾಧನೆಯ ಹಿಂದೆ ಅವರ ಸಹಧರ್ಮಿಣಿ' ಚಂಪಕಲಕ್ಷ್ಮಿಯವರ ತ್ಯಾಗ, ಸೇವೆ, ಸಹನೆ, ಸಹಕಾರಗಳ ಬಲವಿದೆ. ಆರತಿಗೊಂದು, ಕೀರುತಿಗೊಂದು- ಹೀಗೆ ಚಿಕ್ಕ ಚೊಕ್ಕ ಸಂಸಾರ ಅವರದು. ಬರೆಹದಲ್ಲಿ ಚಿಕ್ಕ ಚೊಕ್ಕ ವಾಕ್ಯಗಳಂತೆಯೇ ಬದುಕಿನಲ್ಲಿಯೂ ಎಚ್ಚೆಸ್ಕೆ ಕರಾರುವಾಕ್ಕಾದ ಶೈಲಿ ರೂಢಿಸಿಕೊಂಡವರು. ●

## ಮಾತೃಭಕ್ತಿ

**ಸ**ಮರೇಶ್ ಬಸು ಬಂಗಾಳದ ಸುಪ್ರಸಿದ್ಧ ಕಾದಂಬರಿಗಾರರು. ಅವರು ಚಿಕ್ಕವರಾಗಿದ್ದಾಗ ಕುಂಭ ಮೇಳಕ್ಕೆ ಹೋಗಿದ್ದರು. ಅಲ್ಲಿ ಅವರು ನೋಡಿದ ಒಂದು ದೃಶ್ಯ ಅವರ ಹೃದಯವನ್ನು ಕಲಕಿ ಬಿಟ್ಟಿತು. ಒಬ್ಬ ವೃದ್ಧ ತನ್ನ ಹಣ್ಣು ಹಣ್ಣು ಮುದುಕಿಯಾದ ತಾಯಿಯನ್ನು ಹೆಗಲ ಮೇಲೆ ಕೂರಿಸಿಕೊಂಡು ಕುಂಭಮೇಳಕ್ಕೆ ಹೋಗುತ್ತಿದ್ದ. ನಡೆದೂ ನಡೆದೂ ಅವನ ಪಾದಗಳಿಂದ ರಕ್ತ ಸುರಿಯತೊಡಗಿತ್ತು. ಚಿಕ್ಕವನಾಗಿದ್ದಾಗ ತನ್ನ ತಾಯಿಯನ್ನು ಕುಂಭಮೇಳಕ್ಕೆ ಕರೆದುಕೊಂಡು ಹೋಗುತ್ತನೆಂದು ಮಾತು ಕೊಟ್ಟಿದ್ದನಂತೆ. ಜೀವನದ ಹೋರಾಟದಲ್ಲಿ ಅವನಿಗೆ ಸಾಧ್ಯವಾಗಲೇ ಇಲ್ಲ. ಅವನಿಗೆ ಅರವತ್ತು ವಯಸ್ಸಾದಾಗ ಕಾಲಕೂಡಿ ಬಂತು. ನಮ್ಮ ಕಾಲದ ಈ ಶ್ರವಣ ಕುಮಾರನನ್ನು ನೋಡಿ ದೀರ್ಘ ದಂಡ ನಮಸ್ಕಾರವನ್ನು ಮಾಡಿ, ಅವನ ಕಾಲುಗಳಿಂದ ಒಸರುತ್ತಿದ್ದ ಧೂಳು ಮಿಶ್ರಿತವಾದ ರಕ್ತವನ್ನು ತಮ್ಮ ಹಣೆಗಿಟ್ಟುಕೊಂಡರಂತೆ ಕವಿ ಸಂವೇದನೆಯ ಬಸುಗಳು.

ಸಂಗ್ರಹ: **ಡಿ. ಗುಂಡೂರಾವ್**

ಹರಟೆ

# ಅದ್ಭುತ ಪ್ರಗತಿ!

● ಎಂ. ಡಿ. ಗೋಗೇರಿ

"ಹೌದಲ್ಲರಿ! ದಿನಾಲು ಒಂದು ನಮೂನೆ ಡಿಮ್ಮ ಇರತಿದ್ರು, ಇವತ್ತು ಮುಖದ ಕಳಾನೇ ಬದ್ಲ ಐತಿ," ಎನ್ನುತ್ತಾ ಪಾಟೀಲರು ತಮ್ಮ ಡಬ್ಬಿ ಬಿಚ್ಚಿ ಚಪಾತಿ ಪಲ್ಯ ಹಂಚತೊಡಗಿದರು. ಹಿರೇಮಠ ದೊಡ್ಡಮನಿ ಅವರು ಅನ್ನ ಬಟವಾಡೆ ಮಾಡತೊಡಗಿದರು. ಮಲ್ಲೇಶಪ್ಪ ನಿಧಾನವಾಗಿ ಊಟ ಮಾಡುತ್ತಾ ಗೆಳೆಯರ ಅಭಿಪ್ರಾಯ, ಅನುಮೋದನೆ ಪಡೆಯಬೇಕೆಂದು "ಮಜ್ಜಗಿಯವರ,

**ಮೂರು ಹಸಿ ಧಾನ್ಯಗಳನ್ನು ನಿಮ್ಮ ಹೊಟ್ಟೆ ಅರಗಿಸಿಕೊಳ್ಳಬಲ್ಲದಾದರೆ ಜಗತ್ತಿನ ಜಂಜಡಗಳೆಲ್ಲವನ್ನೂ ನೀವು ದೂರ ಮಾಡಬಲ್ಲಿರಿ....**

ಮಲ್ಲೇಶಪ್ಪ ತನ್ನ ಅಂತರಾಳದಲ್ಲಿ ಗುಪ್ತಗಾಮಿನಿಯಾಗಿ ಹರಿಯುತ್ತಿದ್ದ ಹೊಸ ವಿಚಾರಧಾರೆಯನ್ನು ಇಂದು ಗೆಳೆಯರ ಮುಂದಿಟ್ಟು ಅವರ ಸಲಹೆ ಸೂಚನೆ ಪಡೆದುಕೊಂಡು ಮುಂದಿನ ಕ್ರಮ ಕೈಕೊಳ್ಳಲೇಬೇಕೆಂದು ನಿರ್ಧರಿಸಿ ಮಧ್ಯಾಹ್ನದ ಊಟದ ವೇಳೆಯ ದಾರಿಕಾಯುತ್ತ ಡ್ಯೂಟಿ ಮಾಡಿದ. ಢಣ್ ಎಂದು ಗಂಟೆ ಬಾರಿಸಿದಾಗ ತನ್ನ ಪ್ಲಾನಿಗೆ ಯಶ ದೊರೆಯಿತೆಂದೇ ಭಾವಿಸಿದ. ಸ್ಟಾಫ್ ರೂಮಿನಲ್ಲಿ ಮಲ್ಲೇಶಪ್ಪನ ಸಹಪಾಠಿ ಮಜ್ಜಗಿಯವರು, ಪಾಟೀಲರು, ದೊಡ್ಡಮನಿ, ಹಿರೇಮಠ ಎಲ್ಲರೂ ತಮ್ಮ ತಮ್ಮ ಮನೆಯಲ್ಲಿ ಕಟ್ಟಿ ಕಳಿಸಿದ್ದನ್ನು ಸಾವಕಾಶವಾಗಿ ಬಿಚ್ಚತೊಡಗಿದರು. ಮಲ್ಲೇಶಪ್ಪನ ಮುಖದಲ್ಲಿ ಆನಂದ, ಸ್ಫೂರ್ತಿ ಉಕ್ಕುತ್ತಿರುವುದನ್ನು ಕಂಡ ಮಜ್ಜಗಿಯವರು,

"ಪಾಟೀಲರೆ, ಇಂದೇಕೊ ಮಲ್ಲೇಶಪ್ಪ ಬಹಳ ಹುರುಪು ಇದ್ದಾಂಗ ಕಾಣ್‌ಸ್ತಾರ ನೋಡ್ರಿ," ಅಂದರು.

ನೀವು ಡ್ಯೂಟಿಗೆ ಬರುವಾಗ ನಿಮ್ಮ ಮನ್ಯಾಗ ಕಟ್ಟಿಸಿಕೊಂಡ ಬರ್‍ತೀರಲ್ಲ, ಆವಾಗ ಏನಾದರೂ ತೊಂದರೆಯಾಗ್ತಾವೇನು ?" ಎಂದು ಕೇಳಿಯೇ ಬಿಟ್ಟ.

"ಒಮ್ಮೊಮ್ಮೆ ತ್ರಾಸ ಆಗತೈತಿ, ಗ್ಯಾಸ ತೀರಿರ್‍ತದ, ಆವಾಗ ಸ್ಟೋ ಹಚ್ಚಬೇಕು. ನಮ್ಮ ಮನಿಯವರು ಬೇರೆ ಕೆಲಸದಾಗ ಇದ್ದು ಕಟ್ಟಲಿಕ್ಕೆ ತಡಾ ಆತು ಅಂದ್ರ ನಾನೇ ಕಟ್ಟಿಕೊಂಡು ಬಂದಬಿಡ್ತೀನಿ."

"ಪಾಟೀಲರೆ, ನಿಮ್ಮ ಮನಿಯೊಳಗ ಕಟ್ಟಿಕೊಂಡು ಬರುವಾಗ ಏನಾದರೂ ಸಮಸ್ಯಾ ಆಗ್ತಾವೇನ್ರಿ ?"

"ಮಲ್ಲೇಶಪ್ಪ, ಆಗದೇನ ಮಾಡತ್ತ ? ಚಿಮಣಿ'ಎಣ್ಣಿ ಇಲ್ಲದಾಗ ಕಟಿಗಿ ಒಲಿಹಚ್ಚಬೇಕು. ಇವು ಎಲ್ಲಾ ಇದ್ದರ ಕಾಯಿಪಲ್ಯಾ ಇರೂದಿಲ್ಲಾ. ಗಿರಣಿ'ಗೆ ಹಾಕಿಸದೆ ಇದ್ರ ಹಿಟ್ಟ ತೀರಿರತ್ತ. ಆವಾಗ ತೊಂದರೆಯಾಗಿ ಇದ್ದದ್ದು ಕಟ್ಟಿ ಕಳಿಸಿ ಬಿಡ್ತಾರ. ನಾನೂ ಅದನ್ನs ಕಟ್ಟು ಇದನ್ನs ಕಟ್ಟು ಅಂತಾ

ಕೇಳುದುಲ್ಲಾ."

"ದೊಡ್ಡಮನಿಯುವರ, ನಿಮ್ಮ ಮನಿಯೊಳಗ ಯಾವ ಸಮಸ್ಯೆ ಇದೆ ?"

"ಅಯ್ಯೋ ಮಹಾರಾಯಾ, ನಮ್ಮದೇನು ಹೇಳಬೇಕು ! ಇಬ್ಬರೂ ನೌಕರಿಗೆ ಹೋಗೂದರಿಂದ ಬಹಳ ತ್ರಾಸಾಗತೈತಿ. ಓಣ್ಯಾಗಿನ ಅಂಗಡಿಯಲ್ಲಿ ಸಿಕ್ಕದ್ದೇ ತಂದು ಅವಸರದಿಂದ ಇಬ್ಬರೂ ಕಟ್ಟಿ ಕೊಂಡು ಬಂದಬಿಡ್ತೀವಿ."

"ಹಿರೇಮಠರ, ನೀವು ಬರೇ ಒಂದೇ ನಮೂನಿ ಕಟ್ಟಿಕೊಂಡು ಬರ್ತೀರಲ್ಲ! ಯಾವ ತ್ರಾಸು ಇದೆ ?"

"ಮಲ್ಲೇಶಪ್ಪ, ನಾನು ಒಂದು ತಿಂಗಳತನಕ ಆಗುವಷ್ಟು ದುಡ್ಡು ನನ್ನ ಹೆಂಡತಿ ಕೈಯಾಗ ಕೊಟ್ಟಬಿಡ್ತೀನಿ. ಬೇರೆ ಬೇರೆ ಅಡಿಗಿ ಮಾಡಿ ಕಟ್ಟೋದು ಆಕಿ ಜವಾಬ್ದಾರಿ. ನೀವು ಹೇಳಿದ್ಹಂಗ ಒಂದೇ ತರದ್ದು ಮಾಡಿ ಕಟ್ಟತಾಳ. ಬಹಳ ಮಾಡಿ ದುಡ್ಡು ಉಳಿಸಿಕೊಂಡು ಸೀರೆ ತೊಗೊಳ್ತಾ ಇರಬಹುದು."

ಮಲ್ಲೇಶಪ್ಪನಿಗೆ ಗೆಳೆಯರು ಊಟಕ್ಕಾಗಿ ಪಡುತ್ತಿರುವ ಕಷ್ಟವನ್ನು ಕೇಳಿ ಕರುಳು ಚುರಕ್ ಎಂದಂತಾಯಿತು. ಇದು ತನ್ನೊಬ್ಬನ ಸಮಸ್ಯೆ ಅಲ್ಲ. ಇಡೀ ಭಾರತ ದೇಶದ ಸಮಸ್ಯೆ. ಎಲ್ಲ ವರ್ಗದ ಜನರ ಸಮಸ್ಯೆ. ಅಷ್ಟೇ ಅಲ್ಲ, ವಿಶ್ವದ ಸಮಸ್ಯೆಯೂ ಆಗಿದೆ ಎಂದು ಖಚಿತಪಡಿಸಿಕೊಂಡ. ಮೂರು ವರ್ಷದ ಅಸಹಾಯಕ ಮಕ್ಕಳ ಮುಖವನ್ನು ನೋಡುವಂತೆ ಗೆಳೆಯರ ಮುಖ ನೋಡುತ್ತಾ "ಮಿತ್ರರೆ, ನಾನೊಂದು ವಿಷಯವನ್ನು ಸಂಶೋಧನೆ ಮಾಡಿದ್ದೇನೆ. ಹತ್ತು ವರ್ಷದಿಂದಲೂ ಅದು ನನ್ನ ಮನಸ್ಸಿನಲ್ಲಿ ಕಟೆಯುತ್ತಾ ಇತ್ತು. ಅದನ್ನಿಂದು ತಮ್ಮ ಮುಂದೆ ಇಡುತ್ತೇನೆ. ತಮ್ಮ ತಮ್ಮ ಅನಿಸಿಕೆ ಅಭಿಪ್ರಾಯ ಸಲಹೆ ಸೂಚನೆ ಕೊಟ್ಟರೆ ನಮಗಷ್ಟೇ ಅಲ್ಲ, ಇಡೀ ನಮ್ಮ ಭಾರತಕ್ಕೂ, ವಿಶ್ವಕ್ಕೂ ದೊಡ್ಡ ಪ್ರಯೋಜನವಾಗುತ್ತದೆ."

ಮಲ್ಲೇಶಪ್ಪನ ಮಾತು ಕೇಳಿದ ಗೆಳೆಯರು ಊಟಮಾಡುವುದನ್ನು ಅರ್ಧಕ್ಕೇ ನಿಲ್ಲಿಸಿ ಆಶ್ಚರ್ಯಚಕಿತರಾಗಿ ಒಬ್ಬರ ಮುಖ ಒಬ್ಬರು ನೋಡುತ್ತಾ, "ಹೇಳು ಮಹಾರಾಯಾ, ಅಂಥಾದ್ದೇನು ವಿಶೇಷವಿದೆ. ನಮಗೂ ನಮ್ಮ ಹೆಣ್ಣು ಮಕ್ಕಳಿಗೂ ಒಳಿತಾದರೆ ಯಾರು ಬ್ಯಾಡಂತಾರೆ ?" ಎಂದು ಕುತೂಹಲಿಗಳಾಗಿ ಕಿವಿ ನಿಮಿರಿಸಿ ಕುಳಿತರು.

ಮಲ್ಲೇಶಪ್ಪ ಈ ವರೆಗೂ ತನ್ನ ವಂಶಸ್ಥರು, ತಾಯಿ ತಂದೆಗಳು, ಅಣ್ಣತಮ್ಮಂದಿರು, ಹೆಂಡಿರು-ಮಕ್ಕಳು ಅಡಿಗೆ ಮಾಡುತ್ತಾ, ಮುಸುರೆ ತಿಕ್ಕುತ್ತಾ ಕಷ್ಟಪಡುವದನ್ನು ಕಂಡು ರೋಸಿ ಹೋಗಿದ್ದ. ಲಾಭವಿಲ್ಲದ ವ್ಯವಹಾರದಲ್ಲಿ ಹತ್ತಾರು ವರ್ಷ ದುಡಿದು ದುಡಿದು ಹೈರಾಣಾದ ಬಡವನಂತೆ ಮುಖ ಮಾಡಿ, "ಮಿತ್ರರೆ, ನೀವು ಈವರೆಗೂ ನಿಮಗರಿವಿಲ್ಲದಂತೆ ಅಪಾರ ಕಷ್ಟನಷ್ಟಗಳನ್ನು ಅನುಭವಿಸಿದ್ದೀರಿ. ನಿಮ್ಮ ತಾಯಂದಿರು, ಪತ್ನಿಯರು, ಅಕ್ಕತಂಗಿಯರು ಅಡಿಗೆ ಮಾಡುತ್ತಾ ಪಡಬಾರದ ತಾಪತ್ರಯಪಟ್ಟಿದ್ದಾರೆ. ನಿಮಗಿದು ತಿಳಿದರೂ ಮರೆತು ಮೋಸಹೋಗಿದ್ದೀರಿ. ಈಗ ನಾನು ತಮ್ಮೆಲ್ಲರ ಕಷ್ಟನಷ್ಟಗಳನ್ನು ನೀಗಿಸಲೆಂದೇ ನನ್ನ ಯೋಜನೆಯನ್ನು ಮುಂದಿಡುತ್ತೇನೆ. ಅದು ನಿಮ್ಮ ಒಪ್ಪಿಗೆಯನ್ನು ನಿಶ್ಚಯವಾಗಿ ಪಡೆದೇ ತೀರುತ್ತದೆ. ನಿಮ್ಮ ಒಪ್ಪಿಗೆ ದೊರೆತರೆ ಭಾರತ ಜನತೆಯ ಒಪ್ಪಿಗೆ ದೊರೆತಂತೆಯೇ. ಮುಂದೆ ಇಡೀ ವಿಶ್ವವೇ ನನ್ನ ಯೋಜನೆಗೆ 'ಅಸ್ತು' ಎನ್ನುತ್ತದೆ."

ಮಲ್ಲೇಶಪ್ಪನ ಮಾತು ಕೇಳುತ್ತಾ ಕೇಳುತ್ತ ಮಜ್ಜಗಿಯವರಿಗೆ ತಡೆದುಕೊಳ್ಳಲಾಗಲಿಲ್ಲ. "ಮಲ್ಲೇಶಪ್ಪನವರೆ, ಬೇಗ ಹೇಳಿ, ನಿಮ್ಮ ಯೋಜನೆ ಯಾವುದು ? ನೀವಿಷ್ಟು ಹೇಳುತ್ತೀರೆಂದ ಮೇಲೆ, ಅದು ಅದ್ಭುತ ಸಂಶೋಧನೆ ಇರಲಿಕ್ಕೇ ಬೇಕು. ನಾನು ಇಂದಿನಿಂದಲೇ ನಮ್ಮ ಮನೆಯಲ್ಲಿ ಜಾರಿಗೆ ತಂದುಬಿಡುತ್ತೇನೆ," ಎಂದು ಊಟದ ಡಬ್ಬಿಯನ್ನು ಮಗ್ಗಲಿಗೆ ಸರಿಸಿಬಿಟ್ಟರು. ಮಜ್ಜಗಿಯವರ ನಿರ್ಧಾರವನ್ನು ಕೇಳುತ್ತಲೇ ಪಾಟೀಲ, ದೊಡ್ಡಮನಿ, ಹಿರೇಮಠ ಎಲ್ಲರೂ ಊಟವನ್ನೇ ನಿಲ್ಲಿಸಿ, "ಮಜ್ಜಗಿಯವರು ಮನೆಯಲ್ಲಿ ಬಳಕೆಗೆ ತಂದರೆ ನಾವು ಇಲ್ಲಿಯೇ ಈಗಲೇ ಜಾರಿಯಲ್ಲಿ ತರುತ್ತೇವೆ. ಹೇಳಿ ಮಲ್ಲೇಶಪ್ಪ, ಯಾವ ಸಂಶೋಧನೆ ಅದು ?" ಎನ್ನುತ್ತಾ ಕೇಳಲು ತಯಾರಾದರು.

"ಹೇಳ್ತೀನಿ, ಹೇಳ್ತೀನಿ ಗೆಳೆಯರೆ, ಸಾವಿರಾರು ವರ್ಷವೇ ತಡೆದುಕೊಂಡಿದ್ದೀರಿ. ಈಗ ಸ್ವಲ್ಪ ಸಮಾಧಾನದಿಂದ ತಡೆದು ಕೇಳಿರಿ. ನನ್ನ ಬಂಧು

ಗಳೆ, ನಮ್ಮ ಆರೋಗ್ಯ ಸರಿ ಇರಬೇಕಾದರೆ ನಾವು ಹಸಿದು ತಿನ್ನುತ್ತೇವಷ್ಟೇ.. ?''

ಹಿರೇಮಠ ಕೈಯೆತ್ತಿ ''ಹೌದು, ಹೌದು, ನಾನು ಮಾತ್ರ ಊಟದಲ್ಲಿ ಹಸೀದನ್ನೇ ಹೆಚ್ಚು ತಿನ್ನುತ್ತೇನೆ. ಉದಾಹರಣೆಗೆ ಮೊಳಕೆ ಬಂದ ಮಡಕಿ, ಕಡಲೆ, ಹೆಸರು, ವಟಾಣಿ, ಹಸಿಶೇಂಗಾ, ಹುರಳಿ, ಅಲಸಂದಿ, ತೊಗರಿ,'' ಎಂದು ಹೇಳುತ್ತಲೇ ಮಲ್ಲೇಶಪ್ಪನಿಗೆ ಹೊಸ ಬೆಳಕು ಹರಿದಂತಾಯಿತು.

''ಶಹಬಾಶ್, ನೋಡಿ ಇಷ್ಟು ಕಾಳುಗಳನ್ನು ಹಸಿ ಇದ್ದಾಗಲೇ ಇಲ್ಲವೆ ನೆನೆಹಾಕಿ ಮೊಳಕೆ ಬಂದ ಮೇಲೆ ಇದ್ದಕ್ಕಿದ್ದಂತೆ ತಿನ್ನುತ್ತೇವೆ ಇನ್ನು ಖಾಯಿವಲ್ಯದಲ್ಲಿ ?'' ಎಂದ.

ಪಾಟೀಲರು ಸಂತೋಷದಿಂದ ಕೈ ಎತ್ತಿ ''ನಾನಂತೂ ಹಸಿ ಮೂಲಂಗಿ, ಮೆಂತೆ, ಹಕ್ಕರಕಿ, ಕೋತಂಬರಿ, ಕರಿಬೇವು, ಸವತೆ, ಗಜ್ಜರಿ, ಬದನೆ, ಬೆಂಡೆ, ಹಸಿಮೆಣಸಿನಕಾಯಿ, ಟೊಮೆಟೋ, ಗೆಣಸು, ಇನ್ನೂ ಅನೇಕ ಸೊಪ್ಪುಗಡ್ಡೆಗಳನ್ನು ಹಸಿದಾಗಿಯೇ ತಿನ್ನುತ್ತೇನೆ,'' ಎನ್ನುತ್ತಿದ್ದಂತೆಯೇ ಅವರ ಮಾತನ್ನು ಅರ್ಧಕ್ಕೆ ನಿಲ್ಲಿಸಿ ದೊಡ್ಡಮನಿಯವರು ''ಇಷ್ಟೇ ಅಲ್ಲ ಮಲ್ಲೇಶಪ್ಪ, ಹಾಲು, ಬಾಳೆಹಣ್ಣು ಚಿಕ್ಕು, ಸೇಬು, ಮೋಸಂಬಿ, ಕಿತ್ತಳೆ, ಪೇರಲ, ನೀರಲ, ಬೋರೆ, ಮಾವು, ಪಪ್ಪಾಯಿ ಮುಂತಾದ ಎಲ್ಲ ಹಣ್ಣುಗಳನ್ನು ಬೇಯಿಸದೇ ತಿನ್ನುತ್ತೇವೆ. ಇದರಲ್ಲಿ ಅಂತಹ ಮಹತ್ವದ್ದೇನಿದೆ ?'' ಎಂದು ಹುಬ್ಬು ಏರಿಸಿದರು.

ಮಲ್ಲೇಶಪ್ಪ ದೊಡ್ಡಮನಿ ಅವರ ಮುಗ್ಧ ಅಜ್ಞಾನಕ್ಕೆ ಮರುಕಪಟ್ಟು ''ದೊಡ್ಡಮನಿಯವರೆ, ಇಲ್ಲಿಯೇ ನನ್ನ ಯೋಜನೆಯ ಕೇಂದ್ರಬಿಂದು ಇರುವದು. ಇಷ್ಟೆಲ್ಲ ಹಸಿಯ ಆಹಾರ ಪದಾರ್ಥಗಳನ್ನು ನಾವು ಶತಶತಮಾನಗಳಿಂದ ತಿನ್ನುತ್ತಲೇ



ಬಂದಿರುವಾಗ ಕೇವಲ ಮೂರೆ ಮೂರು ಕಾಳುಗಳ ಬಗ್ಗೆ ಯಾರೂ ವಿಚಾರವನ್ನೇ ಮಾಡಿಲ್ಲ. ಇಲ್ಲಿಯೇ ನಾವು ಫೇಲ್ ಆಗಿರುವದು. ನಮ್ಮ ಯಾವ ವಿಜ್ಞಾನಿಯೂ, ಆಹಾರ ತಜ್ಞನೂ ಯೋಚಿಸಿಯೇ ಇಲ್ಲ. ಈ ಜೋಳ, ಗೋದಿ, ಅಕ್ಕಿಗಳನ್ನು ಹಸಿಯಾಗಿ ತಿನ್ನುವುದನ್ನು ಈ ಹಿಂದೆಯೇ ರೂಢಿಸಿಕೊಂಡು ಬಿಟ್ಟರೆ ನಮಗೆಷ್ಟು ಲಾಭವಾಗುತ್ತಿತ್ತು! ಲೆಕ್ಕಹಾಕಿರಲ್ಲ....

"ನಮ್ಮ ನಮ್ಮ ಮನೆಗಳಲ್ಲಿ ಉರುವಲದ ಬಗ್ಗೆ ಪರದಾಡಬೇಕಾದ್ದಿಲ್ಲ. ಗ್ಯಾಸ್ ತೀರಿತೆಂದು ಹಳಹಳಿಸಬೇಕಾಗಿರಲಿಲ್ಲ. ಚಿಮಣಿ ಎಣ್ಣೆಗೆ ಗೋಳಾಡಬೇಕಾಗಿರಲಿಲ್ಲ. ಹೆಣ್ಣು ಮಕ್ಕಳು ರೊಟ್ಟಿ ಬಡಿಯುವುದು, ಚಪಾತಿ ಬೇಯಿಸುವದು, ಅನ್ನ ಮಾಡುವುದು, ಮುಸುರೆ ತಿಕ್ಕುವದು, ಯಾವುದೂ ಮಾಡಬೇಕಾಗಿರಲಿಲ್ಲ. ನಮ್ಮ ಹಿರಿಯರು ಈ ಹಿಂದೆಯೇ ನಮ್ಮ ಒಳಿಗೆಗೆ ಹಲ್ಲು ಬಂದೊಡನೆ ಈ ಮೂರು ಥರದ ಕಾಳುಗಳನ್ನು ತಿಂದು ಪಚನ ಮಾಡಿಕೊಳ್ಳಲು ರೂಢಿ ಮಾಡಿಸಿದ್ದರೆ ನಮಗೆ ಯಾವುದೇ ರೀತಿಯ ರೋಗವೂ ಬರುತ್ತಿರಲಿಲ್ಲ. ಡಾಕ್ಟರರ ಮುಲಾಜೂ ಹಿಡಿಯಬೇಕಿರಲಿಲ್ಲ"- ಎನ್ನುತ್ತಲೇ ಹಿರೇಮಠ ಬೊಜ್ಜು ಬಂದು ಇಳಿಬಿದ್ದ ತನ್ನ ಹೊಟ್ಟೆಯ ಮೇಲೆ ಕೈಯಾಡಿಸುತ್ತಾ,

"ಎಂಥಾ ಅದ್ಭುತಲಾಭದಾಯಕ ಯೋಜನೇರಿ ಇದು! ನಮಗೆ ಈವರೆಗೂ ತಿಳಿದಿರಲೇ ಇಲ್ಲ. ಕೇವಲ ಮೂರೇ ಮೂರು ಕಾಳುಗಳನ್ನು ತಿಂದು ನಮ್ಮ ಕರುಳಿಗೆ ಪಚನ ಮಾಡುವ ಟ್ರೇನಿಂಗ್ ಕೊಟ್ಟಿದ್ದರೆ ನಮಗೆ ಯಾವುದೇ ರೋಗ ಬರುತ್ತಿರಲಿಲ್ಲ. ಬೊಜ್ಜು ಬೆಳೆಯುತ್ತಿದ್ದಿಲ್ಲ. ಶಕ್ತಿವರ್ಧಿಸುತ್ತಿತ್ತು. ಸಾಕಷ್ಟು ಕ್ಯಾಲ್ಸಿಯಂ ಸಿಕ್ಕುತ್ತಿತ್ತು. ಸಕ್ಕರೆ ರೋಗ, ಬೆಲ್ಲದ ರೋಗ, ಎಣ್ಣೆರೋಗ, ಕಣ್ಣಿನ ರೋಗ ಯಾವದೂ ಇರುತ್ತಿರಲಿಲ್ಲ. ಹೆಂಡಿರ ಕೈಗಳು ಮುಸುರೆ ತಿಕ್ಕಿ ತಿಕ್ಕಿ ಅಂಗೈ ಮಸಿಯಾಗುತ್ತಿರಲಿಲ್ಲ. ಮನೆತುಂಬ ಹೊಗೆ ಎದ್ದು ಬಟ್ಟೆ-ಬರೆ, ತೊಲೆ-ಜಂತಿ ಕಪ್ಪಾಗುತ್ತಿರಲಿಲ್ಲ. ಅಡಿಗೆ ಮಾಡುತ್ತಾ ವ್ಯರ್ಥ ಕಾಲ ಕಳೆಯುವ ಮಹಿಳಾ ವರ್ಗ ಬೇರೊಂದು ಉದ್ಯೋಗ ಮಾಡಿ ಕೋಟ್ಯಾವಧಿ ಸಂಪತ್ತನ್ನು ಹೆಚ್ಚಿಸಬಹುದಾಗಿತ್ತು. ಛೇ ಛೇ ಛೇ, ಎಂಥಾ ಲುಕ್ಸಾನದಲ್ಲಿ ಬಿದ್ದು ಒದ್ದಾಡುತ್ತಿದ್ದೇವೆ. ಈ ಮೊದಲೇ ತಿಳಿದಿದ್ದರೆ ನಮ್ಮ ದೇಶಕ್ಕೆ ಇಂಥ ಆರ್ಥಿಕ ವಿಪತ್ತು ಬರುತ್ತಲೇ ಇರಲಿಲ್ಲ. ಇನ್ನು ಮೇಲಾದರೂ ಬೇಗನೆ ಎಚ್ಚತ್ತುಕೊಳ್ಳಬೇಕು" ಎಂದು ಮಲ್ಲೇಶಪ್ಪನನ್ನು ಪ್ರಶಂಸಿಸತೊಡಗಿದ.

ಮಲ್ಲೇಶಪ್ಪ ಯೋಜನೆಯನ್ನು ಬಳಕೆಯಲ್ಲಿ ತರುವ ಬಗೆಯನ್ನು ವಿವರಿಸುತ್ತಾ, "ಮಿತ್ರರೆ, ನಾವು ಡ್ಯೂಟಿಗೆ ಬರುವಾಗ ಬುತ್ತಿಕಟ್ಟಿಕೊಂಡು ಬರುವ ಅವಶ್ಯಕತೆಯೇ ಇಲ್ಲ. ನಾಲ್ಕಾರು ಜನ ಕೂಡಿ ಅರ್ಧಕಿಲೋ ಜೋಳ, ಅರ್ಧ ಕಿಲೋ ಅಕ್ಕಿ, ಗೋಧಿ ತರಿಸಿ ಇಲ್ಲಿಯೇ ನೆನೆಹಾಕಿ ಆರಾಮಾಗಿ ತಿನ್ನಬಹುದು. ಹಸಿಯ ಕಾಯಿಪಲ್ಯವನ್ನು ತೊಳೆದುಕೊಂಡು ಸ್ವಲ್ಪ ಉಪ್ಪುಹಚ್ಚಿ ತಿನ್ನುತ್ತಾ ಒಂದು ಮೆಣಸಿನ ಕಾಯಿ ಕಡಿದುಕೊಂಡರೆ ಸಾಕು... ಇನ್ನು ಮದುವೆ ಮುಂಜಿವೆಗಳಲ್ಲಿ, ಸಂತೋಷ ಕೂಟಗಳಲ್ಲಿ ಹುಯ್ ಅಂತಾ ಅಡಿಗೆ ಏರ್ಪಾಡು ಮಾಡಬೇಕಿಲ್ಲ. ಅಡಿಗೆ ಸಾಮಾನು, ಅಡಿಗೆಯಾಳು ಬೇಕಾಗಿಲ್ಲ. ಒಂದೊಂದು ಕ್ವಿಂಟಲ್ ಗೋಧಿ, ಅಕ್ಕಿ, ತರಿಸಿ ಪಾವು ಕಿಲೋದಂತೆ ಸಾವಿರಾರು ಪ್ಯಾಕೆಟ್ಟುಗಳಲ್ಲಿ ತುಂಬಿ, ಒಂದು ಹಿಡಿ ತೊಪ್ಪಲು ಪಲ್ಯ, ಒಂದು ಬದನಕಾಯಿ, ಒಂದು ಈರುಳ್ಳಿ, ಒಂದು ಮೆಣಸಿನಕಾಯಿ, ಸ್ವಲ್ಪ ಬೆಲ್ಲ, ಪುಠಾಣಿ ಇಟ್ಟು ಕೊಟ್ಟು ಬಿಟ್ಟರೆ ಮದುವೆಗೆ ಬಂದ ಆಮಂತ್ರಿತರು ಬಫೆ ಸಿಸ್ಟಿಮಿನಲ್ಲಾದರೂ ತಿನ್ನಬಹುದು ಮನೆಗೆ ಹೋಗುವ ದಾರಿಯಲ್ಲಾದರೂ ತಿನ್ನಬಹುದು. ಅಥವಾ ಮನೆಗೆ ಒಯ್ದು ಒಂದೆರಡು ದಿನ ಬಿಟ್ಟಾದರೂ ತಿನ್ನಬಹುದು.

"ಡ್ಯೂಟಿ ಮಾಡುವ ದಂಪತಿಗಳಿಗೆ ಅಡಿಗೆ ಮಾಡುವ ತಾಪತ್ರಯವೇ ಇರುವದಿಲ್ಲ. ಕಾಳುಗಳನ್ನು ಹಸನು ಮಾಡಿ ನೆನೆ ಹಾಕಿದರೆ ಸಾಕು. ರಾತ್ರಿ ಬೇಕಾದಷ್ಟು ಹೊತ್ತು ಮಾಡಿಬಂದರೂ ಹೊಟ್ಟೆ ತುಂಬಿಸಿಕೊಳ್ಳಬಹುದು. ಬೇಯಿಸಿದ ಆಹಾರ ತಿಂದು ನೂರಾರು ರೋಗ ತಂದುಕೊಂಡು ಡಾಕ್ಟರರಿಗೆ ದುಡ್ಡು ಬಡಿಯಬೇಕಾಗಿಲ್ಲ. ಆದ್ದರಿಂದ ನನ್ನ ಪ್ರೀತಿಯ ಮಿತ್ರರೆ, ಈ ನನ್ನ ಸಂಶೋಧನೆಯನ್ನು ಮೆಚ್ಚಿಕೊಂಡಿದ್ದೀರಿ, ಒಪ್ಪಿಕೊಂಡಿದ್ದೀರಿ. ಮೊದಮೊದಲಿಗೆ ಒಂದೆರಡು ತಿಂಗಳು ಪಚನ ಕ್ರಿಯೆಗೆ ಸ್ವಲ್ಪ ತೊಂದರೆಯಾಗಬಹುದಾದರೂ ಮುಂದ

ತಾನೇ ಸುಧಾರಿಸುತ್ತದೆ. ಮಕ್ಕಳಂತೂ ಈ ಯೋಜನೆಯನ್ನು ತಕ್ಷಣ ಜಾರಿಯಲ್ಲಿ ತರುತ್ತವೆ.

"ನಿಮ್ಮ ನಿಮ್ಮ ಮನೆಯಲ್ಲಿ ನಾಳೆಯಿಂದಲೇ ಚಿಕ್ಕಮಕ್ಕಳಿಗೆ ಪ್ರಾರಂಭಿಸಿರಿ. ಇಡೀ ನಮ್ಮ ಭಾರತದಲ್ಲಿ ಈ ನನ್ನ ಯೋಜನೆ ಬಳಿಕೆಯಲ್ಲಿ ಬಂದರೆ 'ರೋಗರಹಿತ ಭಾರತ'ವೆಂದು ಜಗತ್ತಿನಲ್ಲಿ ಗಣಿಸಲ್ಪಡುತ್ತದೆ," ಎನ್ನುತ್ತಾ ಐಸಾಕ್ ನ್ಯೂಟನ್‌ನಂತೆ ಸಂತೃಪ್ತ ಭಾವನೆ ತಾಳಿ ಮಾತು ಮುಗಿಸಿ ಮಲ್ಲೇಶಪ್ಪ ವಿರಮಿಸುತ್ತಲೇ ಬಾಗಿಲ ಬಳಿ ಇದನ್ನೆಲ್ಲ ಕೇಳುತ್ತ ನಿಂತ ಜವಾನ ದುರ್ಗೇಶಿ,

"ಅಲ್ರೀ ಮಲ್ಲೇಶಪ್ಪನಾರ, ನಾನ್‌ವೆಜ್ ಊಟ ಮಾಡುವವರು ಹ್ಯಾಂಗ ಮಾಡಬೇಕ್ರಿ ?" ಎಂದು ಪ್ರಶ್ನಿಸಿದ.

"ದುರ್ಗೇಶಿ, ನಿನ್ನ ಪ್ರಶ್ನೆ ಸಮಂಜಸವೇ ಆಗಿದೆ. ಸಸ್ಯಾಹಾರಿಗಳು ಹಸೇದು ತಿನ್ನುವದನ್ನು ಮೂರು ತಿಂಗಳಲ್ಲಿ ಕರಗತ ಮಾಡಿಕೊಂಡರೆ ಮಾಂಸಾಹಾರಿಗಳು ಆರು ತಿಂಗಳಲ್ಲಿ ಪಚನಕ್ರಿಯೆ ಡೆವಲಪ್ ಮಾಡಿಕೊಳ್ಳಬಹುದು. ಆದರೆ ಓಸುಗಳು ಬಹಳ ಚಿಕ್ಕವಿದ್ದು ಸ್ವಲ್ಪ ಸ್ವಲ್ಪ ತಿನ್ನುತ್ತಾ ರೂಢಿಸಿಕೊಳ್ಳಬೇಕು. ಈ ರೀತಿ ಪ್ರ್ಯಾಕ್ಟೀಸು ಮಾಡಿಕೊಂಡರೆ ಒಂದೆರಡು ವರ್ಷದಲ್ಲಿ ಹುಲಿಯಾಗಿ ಮೆರೆಯಬಹುದು," ಎಂದು ಹೇಳಿ ಹೆಮ್ಮೆಯ ನಗೆ ನಕ್ಕ.

ಮಲ್ಲೇಶಪ್ಪನ ಸಂಶೋಧನೆ ಮಜ್ಜಗಿಯವರಿಗಂತೂ ಬಹಳ ಹಿಡಿಸಿತು. ಆನಂದದಿಂದ ಉಬ್ಬಿ ಹೋಗಿದ್ದರು. ಆದರೂ ಈ ಯೋಜನೆಯನ್ನು ಬಳಿಕೆಯಲ್ಲಿ ತಂದರೆ ಆಗುವ ಕೆಲವು ಅವಾಂತರಗಳನ್ನು ಲಕ್ಷಿಸಿ "ನನ್ನ ಕೆಲವು ಸೂಚನೆಗಳಿವೆ" ಎನ್ನುತ್ತಾ, "ಮಲ್ಲೇಶಪ್ಪನವರೆ, ನಿಮ್ಮ ಯೋಜನೆಯು ಬಳಿಕೆಯಲ್ಲಿ ಬಂದೊಡನೆ ನಮ್ಮ ಪ್ರಾಥಮಿಕ ಶಾಲೆಗಳನ್ನು ಹೈಸ್ಕೂಲು ಕಾಲೇಜುಗಳನ್ನು ಊರ ಹೊರಗೆ ಹೊಲಗಳಿಗೆ ಹತ್ತಿರ ಇರುವುದನ್ನು ರದ್ದು ಪಡಿಸಿ ಊರ ಮಧ್ಯದಲ್ಲಿ ಸ್ಥಾಪಿಸಬೇಕಾಗುತ್ತದೆ" ಎಂದರು.

ಮಜ್ಜಗಿಯವರ ಸೂಚನೆಗೆ ಎಲ್ಲರೂ 'ಕರೆಕ್ಟ್' ಎಂದು ಅನುಮೋದಿಸಿದರು. ದೊಡ್ಡಮನಿಯವರು ಎದ್ದು ನಿಂತು ಇನ್ನು ಮೇಲೆ ಖಾನಾವಳಿ, ಹೊಟೇಲ್ಲುಗಳ ಹೆಸರುಗಳನ್ನು ಬದಲಿಸಿ "ಹಸೇದು ತಿನ್ನುವ ಅಂಗಡಿ" "ಒಣಾದು ತಿನ್ನುವ ಅಂಗಡಿ" ಎಂದು ಬರೆಯಿಸಬೇಕು ಎಂದು ಸೂಚಿಸಿದೊಡನೆ ಒಳ್ಳೆಯ ಸಲಹೆ ಎಂದು ಎಲ್ಲರೂ ಒಟ್ಟಿಗೆ ನೀಡಿದರು. ಆದರೆ ದೊಡ್ಡಮನಿ ಈ 'ಹಸೇದು' 'ಒಣಾದ'ನ್ನು ತಯಾರಿಸುವ ಒಂದು ಫ್ಯಾಕ್ಟರಿ ಅಥವಾ ಹೋಂ ಇಂಡಸ್ಟ್ರಿಯನ್ನೇ ನಡೆಸುವ ವಿಚಾರವನ್ನಿಟ್ಟುಕೊಂಡು ಈ ಮಾತು ಹೇಳಿದ್ದಾನೆಂಬುದು ಯಾರಿಗೂ ತಿಳಿಯಲಿಲ್ಲ.

ಹಿರೇಮಠ ಎದ್ದು ನಿಂತು, "ಡಾಕ್ಟರರು, ಗ್ಯಾಸ್ ಕಂಪನಿಯವರು, ಸ್ಟೋ ಕಂಪನಿಯವರು, ಕಟ್ಟಿಗೆ ಡಿಪೋದವರು, ಏನಾದರೂ ನೆಪ ಹೂಡಿ ತಮ್ಮ ಉದ್ಯಮ ಬಂದಾಯಿತೆಂದು ಚಳುವಳಿ, ದಂಗೆ ಮಾಡಿದರೆ ಯಾರೂ ಹೆದರಕೂಡದು," ಎಂದು ಸಲಹೆ ಹಾಗೂ ಧೈರ್ಯ ತುಂಬಿದರು. ಅಲ್ಲಿಯವರೆಗೂ ಸುಮ್ಮನಿದ್ದ ಪಾಟೀಲರು ತಮ್ಮ ತಮ್ಮ ಸಂಶಯ ವ್ಯಕ್ತಪಡಿಸುತ್ತ "ಅಲ್ರಿ ಮಲ್ಲೇಶಪ್ಪ, ಸಸ್ಯಾಹಾರಿಗಳೂ ಮಾಂಸಾಹಾರಿಗಳೂ ಒಟ್ಟಿನಲ್ಲಿ ಎಲ್ಲ ಮನುಷ್ಯರೂ ಪ್ರಾಣಿಗಳಂತೆ ಹಸಿ ಆಹಾರವನ್ನು ತಿನ್ನಬೇಕೆಂದು ನಿಮ್ಮ ಯೋಜನೆ. ಅದು ಒಳ್ಳೆಯದೇ. ಈ ಮಾತನ್ನು ಡಾಕ್ಟರರೂ ಹೇಳುತ್ತಲೇ ಬಂದಿದ್ದರು. ಆದರೆ ತಾವು ಹೇಳಿದಂತೆ ಸಂಪೂರ್ಣ ಜೀವಂತ ಆಹಾರವನ್ನು ಸೇವಿಸಲು ಈವರೆಗೂ ಹೇಳಿದ್ದಿಲ್ಲ. ನಾವು ನಿಮಗೆ ತುಂಬಾ ಉಪಕೃತರು. ನಾವಷ್ಟೆ ಏಕೆ, ಭಾರತದ ಹಾಗೂ ವಿಶ್ವದ ಎಲ್ಲಾ ಪ್ರಜೆಗಳು ಸಹ. ಆದರೆ ಹೀಗೆಯೇ ಹಸಿ ಧಾನ್ಯ- ಸೊಪ್ಪು ತಿನ್ನುತ್ತಾ ಹೋದರೆ ಕಾಲಾಂತರದಲ್ಲಿ ತಲೆಯ ಮೇಲೆ ಕೋಡು ಚಿಗಿತರೆ ಹೇಗೆ ?" ಎಂದು ತಮ್ಮ ದುಂಡು ತಲೆಯ ಮೇಲೆ ಕೈಯಾಡಿಸುತ್ತಾ ಬಾಲದ ವಿಷಯ ಕೇಳಬೇಕೆನ್ನುವಷ್ಟರಲ್ಲಿ ಎಲ್ಲರೂ ಆಗಲೆ ಮಗ್ಗಲಿನ ಹೊಲದಲ್ಲಿ ಬೆಳೆದು ನಿಂತ ಜೋಳ ಪೈರಿನಲ್ಲಿ ಮರೆಯಾಗಿಬಿಟ್ಟಿದ್ದರು. ●

---

ಅನಾವಶ್ಯಕವಾದ ಅವಸರ ಪ್ರಮಾದಗಳಿಗೆ ಹೆದ್ದಾರಿ

• ಮೊಲಿಯೇರ್

# ಭಾರತೀಯ ಅಂಚೆ ಚೀಟಿಗೆ ೧೪೦ ವರ್ಷ

**ಜಗತ್ತಿನ ಪ್ರಪ್ರಥಮ ಅಂಚೆ ಚೀಟ ಇಂಗ್ಲೆಂಡಿನಲ್ಲಿ ೧೮೪೦ರ ಮೇ ೧ರಂದು ಬಳಕೆಗೆ ಬಂದರೆ, ಭಾರತದ ಮೊದಲ ಅಂಚೆ ಚೀಟ ಬಿಡುಗಡೆಯಾದದ್ದು ೧೮೫೪ರ ಅಕ್ಟೋಬರ್ ೧ರಂದು. ಕಳೆದ ೧೪೦ ವರ್ಷಗಳ ಅವಧಿಯಲ್ಲಿ ದೇಶದ ಅಂಚೆ ಚೀಟ ಪದ್ಧತಿ ಬೆಳೆದ ಬಗೆಯದೊಂದು ರೋಚಕ ಇತಿಹಾಸ.**

● ಎಂ.ಎಂ. ಇನಾಮದಾರ

ಅಂಚೆ ಚೀಟಿ ಪ್ರಪಂಚದಾದ್ಯಂತ ಅಂಚೆ ಸಂಪರ್ಕ ಪದ್ಧತಿಯ ಪ್ರಮುಖ ಸಾಧನವಾಗಿದೆ. ಭಾಗತದಲ್ಲಿ ಮೊದಲ ಅಂಚೆ ಚೀಟಿ ೧-೧೦-೧೮೫೪ರಂದು ಬಿಡುಗಡೆಯಾಯಿತು. ಈ ಮಾನದಿಂದ ಕಳೆದ ಅಕ್ಟೋಬರ್ ೧ ರಂದು ಅಂಚೆಯ ಚೀಟಿಗೆ ೧೪೦ ವಸಂತಗಳು ಸಂದಿವೆ. ಈ ಅಂಚೆ ಚೀಟಿ ಪದ್ಧತಿ ಬೆಳೆದು ಬಂದ ಬಗೆ ರಂಜನೀಯವಾಗಿದೆ.

ಜಗತ್ತಿನಲ್ಲಿ ಪ್ರಪ್ರಥಮ ಅಂಚೆ ಚೀಟಿ ಇಂಗ್ಲಂಡಿನಲ್ಲಿ ೧-೫-೧೮೪೦ ರಂದು ಬಳಕೆಯಲ್ಲಿ ಬಂದಿತು. ರೌಲಾಂಡ್ ಹಿಲ್ ಎಂಬ ಅಧ್ಯಾಪಕನು ಆಗಿನ ಇಂಗ್ಲಂಡಿನ ಅಂಚೆ ಪದ್ಧತಿಯ ಸುಧಾರಣೆಗಾಗಿ ಪ್ರತಿಪಾದಿಸಿದ ವಿಧಾನವು ಬ್ರಿಟಿಶ್ ಸರಕಾರದಿಂದ ಸ್ವೀಕೃತವಾಗಿ ಅಂಚೆ ಚೀಟಿಯಲ್ಲಿ ರೂಪುಗೊಂಡಿತು. ಇದರಿಂದಾಗಿ 'ಅಂಚೆ ಚೀಟಿಯ ಜನಕ'ನೆಂದೇ ರೌಲಾಂಡ್ ಹಿಲ್ ಪ್ರಸಿದ್ಧನಾಗಿದ್ದಾನೆ.

ಭಾರತದಲ್ಲಿ ಅಂಚೆ ಚೀಟಿ ಜಾರಿಯಾಗುವ ಮೊದಲು ಪತ್ರದ ತೂಕ ಮತ್ತು ಅದು ಕ್ರಮಿಸಬೇಕಾದ ಅಂತರದ ಆಧಾರದ ಮೇಲೆ ಅಂಚೆ ಶುಲ್ಕವನ್ನು ವಿಧಿಸಲಾಗುತ್ತಿತ್ತು. ಉದಾಹರಣೆಗೆ ೧ ತೊಲೆಯ ಪತ್ರ ಒಂದಕ್ಕೆ ೨೦ ಮೈಲಿಗೆ ಒಂದು ಆಣೆ, ೫೦ ಮೈಲಿಗೆ ೨ ಆಣೆ ಹೀಗೆ ಅಂಚೆ ಶುಲ್ಕ ಇತ್ತು. ಇದರ ಪ್ರಕಾರ ಒಂದು ತೊಲೆಯ ಪತ್ರಕ್ಕೆ ದಿಲ್ಲಿಯಿಂದ ಕಲಕತ್ತಾಕ್ಕೆ ೧೦ ಆಣೆ. ಕಲಕತ್ತಾದಿಂದ ಮುಂಬೈಗೆ ೧೪ ಆಣೆ ಟಪಾಲು ಶುಲ್ಕ ವಿಧಿಸಲಾಗುತ್ತಿತ್ತು. ಈ ಪದ್ಧತಿಯಲ್ಲಿ ಪತ್ರಗಳನ್ನು ಎಲ್ಲ

ಮಟ್ಟಗಳಲ್ಲಿ ಅಂಚೆ ಶುಲ್ಕ ಸರಿಯಾಗಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸಬೇಕಾಗುತ್ತಿತ್ತು. ಹೀಗಾಗಿ ಪತ್ರಗಳ ಸಾಗಾಟ ತಡವಾಗುತ್ತಿತ್ತು. ಇದಲ್ಲದೆ ಈ ಟಪಾಲು ದರ ಆಗ ಬಹಳ ದುಬಾರಿ ಎನಿಸುತ್ತಿತ್ತು.

ಆದ್ದರಿಂದ ಆಗಿನ ಅಂಚೆ ಪದ್ಧತಿಯ ಸುಧಾರಣೆಗಾಗಿ ಅಧ್ಯಯನ ನಡೆಸಲು ೧೮೫೦ರಲ್ಲಿ ಒಂದು ಸಮಿತಿಯನ್ನು ನೇಮಿಸಲಾಯಿತು. ಈ ಸಮಿತಿ ಎಲ್ಲ ವಿಷಯಗಳನ್ನು ಅಭ್ಯಸಿಸಿ ಅಂತರವನ್ನು ಗಮನಿಸದೆ ಎಲ್ಲ ಅಂತರಕ್ಕೂ ಒಂದೇ ಸಮನಾದ ಅಂಚೆ ಶುಲ್ಕ ಆಕರಣೆ ಮಾಡಬೇಕು ಮತ್ತು ಅದಕ್ಕಾಗಿ ಅಂಚೆ ಚೀಟಿಗಳನ್ನು ಹೊರಡಿಸಬೇಕೆಂದು ಶಿಫಾರಸು ಮಾಡಿತು. ಆದರೆ ಭಾರತದಂತಹ ಬೃಹತ್ ದೇಶದಲ್ಲಿ ಎಲ್ಲ ಅಂತರಕ್ಕೂ ಸಮನಾದ ಅಂಚೆ ದರವನ್ನು ಆಕರಣೆ ಮಾಡುವದು ಆರ್ಥಿಕವಾಗಿ ಹಾನಿಕರ ಕ್ರಮವೆಂದು ಸರಕಾರವು ಸಮಿತಿಯ ಶಿಫಾರಸ್ಸನ್ನು ಮೊದಲು ಒಪ್ಪಲಿಲ್ಲ. ಕೊನೆಗೆ ಸರಕಾರ ತನ್ನ ನಿರ್ಣಯ ಬದಲಿಸಿ ಸಮಿತಿಯ ಶಿಫಾರಸನ್ನು ಸ್ವೀಕರಿಸಿತು. ಅದರ ಪ್ರಕಾರ ಭಾರತದ ಮೊದಲ ಅಂಚೆ ಚೀಟಿ ೧-೧೦-೧೮೫೪ರಂದು ಬಳಕೆಯಲ್ಲಿ ಬಂತು.

ಇದರಿಂದ ಅಂಚೆ ಪದ್ಧತಿಯಲ್ಲಿ ಕ್ರಾಂತಿಕಾರಿ ಬದಲಾವಣೆಯಾಯಿತು. ಸಾರ್ವಜನಿಕರಿಗೆ ಅಂಚೆ ಶುಲ್ಕವು ಬಹಳ ಅಗ್ಗವಾಯಿತು. ಮತ್ತು ಅಂಚೆ ಚೀಟಿಗಳು ಶೀಘ್ರದಲ್ಲಿಯೇ ಜನಪ್ರಿಯವಾದವು. ಆಗಿನ ಅಂಚೆ ದರ 'ಒಂದು ತೊಲೆಯ ತೂಕದ ಪತ್ರಕ್ಕೆ ಕೇವಲ ಅರ್ಧ ಆಣೆ (೩ ಪೈಸೆ) ಆಗಿತ್ತು.

ಭಾರತದ ಪ್ರಥಮ ಅಂಚೆ ಚೀಟಿಯ ಮೇಲೆ ವಿಕ್ಟೋರಿಯಾ ಮಹಾರಾಣಿ'ಯ ಚಿತ್ರವಿತ್ತು. ಮೇಲ್ಭಾಗದಲ್ಲಿ ಇಂಡಿಯಾ ಎಂದು ಬರೆದಿದ್ದು ಕೆಳಗೆ ಮೌಲ್ಯವನ್ನು ಮುದ್ರಿಸಲಾಗಿತ್ತು. ಇದರ ವಿನ್ಯಾಸವನ್ನು ಆಗಿನ ಸರಕಾರದ ಮುಖ್ಯ ವಿನ್ಯಾಸಕಾರ ಮುನೀರುದ್ದೀನ್ ಎಂಬುವರು ರೂಪಿಸಿದ್ದರು. ಕಲಕತ್ತಾದ ಡೆಪ್ಯುಟಿ ಸರ್ವೇಯರ್ ಜನರಲ್ ಕಚೇರಿಯ ಕ್ಯಾಪ್ಟನ್ ಥ್ಯೂಲಿಯರ್ ಎಂಬವರು ಕಲಕತ್ತಾದಲ್ಲಿ ಮುದ್ರಿಸಿದರು. ೧೮೫೫ರ ನವೆಂಬರ್‌ನಲ್ಲಿ ಲಂಡನ್ನಿನ ಡಿ ಲಾರಾ ಆ್ಯಂಡ್ ಕಂಪನಿಯೊಂದಿಗೆ ಮಾಡಿಕೊಂಡ ಒಪ್ಪಂದದ













▲ ಪ್ರಪ್ರಥಮ ಭಾರತೀಯ ಅಂಚೆ ಚೀಟಿಗಳು

# ಅಂಚೆ ಸಂಗ್ರಹಾಲಯ

● ಎಂ.ಎಂ. ಇನಾಮದಾರ್

ಭಾರತದ ಹೆಮ್ಮೆಯ ಕುವರ, ನೊಬೆಲ್ ಪ್ರಶಸ್ತಿ ವಿಜೇತ ಸರ್ ಸಿ.ವಿ. ರಾಮನ್ ತಮ್ಮ ವೃತ್ತಿ ಜೀವನದ ಆರಂಭಿಕ ದಿನಗಳಲ್ಲಿ ಅಂಚೆ ಇಲಾಖೆಯ ನೌಕರರಾಗಿದ್ದರು. ಅಂತೆಯೇ 'ನೀಲ್‌ದರ್ಪಣ್'ನ ಕಾದಂಬರಿಕಾರ ದಿ. ದೀನಬಂಧು ಮಿತ್ರ ಅವರೂ ಇಂತಹ ಮಹನೀಯರು. ಅಂಚೆ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವಾಗ ಅವರ ಕೈ ಬರಹ ಪ್ರತಿಗಳು ಇರಬೇಕಷ್ಟೇ? ಅಂತಹ ಪ್ರತಿಗಳನ್ನು ಸಂರಕ್ಷಿಸಿ ಅವನ್ನು ಕಲ್ಕತ್ತಾದ ಭಾರತ ಅಂಚೆ ಸಂಗ್ರಹಾಲಯದಲ್ಲಿ ಪ್ರದರ್ಶಿಸಲಾಗಿದೆ. ಈ ಕೈ ಬರಹದ ಪ್ರತಿಗಳ ಜೊತೆ ಮತ್ತೊಂದು ಅಪರೂಪದ ಅಮೂಲ್ಯವಾದ ಸಹಿಯೊಂದು ಅಲ್ಲಿ ಪ್ರದರ್ಶನಗೊಂಡಿದೆ. ಅದಾವುದು ಗೊತ್ತೆ? ನಮ್ಮ ದೇಶದ ಮಹಾನ್ ಕಲಾಕಾರ, ಕವಿ, ಗುರುದೇವ ರವೀಂದ್ರನಾಥ ಟ್ಯಾಗೋರರದು. ಅವರು ಶಾಂತಿನಿಕೇತನದ ಅಂಚೆ ಕಚೇರಿಯಲ್ಲಿ ಉಳಿತಾಯ ಖಾತೆ ಆರಂಭಿಸಿದಾಗ ರುಜು ಹಾಕಿದ ಅರ್ಜಿ ಈಗ ಪ್ರದರ್ಶನಕ್ಕಿಡಲ್ಪಟ್ಟಿದೆ. ಇಂತಹ ಹತ್ತು ಹಲವು ಅಪರೂಪದ ಆಸಕ್ತಿಯುತ ವಿಷಯಗಳು ಈ ಅಂಚೆ ಸಂಗ್ರಹಾಲಯದಿಂದ ಬೆಳಕಿಗೆ ಬಂದಿವೆ.

ವೈವಿಧ್ಯ ಭಾಂಡಾರದಂತಿರುವ ಈ ಅಂಚೆ ಸಂಗ್ರಹಾಲಯ ಅಂಚೆ ಇಲಾಖೆಯ ಹಲವು ದಾಖಲೆಗಳನ್ನೊಳಗೊಂಡು ಭಾರತದ ಅಂಚೆ ವ್ಯವಸ್ಥೆಯ ಇತಿಹಾಸದ ಮೇಲೆ ಬೆಳಕು ಚೆಲ್ಲಿದೆ. ಅಷ್ಟೇ ಅಲ್ಲ ಗತಕಾಲದ ಬಗ್ಗೆ ಒಳನೋಟ ದೊರಕಿಸುತ್ತದೆ.

ಅಂಚೆ ಸಂಗ್ರಹಾಲಯದ ಜೊತೆ ಅಂಚೆ ಚೀಟಿಗಳ ಸಂಗ್ರಹಾಲಯವೂ ಇದೆ. ಈ ಸಂಗ್ರಹಾಲಯದಲ್ಲಿ ೧೮೭೯ರ ಮೊಟ್ಟಮೊದಲ ಅಂಚೆಕಾರ್ಡಿನ ಮಾದರಿ ಪ್ರತಿ ಹಾಗೂ ಅಂಚೆ ಚೀಟಿಗಳು ಇವೆ. ೧೮೮೪-೮೫ರಲ್ಲಿ ಈಜಿಪ್ಟಿನ ವಸ್ತು ಪ್ರದರ್ಶನದಲ್ಲಿ ಪ್ರದರ್ಶಿಸಲಾದ ವಿವಿಧ ಅಂಚೆಚೀಟಿಗಳು ಕೂಡ ಇಲ್ಲಿವೆ. ಅಂಚೆ ಸಂಗ್ರಹಾಲಯದ ಒಂದು ಮೂಲೆಯಲ್ಲಿ ಟೆಲಿಫೋನ್ ಕಾರ್ನರ್ ಇದ್ದು ಸ್ವಯಂಚಾಲಿತ ವಿನಿಮಯ ಕೇಂದ್ರಗಳಲ್ಲಿ ಬಳಸುವ ದೈತ್ಯಾಕಾರದ ದೂರವಾಣಿ ಮಾದರಿಯನ್ನು ಅಲ್ಲಿಡಲಾಗಿದೆ. ಇದರ ಜೊತೆಗೆ ೧೯೦೦ರ ನಂತರ ಬಳಸುತ್ತಿದ್ದ ವಿವಿಧ ಆಕಾರದ ೧೨ ದೂರವಾಣಿ ಉಪಕರಣಗಳನ್ನೂ ಪ್ರದರ್ಶನಕ್ಕೆ ಇಡಲಾಗಿದೆ. ಅಂಚೆಯ ಬಗ್ಗೆ ತಿಳಿಯಲೇಬೇಕೆನ್ನುವವರು ಈ ಸಂಗ್ರಹಾಲಯಕ್ಕೆ ಭೇಟಿ ನೀಡಲೇಬೇಕು. ಹಾಗೆ ಭೇಟಿ ನೀಡಿದವರಿಗೆ ತನ್ನ ಬರುವಿಕೆ ಸಾರಲು ರನ್ನರ್ ಕಹಳೆ ಊದುತ್ತಾ ಗತಕಾಲದ ಅಂಚೆ ವ್ಯವಸ್ಥೆ ಬಗ್ಗೆ ತಿಳಿಸುತ್ತಾನೆ. ಅಲ್ಲಿನ ಹಲವು ವಸ್ತುಗಳು ಅಂಚೆ ಇತಿಹಾಸದ ಗಾಥೆ ಹಾಡುತ್ತವೆ. ನಿಮ್ಮನ್ನು ಅಂದಿನ ಅಂಚೆ ರವಾನೆಯ ಲೋಕಕ್ಕೆ ಸೆಳೆದೊಯ್ಯುತ್ತವೆ. ●

(ಕೃಪೆ: ಪಿ.ಟಿ.ಐ. ಫೀಚರ್)

ಪ್ರಕಾರ ಇಂಗ್ಲಂಡಿನಲ್ಲಿ ಭಾರತೀಯ ಅಂಚೆ ಚೀಟಿಗಳ ಮುದ್ರಣ ಆರಂಭವಾಯಿತು.

ಮೊದಲು ೩ ಪೈಸೆ ಮತ್ತು ೬ ಪೈಸೆ ಹೀಗೆ ಎರಡೇ ಮೌಲ್ಯದ ಟಪಾಲು ಟಿಕೇಟುಗಳನ್ನು ಮುದ್ರಿಸಲಾಗಿತ್ತು. ನಂತರ ಎರಡು ಬಣ್ಣಗಳ ೪ ಆಣೆ ಅಂಚೆಯ ಚೀಟಿ ಮುದ್ರಿತವಾಯಿತು. ಪ್ರಪ್ರಥಮವಾಗಿ ಎರಡು ಬಣ್ಣಗಳಲ್ಲಿ ಅಂಚೆ ಚೀಟಿ ಮುದ್ರಿಸಿದ ಕೀರ್ತಿ ಇದರಿಂದ ಭಾರತಕ್ಕೆ ದೊರೆಯಿತು.

೪ ಆಣೆ (೨೫ ಪೈಸೆ) ಟಪಾಲು ಟಿಕೇಟುಗಳನ್ನು ಮುದ್ರಿಸುವಾಗ ಕೆಲವು ಅಂಚೆ ಚೀಟಿಗಳಲ್ಲಿ ವಿಕ್ಟೋರಿಯಾ ಮಹಾರಾಣಿ'ಯ ಚಿತ್ರ ತಲೆಕೆಳಗಾಗಿ ಮುದ್ರಿತವಾಗಿತ್ತು. ಅಂಚೆ ಚೀಟಿ ಸಂಗ್ರಹಕಾರ ಮಾರುಕಟ್ಟೆಯಲ್ಲಿ ಇದು ಸ್ವಾತಂತ್ರ್ಯಪೂರ್ವದ ಅತಿ ಹೆಚ್ಚಿನ ಬೆಲೆಯ ಅಂಚೆ ಚೀಟಿಯಾಗಿದೆ.

ಭಾರತದಾದ್ಯಂತ ಜಾರಿಯಲ್ಲಿ ಬರುವ ಈ ಅಂಚೆ ಚೀಟಿಗಳನ್ನು ಹೊರಡಿಸುವುದಕ್ಕಿಂತ ಮುಂಚೆ ಸಿಂಧ್ ಪ್ರಾಂತದ ಮುಖ್ಯ ಕಮೀಶನರ್ ಸರ್ ಬಾರ್ಟಲೇ ಫ್ರೇರೆ ತನ್ನ ಪ್ರಾಂತದಲ್ಲಿ ಮಾತ್ರ ಬಳಕೆಗೋಸ್ಕರ ವಿಶಿಷ್ಟ ಮಾದರಿಯ ಸ್ಟಾಂಪುಗಳನ್ನು ಬಳಕೆಗೆ ತಂದಿದ್ದನು. ಇವುಗಳನ್ನು ಸಿಂಧ್ ಡಾಕ್ ಎಂದು ಕರೆಯಲಾಗುತ್ತಿತ್ತು. ಭಾರತ ಸರಕಾರ ಅಂಚೆ ಚೀಟಿಗಳನ್ನು ಬಳಕೆಯಲ್ಲಿ ತಂದಾಗ ಇವುಗಳನ್ನು ಹಿಂತೆಗೆದುಕೊಳ್ಳಲಾಯಿತು.

೧೯೨೫ರಿಂದ ನಾಶಿಕದಲ್ಲಿರುವ ಗವರ್ನಮೆಂಟ್ ಸೆಕ್ಯೂರಿಟಿ ಪ್ರೆಸ್ಸಿನಲ್ಲಿ ಅಂಚೆ ಚೀಟಿಗಳ ಮುದ್ರಣ ನಡೆಯುತ್ತಿದೆ. ಸದ್ಯ ಫೋಟೋಗ್ರ್ಯಾವರ್ ಪದ್ಧತಿಯ ಪ್ರಕಾರ ಅಂಚೆಯ ಟಿಕೇಟುಗಳನ್ನು ಮುದ್ರಿಸಲಾಗುತ್ತಿದೆ. ಬ್ರಿಟಿಶ್ ಸಾಮ್ರಾಜ್ಯದಲ್ಲಿ ಮೊಟ್ಟಮೊದಲು ಏರ್‌ಮೇಲ್ ಸ್ಟಾಂಪುಗಳನ್ನು ಹೊರಡಿಸಿದ ಕೀರ್ತಿಗೆ ಭಾರತ ದೇಶವು ಪಾತ್ರವಾಯಿತು. ಏರ್‌ಮೇಲ್‌ಗಾಗಿ ೧೯೨೯ರಲ್ಲಿ ವಿಮಾನವೊಂದರ ವಿನ್ಯಾಸವಿದ್ದ ಅಂಚೆ ಚೀಟಿಯ ಮುದ್ರಣವೇ ಇದಕ್ಕೆ ಕಾರಣವಾಯಿತು. ನಂತರ ೧೯೩೫ರಲ್ಲಿ ಐದನೇ ಜಾರ್ಜ್ ಆಳ್ವಿಕೆಯ ರಜತೋತ್ಸವ, ಎರಡನೆ ಮಹಾಯುದ್ಧದಲ್ಲಿ ಬ್ರಿಟಿಶರ ವಿಜಯ ಮುಂತಾದ ಐತಿಹಾಸಿಕ ಘಟನೆಗಳ ಸ್ಮರಣಾರ್ಥ ಸಚಿತ್ರ ಡಾಕ್ ಟಿಕೀಟುಗಳನ್ನು ಹೊರಡಿಸಲಾಯಿತು.

ಭಾರತಕ್ಕೆ ಸ್ವಾತಂತ್ರ್ಯ ದೊರೆತ ನಂತರ ಅಂಚೆ ಇಲಾಖೆ ಮತ್ತಷ್ಟು ವಿಶಾಲ ತಳಹದಿಯ ಮೇಲೆ ಅಂಚೆ ಚೀಟಿಗಳನ್ನು ಮುದ್ರಿಸಲಾರಂಭಿಸಿತು. ಮುಖ್ಯ ಘಟನೆಗಳ ಸ್ಮರಣೆಗಾಗಿ ಅಲ್ಲದೆ ಭಾರತದ ಪರಂಪರೆ, ಪ್ರಗತಿ, ನಿಸರ್ಗ ಸಂಪತ್ತು, ಸ್ವಾತಂತ್ರ್ಯ ಹೋರಾಟ ಮೊದಲಾದ ವಿಷಯಗಳ ಮೇಲೆ ಅಂಚೆ ಚೀಟಿಗಳನ್ನು ಮುದ್ರಿಸಲಾಯಿತು. ಆಗ ಹೊರಡಿಸಿದ ಟಪಾಲು ಟಿಕೀಟುಗಳಲ್ಲಿ ಮಹಾತ್ಮಾ ಗಾಂಧಿ ಮತ್ತು ಜವಾಹರಲಾಲ್ ನೆಹರೂ ಅವರಿಗೆ ಮಹತ್ವದ ಸ್ಥಾನ ನೀಡಲಾಗಿದೆ.

೧೯೪೮ರಲ್ಲಿ ಮಹಾತ್ಮಾ ಗಾಂಧಿಯವರು ನಿಧನರಾದಾಗ ಅವರ ಸ್ಮರಣಾರ್ಥವಾಗಿ ನಾಲ್ಕು ಅಂಚೆ ಚೀಟಿಗಳನ್ನು ಮುದ್ರಿಸಲಾಯಿತು. ಇವು ವಿವಿಧ ವರ್ಣಗಳಲ್ಲಿ ಸ್ವಿಜರ್‌ಲೆಂಡ್ ದೇಶದಲ್ಲಿ ಮುದ್ರಿಸಲ್ಪಟ್ಟಿದ್ದವು. ಇವುಗಳಲ್ಲಿ ಕೆಲವು ಅಂಚೆ ಚೀಟಿಗಳನ್ನು ಆಗಿನ ಗವರ್ನರ್ ಜನರಲ್ ಸಿ. ರಾಜಗೋಪಾಲಾಚಾರಿಯವರ ಉಪಯೋಗಕ್ಕೆ "ಸರ್ವಿಸ್" ಎಂದು ವಿಶೇಷವಾಗಿ ಮುದ್ರಿಸಲಾಗಿತ್ತು. ಇಂಥ ಅಂಚೆ ಚೀಟಿಗಳಲ್ಲಿ ೧೦ ರೂಪಾಯಿ ಮೌಲ್ಯದ ಸ್ಟಾಂಪು ಸ್ವಾತಂತ್ರ್ಯ ನಂತರದ ಅತಿ ದುಬಾರಿ ಅಂಚೆ ಚೀಟಿಯಾಗಿದೆ. ಅಂಚೆ ಚೀಟಿ ಸಂಗ್ರಾಹಕರು ಇದಕ್ಕೆ ಸಾಧಾರಣವಾಗಿ ಒಂದು ಸಾವಿರ ರೂಪಾಯಿ ಬೆಲೆ ಕಟ್ಟುತ್ತಾರೆ.

ಭಾರತೀಯ ಅಂಚೆ ಚೀಟಿಗಳು ಕೇವಲ ಅಂಚೆ ಪದ್ಧತಿಯ ಸಾಧನಗಳಾಗಿ ಮಾತ್ರ ಉಳಿದಿಲ್ಲ, ಅವುಗಳ ಪಾತ್ರ ಇನ್ನೂ ಅನೇಕ ವಿಧವಾಗಿದೆ. "ಅಂಚೆ ಚೀಟಿಗಳು ಮಾನವಕುಲದ ಪ್ರಗತಿಯ ಮತ್ತು ಸೇವೆಯ ಪ್ರತೀಕ. ಅವು ಸಲ್ಲಿಸಿದ ಅತಿ ದೊಡ್ಡ ಸೇವೆಯೆಂದರೆ ರಾಷ್ಟ್ರ ರಾಷ್ಟ್ರಗಳ ಜನತೆಯಲ್ಲಿ ಸಹಕಾರತತ್ವ ಮತ್ತು ಏಕತೆಯ ಭಾವವನ್ನು ಬಿಂಬಿಸಿದ್ದು" ಎಂದು ಪಂ. ಜವಾಹರಲಾಲ್ ನೆಹರೂ ಹೇಳಿದ ಮಾತು ಅರ್ಥಪೂರ್ಣ. ●

ತಪ್ಪುಗಳನ್ನೇ ಮಾಡದ ವ್ಯಕ್ತಿ ಏನನ್ನೂ ಮಾಡಲಾರ. ● ಎಡ್ವರ್ಡ್ ಫೆಲ್ಪ್ಸ್






ನಲವತ್ತೈದು ವರ್ಷಗಳ ಹಿಂದಿನ ಮಾತು. ನಾನಾಗ ನಾಲ್ಕನೆ ತರಗತಿಯಲ್ಲಿದ್ದೆ. ನವಟಾಕು, ಪಾವು, ಅಚ್ಚೇರು, ಸೇರು, ಪಂಚೇರು, ಧಡೆ-ಮಣಗಳ ಕಾಲ ಅದು.

ಐದು ಮಣಕ್ಕೆ ಪಂಚೇರು ಎಷ್ಟು ? ಒಂಬತ್ತು ಧಡೆಗೆ ಸೇರುಗಳೆಷ್ಟು ? ಎಂದೆಲ್ಲ ಕೇಳಿದಾಗ ಥಟ್ಟನೆ ಉತ್ತರಿಸಿದವನೇ ಬಲು ಜಾಣ. ಸೇರು ಹೇಳಬೇಕಾದಾಗ ಪಂಚೇರು ಎಂದೂ, ಪಂಚೇರು ಎನ್ನಬೇಕಾದಾಗ ಮಣ ಎಂದೂ ಉತ್ತರಿಸಿದಾಗ ಅಂಗೈಯಲ್ಲಿ ಬಾಸುಂಡೆ ಏಳುತ್ತಿದ್ದವು.

ಪ್ರತಿ ಶುಕ್ರವಾರ ಗುಡೂರು ಸಂತೆ. ನಾನು ನನ್ನ ಗೆಳೆಯ ಸೇರಿ ಸಂತೆಗೆ ಹೊರಟಾಗ ಮಾಸ್ತರರು ತಮಗೆ ಮೂರು ಸೇರು ಬೆಲ್ಲವನ್ನು ತಮ್ಮ ಉದ್ರಿ ಅಂಗಡಿಯಲ್ಲಿ ತರಲು ಹೇಳಿದರು. ಮೂರು ಸೇರು ಬೆಲ್ಲ ಭಾರದಲ್ಲಿ ಮತ್ತು ಗಾತ್ರದಲ್ಲಿ ಎಷ್ಟು ಇರುತ್ತದೆ ಎಂಬುದು ತಿಳಿಯದ ನಮಗೆ ಸೇರು, ಪಂಚೇರುಗಳು ಬಹಳ ವ್ಯತ್ಯಾಸಗಳಾಗಿ ಕಾಣಲಿಲ್ಲ. ಹೀಗಾಗಿ ಮೂರು ಸೇರಿಗೆ ಬದಲಾಗಿ ಮೂರು ಪಂಚೇರು ಬೆಲ್ಲವನ್ನು ಮಾಸ್ತರರ ಹೆಸರಿಗೆ ಉದ್ರಿ ಬರೆಯಿಸಿ ಹೆಣ ಬೀಳುವ ಹಾಗೆ ಇಬ್ಬರೂ ಹೊತ್ತುಕೊಂಡು ಮಾಸ್ತರರನ್ನು ಮನಸ್ಸಿನಲ್ಲಿ ಶಪಿಸುತ್ತ ಊರು ತಲುಪಿದೆವು. ಬೆಲ್ಲದ ಗಂಟನ್ನು ಮಾಸ್ತರರ ಎದುರಿಗೆ ಧೊಪ್ಪನೆ ಒಗೆದಾಗ ಅವರು ಅವಾಕ್ಕಾದರು. "ನಾನು ಗಣಿತ ಕಲಿಸಿದ್ದಕ್ಕೂ ಸಾರ್ಥಕವಾಯ್ತು. ಮೂರು ಸೇರು ಹೇಳಿದರೆ ಮೂರು ಪಂಚೇರು ತಂದಾರೆ ಮೂರ್ಖರು," ಎಂದು ತಲೆಯ ಮೇಲೆ ಕೈ ಹೊತ್ತು ಕುಳಿತರು.

● ಶಾಂತೇಶ ವಸ್ತ್ರದ



೧೯೫೦ನೇ ಇಸವಿ. ಕಾರವಾರದ ಸಮುದ್ರ ದಂಡೆಯ ಮೇಲೆ ಮಾರುತಿ ಮಂದಿರದ ಸ್ಥಾಪನೆಯ ಕೆಲಸ ಉತ್ಸಾಹದಿಂದ ಜರುಗಿತ್ತು. ಆ ಕಾರಣ ಮಂದಿರದ ಮುಂದೆ ದಿನನಿತ್ಯ ಭಜನೆ ನಡೆಯುತ್ತಿತ್ತು. ಸುಶಿಕ್ಷಿತರು ಅಶಿಕ್ಷಿತರೆನ್ನದೆ ಎಲ್ಲರೂ ಭಜನೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ನಾನೂ ಅಲ್ಲಿರುತ್ತಿದ್ದೆ.

ಹೀಗೊಂದು ದಿನ ಓರ್ವ ಅಶಿಕ್ಷಿತ ಅತ್ಯಂತ ಭಾವಾವೇಶದಿಂದ ಭಜನೆ ಹಾಡುವುದು ಉಳಿದವರು ಆತನನ್ನು ಅನುಸರಿಸುವುದು ನಡೆದಿತ್ತು. ಭಜನೆ ರಂಗೇರಿದ್ದಾಗಲೇ ಆತನ ಹಾಡಿನ ಹಿಂಬಾಲಕರು ಏಕಾಏಕಿ ದೊಡ್ಡ ದನಿಯಿಂದ ನಗತೊಡಗಿದರು. ನಗುವಿನ ಮರ್ಮ ಆ ಅಶಿಕ್ಷಿತನಿಗೆ ಗೊತ್ತಾಗಲೊಲ್ಲದು. ಆತ ನಕ್ಕವರತ್ತ ಸಂದೇಹದಿಂದ ನೋಡತೊಡಗಿದ. ಆಗ ಅವರಲ್ಲೊಬ್ಬ ನಗುವನ್ನು ಹತ್ತಿಕ್ಕಿ, "ಸಬ್‌ಕೋ ಸಂತತಿ ದೇ ಭಗವಾನ್ ಅಲ್ಲ ಮಾರಾಯಾ, ಸಬ್‌ಕೋ ಸನ್ಮತಿ ದೇ ಭಗವಾನ್, ಅನ್ನು," ಎಂದು ಹೇಳಿ ಕುಳಿತುಕೊಂಡ.

● ರಾಮಚಂದ್ರ ಪತಕಿ



೧೯೪೩ರಲ್ಲಿ ನಮ್ಮಲ್ಲಿ ಭೀಕರ ಬರಗಾಲ. ಆದರಲ್ಲೂ ಹಳ್ಳಿಗರಾದ ನಮ್ಮ ಜೀವನವೆಲ್ಲ ಹೊಲದಿಂದ ಬರುವ ಲಾವಣಿ ಹಣ, ಧವಸ-ಧಾನ್ಯದಿಂದಲೇ ಸಾಗಬೇಕು. ಬೇರೆ ಉದ್ಯೋಗವಿಲ್ಲ. ಭೀಕರ ಬರಗಾಲದ ಗಾಳಿ ನಮ್ಮ ಮನೆಗೂ ಬೀಸಿದ್ದು ಆಶ್ಚರ್ಯವಲ್ಲ. ಒಂದೊಂದು ದಿನವನ್ನು ಕಳೆಯುವದೂ ಕಷ್ಟವಾಗುತ್ತಿತ್ತು. ಎಷ್ಟೋ ಸಲ ಅಂಬಲಿಯ ಪ್ರಸಾದವೂ ಆಗುತ್ತಿತ್ತು.

ಹೀಗಿರುವಾಗ ಒಂದು ದಿನ ಯಾದವಾಡದಿಂದ ಅಣ್ಣಾಚಾರ್ಯ ಎಂಬುವರು ನಮ್ಮೂರಿಗೆ- ನಮ್ಮ ಮನೆಗೆ ದೇಶಾವರಿಗೆಂದು ಬಂದರು. ನಮ್ಮ ಕಷ್ಟ-ಕಾರ್ಪಣ್ಯ ಕೇಳಿ ಸುಮ್ಮನೆ ಊರಲ್ಲಿ ತಮ್ಮ ಕೆಲಸಕ್ಕ ಹೋದರು. ಎಲ್ಲಿಯೂ ಒಂದು ಬಿಡಿಗಾಸು ಹುಟ್ಟಲಿಲ್ಲ. ಹಾಗೇ (ಶಿಂಧೆಯವರ) ಸರಕಾರದವರ ವಾಡೆಗೂ ಹೋದರು. ಅಲ್ಲಿ ಧಣಿಗಳು ತಾಸಿನ ನಂತರ ತುಂಬ ಪ್ರಯಾಸದಿಂದ ಒಂದು ರೂಪಾಯಿ ಕೊಟ್ಟರಂತೆ. ಅದನ್ನೇ ನೇರವಾಗಿ ತಂದು ನಮ್ಮ ತಾಯಿಗೆ ಕೊಟ್ಟು, "ಇದನ್ನು ಮಹಾಸ್ವಾಮಿ ಕೊಟ್ಟಿದ್ದಾನ ಅಂತಾ ತಿಳಿಯಿರಿ," ಎಂದು ಹೇಳಿ ತಮ್ಮ ಸ್ವಂತ ಖರ್ಚಿನಿಂದ ಊರಿಗೆ ಹೋದರು.

ಮುಂದೆ ಅವರು 'ಸಂಯುಕ್ತ ಕರ್ನಾಟಕ' ಕಾರ್ಯಾಲಯ ಸೇರಿ ಅನೇಕ ವರ್ಷ ಸೇವೆ ಸಲ್ಲಿಸಿದರು. ಇಂದು ನಮ್ಮ ತಾಯಿಯವರಾಗಲೀ ಅಣ್ಣಾಚಾರ್ಯರಾಗಲೀ ಇಲ್ಲ. ಆದರೆ ಆ ಘಟನೆ ಮಾತ್ರ ನಮಗೆ ಚಿರಸ್ಮರಣೀಯ.

● ಬಿ.ಎಲ್. ದೇಶಪಾಂಡೆ



ಆಗಸ್ಟ್ '೯೪ರ ಸಂಚಿಕೆಯ 'ಕಸ್ತೂರಿ'ಯಲ್ಲಿ ಥಲಸೀಮಿಯಾ ರೋಗ ಮತ್ತು ಚಿಕಿತ್ಸೆಯ ಬಗ್ಗೆ ಲೇಖನ ಓದುವಾಗ ನನ್ನ ಕಣ್ಣಿಗೆ ಕಟ್ಟಿದ್ದೆಂದರೆ ಆ ಸಮ್ಮೇಳನದಲ್ಲಿ ಭಾಗವಹಿಸಿದ ಪ್ರತಿಭಾವಂತ ಯುವಕ ವಿರೇಶಿಯೂ, 'ಬೆಳೆಯುವ ಪೈರು ಮೊಳಕೆಯಲ್ಲಿ ನೋಡು' ಎಂಬಂತೆ ಗೆಳೆಯರ ಗುಂಪು ಕಟ್ಟಿ ಸಂಘ ಮಾಡಿಕೊಂಡು ಥಲಸೀಮಿಯಾ ಬಗ್ಗೆ ಚಿಕ್ಕ ಪುಸ್ತಕವನ್ನು ಬರೆದು ತನ್ನ ಪ್ರತಿಭೆಯನ್ನು ಬೆಳಗಿಸಿದ್ದು. ನನಗೆ ೧೫ ವರುಷದ ಹಿಂದಿನ ನೆನಪು ಮರುಕಳಿಸಿತು.

ಪಾವಟೆಯವರು ಮತ್ತು ನಾವು ಕುಟುಂಬ ಸ್ನೇಹಿತರು. ವೀರೇಶನ ತಂದೆ ಮತ್ತು ನಮ್ಮವರು ಸಹೋದ್ಯೋಗಿಗಳು. ಕ್ಯಾಂಪಸ್ಸಿನ ಎದುರು ಬದರು ಮನೆಯಲ್ಲಿ ವಾಸ. ಅವನ ತಾಯಿ ನನ್ನ ಆತ್ಮೀಯ ಸ್ನೇಹಿತೆ. ಆಗ ವೀರೇಶಿ ಇನ್ನೂ ಮುಗ್ಧ ಬಾಲಕ. ಈ ರೋಗದ ಕಾರಣ ಶಾಲೆಗೆ ಹೋಗದೆ ಮನೆಯಲ್ಲಿಯೇ ಅವನ ವಿದ್ಯಾಭ್ಯಾಸ. ಬುದ್ಧಿಯೂ ಬಹಳ ಚುರುಕು. ಎಲ್ಲದಕ್ಕೂ ಕುತೂಹಲದ ಪ್ರಶ್ನೆಗಳು. ಎಲ್ಲವನ್ನೂ ತಿಳಿಯಬೇಕೆಂಬ ಕಾತರ. ರಕ್ತದಾನ ಪಡೆಯಲು ಪ್ರತಿ ತಿಂಗಳು ಪ್ಲೇನಿನಲ್ಲಿ ಪ್ರಯಾಣ. ಒಂದೆರಡು ದಿವಸ ತಡವಾದರೂ ಬಿಳಿಚಿಕೊಳ್ಳುತ್ತಿದ್ದ. ಇವನ ಪ್ರತಿಭೆ ಕಂಡು ಸಂತೋಷವಾಗುವ ಬದಲು ಅನುಕಂಪವೇ ಹೆಚ್ಚಾಗಿತ್ತು. ಹೀಗೊಂದು ದಿನ ಅವನು ಆಟವಾಡಿಕೊಳ್ಳುತ್ತ, "ಮೇರಿ ಸಪನೋಂಕಿ ರಾಣಿ ಕಬ್ ಆಯೇಗಿ ತು" ಎಂದು ಮುಗ್ಧತೆಯಿಂದ ಹಾಡಿಕೊಳ್ಳುತ್ತಿದ್ದುದು. ಅಲ್ಲಿಯೇ ಕುಳಿತು ಹರಟುತ್ತಿದ್ದ ನಮ್ಮ ಕಿವಿಗೆ ಬಿದ್ದಾಗ ಆ ಮಾತ್ರ ಹೃದಯ ಚೀರಿತು, "ನಿನ್ನ ಅಲ್ಪಾಯುಷ್ಯದ ಬಾಳಿನಲ್ಲಿ ಎಲ್ಲಿ ಬರುವಳು ಅವಳು...." ಎಂದು. ವ್ಯಥೆಯಿಂದ ಇಬ್ಬರ ಕಣ್ಣುಗಳೂ ಹನಿಗೂಡಿದ್ದವು. ಇಂದು ಸುಧಾರಿತ ವೈದ್ಯಕೀಯ ಚಿಕಿತ್ಸೆ ಇಂತಹ ರೋಗಿಗಳಿಗೆ ವರದಾನವಾಗಿ ಪರಿಣಮಿಸಿ ವೀರೇಶನಂತಹ ಯುವಕರಿಗೆ 'ಕನಸಿನ ರಾಣಿ" ಬಂದು ಅವರೂ ಎಲ್ಲರಂತೆ ಆಯುಷ್ಯವನ್ನು ಪಡೆದು ಬಾಳುವಂತಾಗಿದ್ದನ್ನು ಓದಿ ಸಂತಸದಿಂದ ಕಣ್ಣಾಲಿಗಳು ತುಂಬಿ ಬಂದವು.

● ವಿನೋದಿನಿ ಆರ್.ವೈ.

# ಅದೃಶ್ಯ ತೈಲ

● ಪಿ. ಶಿವರಾಮ



ದಟ್ಟ ಕಾಡುಗಳಿಂದಾವೃತವಾದ ಬೆಟ್ಟ ಪ್ರದೇಶಗಳಲ್ಲಿ ಕತ್ತಲು ಕವಿಯಲು ಹೆಚ್ಚು ಸಮಯ ಕಾಯಬೇಕೆಂದಿಲ್ಲ. ಮಾನಂತವಾಡಿಯ ಗ್ರೀನ್ ಎಸ್ಟೇಟಿನ ಮ್ಯಾನೇಜರ್ ಕುಮಾರನ್ ಅವರ ಬಂಗಲೆಯ ಸುತ್ತಲೂ ಆಗಲೇ ಕತ್ತಲಾವರಿಸಿತ್ತು. ಆಹ್ವಾನಿತರಲ್ಲಿ ಇಬ್ಬರು ಆಗಲೇ ಅಲ್ಲಿಗೆ ಬಂದಾಗಿತ್ತು. ಮೂವರೂ ಪಕ್ಕದ ಎಸ್ಟೇಟಿನ ಮಾಲಕನ ನಿರೀಕ್ಷೆಯಲ್ಲಿದ್ದರು. ಕೈಯಲ್ಲೊಂದು ಟಾರ್ಚ್ ಲೈಟು, ತಲೆಗೆ ಟೋಪಿ. ಹೆಗಲಲ್ಲಿ ಬಂದೂಕನ್ನಿರಿಸಿ ಬೂಟು ಕಾಲುಗಳ ಶಬ್ದ ಮಾಡುತ್ತ ಆಗಲೇ ಬಂಗಲೆಯ ಮೆಟ್ಟಲೇರಿದರು ಫ್ರಾನ್ಸಿಸ್ ಬರ್ನಾರ್ಡ್.

"ಪಕ್ಕದ ಎಸ್ಟೇಟಿನ ಮಾಲಕ ಮಿಸ್ಟರ್ ಫ್ರಾನ್ಸಿನ್ ಬರ್ನಾರ್ಡ್ ಇಲ್ಲಿನ ನನ್ನ ಏಕಮಾತ್ರ ಮಿತ್ರ ಮತ್ತು ಹಿತೈಷಿ," ಎಂದು ಎಲ್ಲರಿಗೂ ಪರಿಚಯಿಸಿದ ಕುಮಾರನ್. ಕೈಗಳನ್ನು ಬಲವಾಗಿ ಅದುಮುತ್ತ ಹಸ್ತಲಾಘವವನ್ನಿತ್ತು ಬರ್ನಾರ್ಡ್ ಸೋಫಾದಲ್ಲಿ ಆಸೀನರಾದರು. "ಮಿ. ಬರ್ನಾರ್ಡ್ ಮೊದಲು ಮಿಲಿಟರಿ ಸೇವೆಯುಲ್ಲಿದ್ದವರು," ಎಂದು ಕುಮಾರನ್ ದನಿಗೂಡಿಸಿದ. "ಅವರ ಘನ ಹಸ್ತಲಾಘವವೇ ಅದನ್ನು ಸೂಚಿಸಿತು," ಎಂದ ಕುಮಾರನ್ ಮಿತ್ರ ರಾಜನ್. ವಾರ್ಷಿಕ ರಜೆಯ ಕೆಲವು ದಿನಗಳನ್ನು ಕಳೆಯಲು ಆತ ಮಿತ್ರ ವೇಲುವಿನೊಂದಿಗೆ ಮಾನಂತವಾಡಿಗೆ ಬಂದಿದ್ದ.



ಗುಡ್ಡದ ಬದಿಯಲ್ಲಿರುವ ಈ ವಿಶಾಲ ಬಂಗಲೆಯಲ್ಲಿ ಅವಶ್ಯಕತೆಗಳೇನಾದರೂ ಇಲ್ಲವೆಂದು ಹೇಳುವುದಾದರೆ ಅದು ವಿದ್ಯುಚ್ಛಕ್ತಿ. ಸ್ವಾಗತ ಕೋಣೆಯ ಗೋಡೆಯ ಸುತ್ತಲೂ ಇರಿಸಿದ್ದ ಮೆತ್ತನೆಯ ಸೋಫಾಸೆಟ್‌ಗಳ ಮಧ್ಯೆ ದುಂಡು ಮೇಜೊಂದನ್ನಿರಿಸಲಾಗಿತ್ತು. "ಇಲ್ಲಿ ಮುದುಕರ ಕೆಮ್ಮೂ ಇಲ್ಲ, ಮಕ್ಕಳ ಕೇಕೆಯೂ ಇಲ್ಲ. ಕೈಬಳೆಗಳ ಸದ್ದಂತೂ ಇಲ್ಲವೇ ಇಲ್ಲ," ಎಂದು ತನ್ನ ಮೊದಲ ಹಾಸ್ಯಚಟಾಕಿ ಹಾರಿಸಿದ ಕುಮಾರನ್ ಒಳಕೋಣೆಯತ್ತ ನಡೆದು ಮೇಜಿನ ಮೇಲೆ ವಿವಿಧ ಬಣ್ಣ ಮತ್ತು ಆಕಾರದ ಬಾಟಲಿಗಳನ್ನು ಜೋಡಿಸತೊಡಗಿದ. "ಬೀರು, ಬ್ರ್ಯಾಂಡಿ, ರಮ್, ವಿಸ್ಕಿ ಅವರವರ ಆಯ್ಕೆ ಮತ್ತು ಮಿತಿಯಂತೆ ಸ್ವೀಕರಿಸಬಹುದು," ಎಂದು ಆಹ್ವಾನವಿತ್ತ. ಅಷ್ಟರಲ್ಲಿ ಅಡಿಗೆಯ ಅಪ್ಪು ಮೊಟ್ಟೆ, ಕರಿದ ಮಾಂಸ, ಗೋಡಂಬಿ, ಚಿಪ್ಸ್ ತುಂಬಿದ ತಟ್ಟೆಗಳನ್ನೂ ಗ್ಲಾಸುಗಳನ್ನೂ ತಂದು ಮೇಜಿನ ಮೇಲಿರಿಸಿದ. "ಮುಂದಿನ ಕಾರ್ಯಕ್ರಮಕ್ಕೆ ವಿದ್ಯುತ್ ಬೆಳಕಿಗಿಂತ ದೀಪದ ಬೆಳಕೇ ಹಿತ," ಎಂದ ಬರ್ನಾರ್ಡ್.

'ಚಿಯರ್ಸ್' ಎನ್ನುತ್ತ ಗಾಜಿನ ಗ್ಲಾಸುಗಳನ್ನು ಒಂದೊಂದಕ್ಕೆ ಸ್ಪರ್ಶಿಸಿದರು. ಮಾತು, ಹಾಸ್ಯ, ನಗು ಮುಂದುವರಿಯಿತು.

ಗ್ರೀನ್ ಎಸ್ಟೇಟ್ ಮ್ಯಾನೇಜರನಾಗಿ ಕುಮಾರ ಕೆಲಸಕ್ಕೆ ಸೇರಿ ಒಂದು ವರ್ಷದ ಮೇಲಾಗಿತ್ತು. ಆ ಭವ್ಯ ಬಂಗಲೆಯಲ್ಲಿ ಅತ್ಯಧಿಕ ಜನರು ಸೇರಿದ ದಿನ

'ಅದೃಶ್ಯ ತೈಲ'ದ ಸಲಹೆ ಆನಂದನ್‌ಗೆ ಹಿಡಿಸಿತು. ಅದನ್ನು ಮೈಗೆ ಹಚ್ಚಿಕೊಂಡು ಮಾಧವಿ ಇದ್ದ ತಡಿಕೆಯನ್ನು ಸರಿಸಿದ ಅವನಿಗೆ ಕಾದಿದ್ದದ್ದು ಬೇರೆಯೇ ಗತಿ....

ಅದೇ. "ಕುಮಾರನ್, ನಾವಂತೂ ಇಂತಹ ಕಾಡು ಪ್ರದೇಶದಲ್ಲಿ ಎರಡು-ಮೂರು ವರ್ಷ ಕಾಲ ಕಳೆದು ರೂಢಿಯಾಗಿಬಿಟ್ಟಿದೆ. ಹೊಸತಾಗಿ ಕೆಲಸಕ್ಕೆ ಸೇರಿದ ನಿನ್ನ ಅನುಭವಗಳೇನಾದರೂ ಇದ್ದರೆ ಹೇಳಿ ಬಿಡು," ಎಂದ ವೇಲು. "ಅದು ಸರಿ, ಹೊಸ ಅನುಭವಗಳು ಇಂತಹ ಪ್ರದೇಶಗಳಲ್ಲಿ ಇದ್ದೇ ಇರುತ್ತವೆ," ಎಂದು ವಿಸ್ಕಿಯ ಬಾಟಲಿ ಕೈಗೆತ್ತಿ ಕೊಂಡ ರಾಜನ್.

"ಅನುಭವಗಳಿಗೇನು ಕೊರತೆ? ಅಷ್ಟನ್ನೂ ಹೇಳುತ್ತ ಹೋದರೆ ನಾವು ಊಟವನ್ನೇ ಮರೆತು ಬಿಡಬೇಕಾಗುತ್ತದೆ. ಪ್ರಮುಖವಾದದ್ದನ್ನೇ ಹೇಳಿಬಿ ಡುತ್ತೇನೆ," ಎಂದ ಕುಮಾರನ್ ತನ್ನ ಅನುಭವ ವೊಂದನ್ನು ಹೇಳತೊಡಗಿದ.

"ಈ ಅನುಭವದ ಆರಂಭವಾದದ್ದೇ ನಾನು ಮ್ಯಾನೇಜರ್ ಹುದ್ದೆಯನ್ನು ವಹಿಸಿಕೊಂಡ ದಿನ ದಿಂದ. ಮ್ಯಾನೇಜರ್ ಹುದ್ದೆಯ ಜವಾಬ್ದಾರಿಯ ನ್ನೆಲ್ಲ ಹಸ್ತಾಂತರಿಸುತ್ತ ಆಲಿ ಸಾಹೇಬರು ಹೊಸ ತಾಗಿ ಕೆಲಸಕ್ಕೆ ಸೇರುತ್ತಿರುವ ನನಗೆ ಮೂರು ದಿನಗಳ ತರಬೇತಿ ಕೊಟ್ಟರು. ಅಸ್ಪಷ್ಟ ಮನಸ್ಸಿನಿಂದ ಬಂದ ನನಗೆ ನಿವೃತ್ತಿಯಾಗುತ್ತಿರುವ ಆಲಿ ಸಾಹೇ ಬರು ನೀಡಿದ ಮಾಹಿತಿಗಳು ಅನೇಕ. ಅವರ ಸುದೀರ್ಘ ಅನುಭವದಿಂದ ತಿಳಿಸಿದ ವಿಧಿ-ವಿಧಾನ ಗಳಿಂದ ಕೆಲಸವನ್ನು ನಿರ್ವಹಿಸುವ ಧೈರ್ಯವೂ ನನಗೆ ಬಂತು. ಎಲ್ಲವನ್ನೂ ತಿಳಿಸಿದ ಆಲಿ ಸಾಹೇ ಬರು ಕೊನೆಗೊಮ್ಮೆ, ಕುಮಾರನ್, ಒಂದು ವಿಷಯ ಹೇಳಲು ಮರೆತುಬಿಟ್ಟೆ. ನಮ್ಮ ತೋಟದ ಗುಮಾಸ್ತ ಕೃಷ್ಣನ್ ಕುಟ್ಟಿಯ ವಿಷಯದಲ್ಲಿ ಸ್ವಲ್ಪ ಹುಷಾರಾಗಿರು, ಎಂದರು.

" 'ಸರ್, ನಾನು ಲೆಕ್ಕಪತ್ರಗಳ ಮೇಲೆ ಕಣ್ಣಿಟ್ಟು ಎಚ್ಚರಿಕೆ ವಹಿಸಿಕೊಳ್ಳುತ್ತೇನೆ,' ಎಂದೆ.

" 'ಹಾಗೇನೂ ಇಲ್ಲ. ಕೃಷ್ಣನ್ ಕುಟ್ಟಿ ಪ್ರಾಮಾ ಣಿಕ ಕೆಲಸಗಾರ. ಇದೇ ತೋಟದಲ್ಲಿ ಕೆಲಸಕ್ಕೆ ಸೇರಿ ಇಲ್ಲೇ ನಿವೃತ್ತಿ ಹೊಂದುವವನಿದ್ದಾನೆ. ಯಾರೇ ಮ್ಯಾನೇಜರ್ ಆಗಿ ಬರಲಿ, ಅವರ ದೌರ್ಬಲ್ಯಗ ಳನ್ನು ಪತ್ತೆ ಹಚ್ಚಿ ಅವರನ್ನು ತೃಪ್ತಿಪಡಿಸುವುದು ಅವನಿಗೊಂದು ಹವ್ಯಾಸ. ನಿವೃತ್ತಿಯ ನಂತರ ಆ ಹುದ್ದೆ ತನ್ನ ಮಗನಿಗೇ ದೊರಕುವಂತಾಗಬೇಕೆಂದು ಆಶೆ ಇಟ್ಟುಕೊಂಡಿದ್ದಾನೆ, ಎಂದರು ಆಲಿ ಸಾಹೇ ಬರು...."

"ಅದರಲ್ಲೇನೂ ತಪ್ಪಿಲ್ಲವಲ್ಲ. ಗೋಡಂಬಿ ಖಾಲಿಯಾಯಿತು. ಇನ್ನಷ್ಟು ತರಿಸು," ಎಂದ ರಾಜನ್.

"ಮುಂದೇನಾಯಿತು ?" ಎಂದ ವೇಲು.

"ಮುಂದೇನೂ ನಡೆಯಲಿಲ್ಲ. ಎಲ್ಲವೂ ಸುಸೂತ್ರವಾಗಿ ನಡೆಯುತ್ತಿತ್ತು. ಒಬ್ಬಂಟಿಯಾಗಿ ಸಮಯ ಕಳೆಯುವುದು ಬೇಸರ ಬರಿಸಿತ್ತು. ಕೇರಳ ಮಂತ್ರವಾದಿಗಳ ತವರೂರು. ಮಂತ್ರವಾದದಿಂದ ಅವರು ತಮ್ಮ ಕೆಲವೊಂದು ಸಂಕಷ್ಟಗಳನ್ನು ನಿವಾ ರಿಸಿಕೊಳ್ಳಬಲ್ಲರು. ಇಂತಹ ಮಂತ್ರವಾದಿಗಳು ಪ್ರತಿ ಹಳ್ಳಿಯಲ್ಲಿಯೂ ಇರುತ್ತಾರೆ ಎಂದು ಕೇಳಿದ್ದೆ. ಬಿಡುವಿನ ವೇಳೆ ಸ್ವಲ್ಪ ಮಂತ್ರವಾದ ಕಲಿಯಬೇ ಕೆಂಬ ಬಯಕೆಯುಂಟಾಯಿತು."

"ಹ್ಹೊ ಹ್ಹೊ ಹ್ಹೋ... ಈಗ ಅರ್ಥವಾ ಯಿತು. ವಿಸ್ಕಿಗೆ ಯಾಕೆ ಬ್ರಾಂದಿಯ ವಾಸನೆ ಬಂತೆಂದು. ಏನೋ ಮಂತ್ರವಾದ ಮಾಡಿರುವಿ," ಎಂದ ಬರ್ನಾರ್ಡ್.

"ಸಾಕು ಬಿಡಿ. ನಾವೀಗ ಮಂತ್ರವಾದಿಯೊ ಬ್ಬನ ಅಧೀನದಲ್ಲಿದ್ದೇವೆ. ಹುಷಾರಾಗಿರಿ. ಹೇಳು, ಹೇಳು..." ಎಂದ ರಾಜನ್.

"ನನ್ನ ಬಂಗಲೆಯ ಕಾವಲುಗಾರ ಕಣ್ಣನ್ ವಯಸ್ಸಾದವ. ಪ್ರಾಮಾಣಿಕ ಮನುಷ್ಯ. ರಾತ್ರಿ ಕಾಲ ನನ್ನೊಂದಿಗೆ ಮಾತುಕತೆಯಲ್ಲಿ ಸ್ವಲ್ಪ ಸಮಯ ಕಳೆಯುವುದೂ ಇತ್ತು. ಒಂದು ದಿನ ಕಣ್ಣನ್‌ನೊಡನೆ ಈ ವಿಷಯ ಪ್ರಸ್ತಾಪಿಸಿದೆ.

"ಅವನೆಂದ- 'ಸ್ವಾಮಿ, ಈ ಮಂತ್ರವಾದವನ್ನು ಹೊರತುಪಡಿಸಿ ಯಾವ ವಿದ್ಯೆಯನ್ನಾದರೂ ಕಲಿ ಯಿರಿ. ಈ ಮಂತ್ರವಾದದ ಮೇಲಿನ ನಂಬಿಕೆಯಿಂ ದಾಗಿಯೇ ಗ್ರೀನ್ ಎಸ್ಟೇಟಿನಲ್ಲಿ ನಡೆಯಬಾರದಂಥ ಒಂದು ಘಟನೆ ಹಲವು ವರ್ಷಗಳ ಹಿಂದೆ ನಡೆದು ಹೋಗಿದೆ,' ಎಂದ. ನನಗೆ ಕುತೂಹಲ ಉಂಟಾ ಯಿತು."

"ಮಂತ್ರವಾದದಲ್ಲಿರುವುದೆಲ್ಲ ಕುತೂಹಲಕಾ ರಿಯೇ. ಇನ್ನೊಂದು ಬೀರ್ ಬಾಟ್ಲಿ ಬೇಕಾಗಿದೆ. ಕುಮಾರನ್ ನೀನು ಕಥೆ ಮುಂದುವರಿಸು," ಎಂದ ವೇಲು.

" 'ಕಣ್ಣನ್, ಅದೇನು ಘಟನೆ ಸಂಭವಿಸಿತು

ವಿವರವಾಗಿ ಹೇಳಿಬಿಡು,' ಎಂದೆ. ಆತ ಹೆಗಲ ಮೇಲಿದ್ದ ತುಂಡು ವಸ್ತ್ರವನ್ನು ನೆಲಕ್ಕೆ ಹಾಸಿ, 'ಸರ್, ಕಡತಗಳನ್ನು ಪರಿಶೀಲಿಸಿದರೆ ಹಿಂದೊಮ್ಮೆ ಆನಂದನ್ ಎಂಬುವರು ಇಲ್ಲಿ ಮ್ಯಾನೇಜರರಾಗಿದ್ದರು ಎಂದು ನಿಮಗೆ ತಿಳಿಯಬಹುದು,' ಎಂದು ಕಥೆ ಹೇಳಿ ಮುಗಿಸಿದ. ಕಣ್ಣನ್ ಹೇಳಿದ ಕಥೆಯನ್ನು ನಾನು ನಿಮಗೆ ಹೇಳುತ್ತಿದ್ದೇನಷ್ಟೇ," ಎಂದ ಕುಮಾರನ್.

"ಆನಂದನ್ ಒಬ್ಬ ಉತ್ಸಾಹಿ ತರುಣ. ರಸಿಕ ಕೂಡ. ತೋಟದಲ್ಲಿ ಸುತ್ತಾಡುತ್ತ ಬಹಳ ಹೊತ್ತು ಕಳೆಯುತ್ತಿದ್ದ. ನಮ್ಮ ಗುಮಾಸ್ತ ಕೃಷ್ಣನ್ ಕುಟ್ಟಿ ಅವನ ಚಲನವಲನಗಳನ್ನು ಗಮನಿಸುತ್ತ ಇದ್ದ. ವಯಸ್ಸೂ, ಅನುಭವವೂ ಸಾಕಷ್ಟಿದ್ದ ಕುಟ್ಟಿ ಆನಂದನ್‌ನ ಅವಶ್ಯಕತೆ ಏನು ಎಂಬುದನ್ನು ಕಂಡುಹಿಡಿದುಬಿಟ್ಟ."

"ಅವನಿಗೂ ಕುಡಿಯುವ ಚಟವಿದ್ದಿರಬೇಕು, ನಮ್ಮ ಹಾಗೆ," ಎಂದ ರಾಜನ್.

"ಇಲ್ಲ. ಅವನಿಗೆ ಕುಡಿಯುವ ಚಟವಿರಲಿಲ್ಲ. ಹುಡುಗಿಯರ ಹುಚ್ಚಿತ್ತು ಅಷ್ಟೆ. ಕೃಷ್ಣನ್ ಕುಟ್ಟಿ ಸಹಾಯ ಮಾಡುವ ಮಾತು ಕೊಟ್ಟ. ಆನಂದನ್ ಒಪ್ಪಿಬಿಟ್ಟ. ಕುಟ್ಟಿಗೆ ಆಕಾಶದಲ್ಲಿದ್ದ ನಕ್ಷತ್ರಗಳೆಲ್ಲ ಕೈಗೆಟುಕುವ ದೂರದಲ್ಲಿ ಚಲಿಸಿದಂತಾಯಿತು. ತೋಟದಲ್ಲಿ ಕೆಲಸ ಮಾಡುತ್ತಿದ್ದ ಮಾಧವಿ ಎಂಬ ಮಾದಕ ಹೆಣ್ಣನ್ನು ಆನಂದನ್‌ನಿಗೆ ಅವನು ಪರಿಚಯಿಸಿದ.

"ಆದರೆ ಎಲ್ಲವೂ ಎಣಿಸಿದಷ್ಟು ಸುಗಮವಾಗಿರಲಿಲ್ಲ. ಮಾಧವಿ ಕೆಲಸದ ವೇಳೆ ಇತರ ಕೆಲಸಗಾರರೊಂದಿಗೆ ತೋಟದಲ್ಲಿರಬೇಕಾಗಿತ್ತು. ಸಂಜೆ ಮನೆ ಮಂದಿಯೊಂದಿಗೆ ಮನೆ ಸೇರಬೇಕಾಗಿತ್ತು. ಅವಳ ಮನೆಯಲ್ಲಿ ತಂದೆ-ತಾಯಿ, ಅಕ್ಕ, ಅಣ್ಣ ಮಕ್ಕಳು-ಮರಿಯೆಂದು ಸುಮಾರು ಹನ್ನೆರಡು ಮಂದಿಯಿದ್ದರು.

"ಆನಂದನ್ ಮ್ಯಾನೇಜರ್‌ಗೆ ದೊಡ್ಡ ಸಮಸ್ಯೆಯಾಯಿತು. ಕೃಷ್ಣನ್ ಕುಟ್ಟಿಯನ್ನು ಕರೆದು ತನ್ನ ಸಮಸ್ಯೆಯನ್ನು ಹೇಳಿಕೊಂಡ. ಮ್ಯಾನೇಜರನಿಗಾಗಿ ಕೃಷ್ಣನ್ ಯಾವ ಸಲಹೆ ನೀಡಲೂ ಸಿದ್ಧವಾಗಿದ್ದ. ತುಸು ಯೋಚಿಸಿ ಅವನೆಂದ-

" 'ಸರ್, 'ಅದೃಶ್ಯ ತೈಲ' ಎಂಬ ತೈಲವೊಂದಿದೆಯಂತೆ. ಅದನ್ನು ಸಂಪೂರ್ಣ ಮೈಮೇಲೆ ಹಚ್ಚಿಕೊಂಡರೆ ಮನುಷ್ಯ ಅದೃಶ್ಯನಾಗಿಬಿಡುತ್ತಾನಂತೆ. ಅಂದರೆ ಅವನ ಆಕೃತಿ ಇತರರಿಗೆ ಗೋಚರಿಸುವುದೇ ಇಲ್ಲ. ಅದನ್ನು ತಾವು ಉಪಯೋಗಿಸಿದರೆ ಹೇಗೆ ?' ಎಂದ ಕುಟ್ಟಿ.

"ಹೌದು, ಹೌದು. ಈಗ ಯಾವುದಕ್ಕೂ ತೈಲಗಳಿವೆ. ಕೀಲು ಜೋಡಣೆಯಿಂದ ಹಿಡಿದು ಕೇಶವರ್ಧಕಗಳವರೆಗೆ. ಆದರೆ ಅದೃಷ್ಟಕ್ಕೂ ಒಂದು ತೈಲವಿದೆ ಎಂದರೆ ಆಶ್ಚರ್ಯ," ಎಂದ ಬರ್ನಾರ್ಡ್.

"ಮೇಜರ್ ಬರ್ನಾರ್ಡ್, ನೀನು ಸ್ವಲ್ಪ ಹೆಚ್ಚು ಕುಡಿದಿರುವೆ ಎಂದು ಕಾಣಿಸುತ್ತಿದೆ. ಅದೃಷ್ಟ ತೈಲವಲ್ಲ ಅದು, ಅದೃಶ್ಯ ತೈಲ," ಎಂದ ವೇಲು.

"ಯಾವುದೇ ಇರಲಿ ಮುಂದುವರಿಸು," ಎಂದು ಗ್ಲಾಸ್ ಭರ್ತಿ ಮಾಡಿಕೊಂಡ ಬರ್ನಾರ್ಡ್. ಕುಮಾರನ್ ಮುಂದುವರೆಸಿದ.

" 'ಕೃಷ್ಣನ್ ಕುಟ್ಟಿ, ತುಂಬಾ ಒಳ್ಳೆಯ ಸಲಹೆ ಕೊಟ್ಟೆ. ಅದೃಶ್ಯ ತೈಲವನ್ನು ಒದಗಿಸಿ ಕೊಡುವುದು ನಿನ್ನ ಕೆಲಸವೇ. ನಿನಗೇನು ಬೇಕು ? ಹೇಳಿಬಿಡು,' ಎಂದ ಆನಂದನ್.

" 'ಸರ್, ನನಗೇನೂ ಬೇಕಾಗಿಲ್ಲ. ನನ್ನ ನಿವೃತ್ತಿಯ ನಂತರ ನನ್ನ ಕೆಲಸ ನನ್ನ ಮಗನಿಗೇ ಸಿಗುವಂತೆ ಸಹಾಯ ಮಾಡಿ ಅಷ್ಟೆ.'

" 'ಅಷ್ಟೇ ತಾನೇ. ಆ ಕೆಲಸ ಆಯಿತು ಎಂದು ತಿಳಿ. ಕೂಡಲೇ ಅದೃಶ್ಯ ತೈಲ ತರುವ ಕೆಲಸ ಪ್ರಾರಂಭಿಸು' ಎಂದ ಆನಂದನ್.

"ಕುಟ್ಟಿ ಹೇಳಿದ- 'ಸಾರ್, ಅದೃಶ್ಯ ತೈಲ ಅಷ್ಟು ಸುಲಭವಾಗಿ ದೊರೆಯುವ ವಸ್ತುವಲ್ಲ. ನನಗೆ ತಿಳಿದ ಹಾಗೆ ಇಲ್ಲಿಂದ ೨೪ ಮೈಲು ದೂರದ ಹಳ್ಳಿಯಲ್ಲಿರುವ ಚಂದನ್ ವಾರಿಯಾರ್ ಅದನ್ನು ತಯಾರಿಸುತ್ತಾರೆಂದು ಜನರು ಹೇಳುತ್ತಾರೆ. ಅದರ ತಯಾರಿ ಬಹಳ ಗುಟ್ಟಾಗಿ ನಡೆಯಬೇಕು. ಅದರ ತಯಾರಿಗೆ ಅಮೂಲ್ಯ ಗಿಡಮೂಲಿಕೆಗಳನ್ನು ಸಂಗ್ರಹಿಸಬೇಕು. ಅವಶ್ಯವಿರುವ ಇನ್ನಿತರ ವಸ್ತುಗಳ ಹೆಸರು ಕೇಳಿದರೇ ಮೈ ನಡುಗುತ್ತದೆ. ಔಡಲದ ಎಣ್ಣೆ, ಶಾಲ್ಮಲಿ ಮರದ ಅಂಟು, ಕೆಂಪು ಅಳಿಲಿನ ಕೊಬ್ಬು, ಕಪ್ಪು ನಾಯಿಯ ಎಡಗಣ್ಣು, ಕಾಳಿಂಗ ಸರ್ಪದ ರಕ್ತ, ಒಂದು ತಿಂಗಳ ಹೆಣ್ಣು ಮಗುವಿನ

ಭ್ರೂಣ! ಇತ್ಯಾದಿ... ಆನಂದನ್ ಬೆವರತೊಡಗಿದ. ತಲೆ ತಿರುಗಿತು.

"ಎಳೆ ಬಾಳೆಎಲೆಯಲ್ಲಿ ಕೆಂಪು ನೂಲಿನಿಂದ ಸುತ್ತಿದ ಅದೃಶ್ಯ ತೈಲದ ಬಾಟಲಿ ಹಿಡಿದು ಅಂದು ಸಂಜೆ ಕೃಷ್ಣನ್ ಕುಟ್ಟಿ ಬಂಗಲೆಯೊಳಗೆ ಕಾಲಿಟ್ಟ. ನಡುಗುವ ಕೈಗಳಿಂದ ಬಾಟಲಿಯನ್ನು ಆನಂದನ್ ಕೈಗಿತ್ತು ತೈಲವನ್ನು ಉಪಯೋಗಿಸುವ ಕುರಿತು ಕೆಲವು ಸೂಚನೆಗಳನ್ನಿತ್ತ.

" 'ಸರ್, ತೈಲದ ಬಾಟ್ಲಿ ಯಾವ ಸಂದರ್ಭದಲ್ಲಿಯೂ ಮಣ್ಣನ್ನು ಸಂಪರ್ಕಿಸದಂತೆ ಎಚ್ಚರವಹಿಸಬೇಕಂತೆ. ಕತ್ತಲು ಕವಿದ ನಂತರ ತಣ್ಣೀರು ಸ್ನಾನ ಮಾಡಿ ತೈಲ ಹಚ್ಚಿಕೊಳ್ಳಬೇಕು... ಅದೃಶ್ಯದ ಅವಧಿ ಅಂತ್ಯವಾಗಬೇಕೆಂದಾಗ ಮೈಮೇಲೆ ಅರಿಶಿನದ ಲೇಪನ ಹಚ್ಚಿ ಬಿಸಿನೀರಿನ ಸ್ನಾನ ಮಾಡಬೇಕಂತೆ,' ಎಂದ. ಆನಂದನ್ ಎಲ್ಲವನ್ನೂ ಪಾಲಿಸಲು ಸಿದ್ಧನಿದ್ದ."

ಸಿಗರೇಟು ಹೊಗೆ ಬಿಡುತ್ತ ಬರ್ನಾರ್ಡ್, "ಇನ್ನೇನು ಅದೃಶ್ಯವಾಗುವ ಸಮಯ ಬಂದಾಯಿತು. ಬಾಟಲಿಗಳಲ್ಲಿರುವ ವಸ್ತುಗಳ ಮಟ್ಟವೂ ಕಡಿಮೆಯಾಗುತ್ತಿದೆ. ಕುಮಾರನ್... ಮುಂದಕ್ಕೆ?" ಎಂದ.

"ಅಮಾವಾಸ್ಯೆಯ ಕತ್ತಲು ಗುಡ್ಡ-ಬೆಟ್ಟಗಳನ್ನಾವರಿಸಿತ್ತು. ದಟ್ಟ ಎಲೆಗಳ ಸಮೂಹದಿಂದ ಮಿಂಚು ಹುಳುಗಳು ಬೆಳಕನ್ನು ಹೊರಸೂಸುತ್ತಿದ್ದವು. ಮರಗಳ ಮೇಲಿಂದ ಗೂಬೆಗಳ ಕೂಗು ಕೇಳಿಸುತ್ತಿತ್ತು. ರಾತ್ರಿ ಹನ್ನೆರಡು ಗಂಟೆಯ ಸಮಯ. ಅದೃಶ್ಯ ತೈಲವನ್ನು ಹಚ್ಚಿಕೊಂಡ ಆನಂದನ್ ನಿಧಾನವಾಗಿ ಕಾರ್ಮಿಕರ ವಸತಿ ಕಟ್ಟಡಗಳ ಸಾಲಿನತ್ತ ನಡೆದು ತಲುಪಬೇಕಾಗಿದ್ದ ಸ್ಥಳವನ್ನು ಸಮೀಪಿಸಿದ. ಮಾಧವಿಯ ಮನೆಯ ಬದಿರಿನ ಬಾಗಿಲುಗಳು ಮುಚ್ಚಿದ್ದವು. ಬೆಕ್ಕಿನ ಹೆಜ್ಜೆಗಳನ್ನಿಡುತ್ತ ಆನಂದನ್ ಬಾಗಿಲು ಸರಿಸಿದ. ಒಳಗಿನ ಕೋಣೆಯಲ್ಲಿ ಅಡ್ಡಾದಿಡ್ಡಿಯಾಗಿ ಮನೆಯವರೆಲ್ಲ ನಿದ್ರಿಸುತ್ತಿದ್ದರು. ಮಲಗಿದ್ದವರ ಮಧ್ಯೆ ಹೆಜ್ಜೆಯಿಡುತ್ತ ಆನಂದನ್ ಮಾಧವಿಯನ್ನು ಗುರುತಿಸಲು ಶ್ರಮಪಟ್ಟ. ಕೊನೆಗೊಮ್ಮೆ ಆಯತಪ್ಪಿ ಯಾರದೋ ಹೊಟ್ಟೆಯ ಮೇಲೆ ಕಾಲಿಟ್ಟ.

"ಕಾಲ್ತುಳಿತಕ್ಕೊಳಗಾದ ಹುಡುಗ 'ಅಯ್ಯೋ' ಎಂದು ಬೊಬ್ಬಿಟ್ಟ. ಎಲ್ಲರೂ ಎಚ್ಚರಗೊಂಡರು. ಕತ್ತಲಲ್ಲಿ ಪರದಾಡುತ್ತಿದ್ದ ವ್ಯಕ್ತಿಯನ್ನು ಒತ್ತಿ ಹಿಡಿದು ಗುದ್ದತೊಡಗಿದರು. ಮಾಧವಿ ಮನೆಯಲ್ಲಿನ ಆರ್ತನಾದಕ್ಕೆ ಪಕ್ಕದ ಮನೆಗಳ ಯುವಕರೂ ಧಾವಿಸಿ ಬಂದರು. ವ್ಯಕ್ತಿ ಸಿಕ್ಕಿಬಿದ್ದಿದ್ದಾನಲ್ಲ! ಕಳ್ಳನೆಂದು ಪ್ರತಿಯೊಬ್ಬರೂ ಹೊಡೆದರು; ಗುದ್ದಿದರು; ಒದ್ದರು. ಅಷ್ಟರಲ್ಲಿ ಚಿಮಣಿ ದೀಪ ಹಚ್ಚಲಾಗಿತ್ತು. ಅಪರಿಚಿತ ಏಟು ತಿಂದು ಸೋತು ಹೋಗಿದ್ದ. ದೀಪವನ್ನು ವ್ಯಕ್ತಿಯ ಮುಖದ ಸಮೀಪ ಎತ್ತಿ ಹಿಡಿದರು.

" 'ಅಯ್ಯೋ, ಆನಂದನ್ ಮ್ಯಾನೇಜರ್,' ಎಂದು ಒಬ್ಬರಿಗೊಬ್ಬರ ಮುಖ ನೋಡಿದರು. ಅದೃಶ್ಯ ತೈಲ ಪರಿಣಾಮ ಬೀರಿರಲಿಲ್ಲ! 'ಸಾರ್, ನೀವೇನು ಇಲ್ಲಿ? ಬನ್ನಿ, ಬನ್ನಿ' ಎಂದು ನಾಲ್ಕಾರು ಮಂದಿ ಚಿಮಣಿ ದೀಪ ಹಿಡಿದು ಆನಂದನ್‌ನನ್ನು ಬಂಗಲೆಗೆ ತಲುಪಿಸಿ ಹೊರಟು ಹೋದರು."

ಎಲ್ಲರೂ ಚಪ್ಪಾಳೆ ತಟ್ಟಿ ಜೋರಾಗಿ ನಕ್ಕುಬಿಟ್ಟರು. ಅಪ್ಪು ಬಾಗಿಲ ಬಳಿ ನಿಂತಿದ್ದ.

"ಸಾರ್, ಗಂಟೆ ಹನ್ನೆರಡಾಯಿತು. ಬಿರಿಯಾನಿ ತಣ್ಣಗಾಗುತ್ತಿದೆ. ನೀವು ಇನ್ನೂ ಮಾತನಾಡುತ್ತ ಕಾಲಕಳೆದರೆ ನನ್ನ ಶ್ರಮವೆಲ್ಲ ವ್ಯರ್ಥವಾದಂತೆ," ಎಂದ.

"ಸರಿ, ಸರಿ. ಇಲ್ಲಿ ನಾವೆಷ್ಟು ಮಂದಿ ಇದ್ದೇವೆ? ಲೆಕ್ಕ ಹಾಕಿ ಹೇಳು" ಎಂದ ವೇಲು.

"ನಾಲ್ಕು ಮಂದಿ ಇದ್ದೀರಿ ಸರ್!" ಎಂದ ಅಪ್ಪು.

"ಸದ್ಯ ಯಾರೂ ಅದೃಶ್ಯರಾಗಿಲ್ಲವಲ್ಲ. ಮುಂದೊಂದು ದಿನ ಪರಿಣಾಮಕಾರಿಯಾದ ಅದೃಶ್ಯ ತೈಲ ಮಾರುಕಟ್ಟೆಗೆ ಬರಬಹುದು," ಎಂದು ತೂಕಡಿಸುತ್ತ ಎಲ್ಲರೂ ಊಟದ ಮೇಜಿನತ್ತ ನಡೆದರು. ●

---

ಕಾರುಣ್ಯದ ಕೃತಿ ಮಾಡುವುದು ಜೀವನ ವ್ಯಾಪಾರದ ಬಹುಮೂಲ್ಯ ಭಾಗ.

ಸ್ಯಾಮ್ಯುಯಲ್ ಜಾನ್ಸನ್

# ಮೊಯಿಲಿಯುವರ ಕಾದಂಬರಿಗಳು



• ಪ್ರೊ. ಸುನೀತಾ ಶೆಟ್ಟಿ

ವಕೀಲ ವೃತ್ತಿಯನ್ನು ಆಯ್ದುಕೊಂಡ ವೀರಪ್ಪ ಮೊಯಿಲಿಯವರ ಸಾಹಿತ್ಯಾಭಿರುಚಿ ಕಥನ ಕಲೆಗೆ ದಾರಿ ಮಾಡಿಕೊಟ್ಟಿತೇನೋ ಎನ್ನುವ ಊಹೆಗಿಂತಲೂ ರಾಜಕಾರಣಿಯಾಗಿ ಬೆಳೆಯುತ್ತಿದ್ದ ವ್ಯಕ್ತಿಯೊಬ್ಬನು ತನ್ನ ಜೀವಿತದ ಹಂತ ಹಂತವನ್ನು ಪರಿಷ್ಕಾರಗೊಳಿಸುವ ಸಾಧನೆಗೆ, ಕಥೆ ಗಾರಿಕೆಯನ್ನು ಒಂದು ಮಾಧ್ಯಮವನ್ನಾಗಿ ಆಯ್ದುಕೊಂಡನೆಂಬುದು ಹೆಚ್ಚು ಪ್ರಸ್ತುತವೆನಿಸುತ್ತದೆ. ಅವರ ಮೊದಲ ಕಾದಂಬರಿ 'ಸುಳಿಗಾಳಿ'ಯ 'ನನ್ನ ಮಾತು' "ಇಲ್ಲಿ ಪ್ರಸಕ್ತ ಸಮಾಜ ಎದುರಿಸುತ್ತಿರುವ ಆರ್ಥಿಕ, ಸಾಮಾಜಿಕ ಹೋರಾಟಗಳ ನೈಜ ಚಿತ್ರಣವನ್ನು ಓದುಗರ ಮುಂದಿಡಲು ಪ್ರಯತ್ನಿಸಿದ್ದೇನೆ"- ಎಂಬ ಹೇಳಿಕೆಯಾಗಲೀ- "ಮೌಲ್ಯಾಧಾರಿತ ಸಮಾಜದ ಸ್ಥಾಪನೆಗೆ ನಿರಂತರ ಹೋರಾಟದ ಅಗತ್ಯವಿದೆಯೇ ಹೊರತು ವ್ಯವಸ್ಥೆಯ ಸಮಾಜದ ರಕ್ಷಣೆಯಲ್ಲ"- ಎಂಬ ಆದರ್ಶವಾದವಾಗಲಿ, ಬದುಕಿನಲ್ಲಿ ಹೋರಾಟವು ಮುಖ್ಯವೆನಿಸುವುದರ ಕಡೆಗೆ ಹೆಚ್ಚು ಒತ್ತು ಕೊಡುವುದನ್ನು ಗಮನಿಸಬಹುದಾಗಿದೆ.

ಕಿತ್ತು ತಿನ್ನುವ ಬಡತನದ ನಡುವೆಯೂ ವಿದ್ಯೆಯ ಹಸಿವುಳ್ಳ ಮಾಧವ, ಬೆಳಗಿನ ತಂಗಳನ್ನ, ಮಧ್ಯಾಹ್ನಕ್ಕೆ ಎರಡು ಬೇಯಿಸಿದ ಗೆಣಸು ಇಷ್ಟರಲ್ಲೆ ಕ್ಷುಧಾ ಬಾಧೆ ತೀರಿಸಿಕೊಂಡು, ದಿನವೂ ಶಾಲೆಗಾಗಿ ಮೂರು ಮೈಲಿ ನಡೆಯುವ ಸಾಹಸ ಮಾಡುವುದು, ಬೈಲಾರೆಯ ಬಯಲುಗದ್ದೆ ಸೇರಿದಾಗ ಸುತ್ತಲಿನ ಪ್ರಕೃತಿಗೆ ಮಾರು ಹೋಗುವುದು, ಸೋದರಮಾವ ವೆಂಕಪ್ಪನ ಮಗಳು ವನಜ, ಪ್ರಣಯಾಂತರಂಗದಲ್ಲಿ ಅಲೆಗಳನ್ನೆಬ್ಬಿಸುವುದು, ಆಟ-ಪಾಠಗಳಲ್ಲಿ ಪ್ರಚಂಡನೆನಿಸುವುದು, ಕಾಲೇಜಿನಲ್ಲಿ ನೃತ್ಯಗಾತಿ ಶಾಂತಾಳ ಸರಳ ಮುಗ್ಧತೆಗೆ ಸೋತು ಕಲಾರಾಧಕನಾಗಿ ಬೆಳೆಯುತ್ತಿರುವುದು, ಮಾಧವನಿಗಾಗಿ ಕಾಯುತ್ತ ಕುಳಿತ ಗಿರಿಜೆ ಕೊನೆಗೂ ಆಸೆಯ ತಂತು ಹಿಡಿದು ಮುಂಬಯಿ ಸೇರು

(ಕೃಪೆ: 'ಕರ್ನಾಟಕ ಮಲ್ಲ', ಮುಂಬಯಿ)

ವುದು, ಅಪಘಾತದಲ್ಲಿ ಒಂದು ಕಾಲು ಕಡಿದು ಕೊಂಡ ಗಿರಿಜೆಯನ್ನು ನಾಗಪ್ಪನು ತಂಗಿಯಂತೆ ಸಲಹುವುದು, ಅಂತ್ಯದಲ್ಲಿ ಎಲ್ಲವೂ ಶುಭವೆನ್ನುವಂತೆ ಮಾಧವ-ಗಿರಿಜೆಯವರ ಸಮಾಗಮ- ಇಷ್ಟು ಘಟನೆಗಳ ನಡುವೆ ಹೆಣೆಯಲ್ಪಟ್ಟ 'ಸುಳಿಗಾಳಿ' ಕಾದಂಬರಿಯು ಲೇಖಕನ ಆಸೆ, ಆಶೋತ್ತರಗಳನ್ನು, ಕೆಟ್ಟ ಸಮಾಜದ ಬಗೆಗಿನ ಭರ್ತ್ಸನೆಗಳನ್ನು ಆದರ್ಶದ ಸುಳಿಯಲ್ಲಿ ಸಿಕ್ಕು ಪಡುವ ತೊಳಲಾಟವನ್ನು ತೆರೆದಿಡುತ್ತದೆ. ಅಲ್ಲಲ್ಲಿ ಭಾಷಣಕಾರನಂತೆ ಮತ್ತೊಮ್ಮೆ ನೀತಿ ಬೋಧಕನಂತೆ, ಮಗದೊಮ್ಮೆ ಚೆಲುವಿನ ಆರಾಧಕನಂತೆ ನಮ್ಮ ಮುಂದೆ ಸುಳಿಯುವ ಲೇಖಕ, ಏನನ್ನೋ ಹೇಳಹೊರಟಿದ್ದಾನಲ್ಲ ಎಂಬಂತಾಗಿ ಓದಿ ಮುಗಿಸುವ ಚಪಲ ಬೆಳೆಯುತ್ತದೆ. ಬಡ ವರ್ಗದ ಪ್ರತಿನಿಧಿಯಾಗಿ ಮೌಲ್ಯಗಳನ್ನು ಜೋಪಾಸನೆ ಮಾಡುವ ಹಟದಲ್ಲಿ ಭವಿಷ್ಯವನ್ನು ಕಟ್ಟಲೆತ್ನಿಸುವ ಮಾಧವ, ಕೆಲವೊಮ್ಮೆ ಭಾವನೆಗಳ ದ್ವಂದ್ವಕ್ಕೆ ಬಲಿಯಾಗಿ ತನ್ನ ಮೂಲ ಅಸ್ತಿತ್ವವನ್ನು ಬಿಗಿ ಹಿಡಿಯಲಾಗದ ಪೇಚಾಟದಲ್ಲಿ ಗಿರಿಜೆಯಿಂದ ದೂರ ಸರಿಯುತ್ತಾನೆ. ಅನ್ಯಾಯದ ವಿರುದ್ಧ ಪ್ರತಿಭಟನೆ, ಹೋರಾಟಗಳನ್ನು ನಡೆಸಿಯೂ ಪ್ರಾಮಾಣಿಕ ನಿಲುವಿನಲ್ಲಿ ಹೀಗೆ ಸೋಲು ಅನುಭವಿಸುವ ನಾಯಕ ದೌರ್ಬಲ್ಯದ ಪ್ರತೀಕವಾಗಿ ಕಾಣಿಸುವ ಹಂತದಲ್ಲಿ ಮಾತ್ರ ಕಾದಂಬರಿ ತನ್ನ ಗಟ್ಟಿತನವನ್ನು ಉಳಿಸಿಕೊಳ್ಳಲಾಗದ ಸ್ಥಿತಿಗೆ ತಲುಪಿದ್ದರ ಅರಿವಾಗುತ್ತದೆ. ಇದ್ದಕ್ಕಿದ್ದಂತೆ ಶಾಂತಾಳ ಸಮ್ಮುಖದಲ್ಲಿ ಅವನಿಗೆ ಗಿರಿಜೆಯ ನೆನಪು ಉಮ್ಮಳಿಸಿ ಬರುವುದು. ಅವಳಿಲ್ಲದೆ ಬದುಕಿಲ್ಲ ಎಂಬ ಪೂರ್ವಸ್ಥಿತಿಗೆ ಮರಳುವುದು; ಇವು ಒಂದು ಕ್ಷಣದ ಉದ್ದೀಪನಗಳೆನಿಸದೆ, ಅಂತಃಪ್ರಜ್ಞೆಯನ್ನು ಕೆಣಕುತ್ತಿರುವ ಸಮಷ್ಟಿಪ್ರಜ್ಞೆಯಾಗಿ ಮೂಡಿ ಬಂದಿದ್ದರೆ, ಒಬ್ಬ ಆದರ್ಶ ನಾಯಕ ಪರಿಪೂರ್ಣನಾಗಿ ರೂಪು ಪಡೆಯುವುದು ಸಾಧ್ಯವಿತ್ತು. (ದೌರ್ಬಲ್ಯಗಳ ಹೊರತಾಗಿಯೂ.)

ಮೊದಲೇ ಹೇಳಿದಂತೆ ಇದು ಮೊಯಿಲಿಯವರ ಪ್ರಥಮ ಕಾದಂಬರಿ. ಲೇಖಕ ಬೆಳೆದಂತೆಲ್ಲ, ಅನುಭವದ ಪರಿಧಿ ವಿಸ್ತೃತಗೊಂಡಂತೆಲ್ಲ, ಜಗತ್ತನ್ನು ನೋಡುವ ದೃಷ್ಟಿ ಹೆಚ್ಚು ಚಿಕಿತ್ಸಕವಾಗಿ, ಸಂಯಮಶೀಲತೆಯಿಂದ ಪರಿಪಕ್ವಗೊಂಡು ತಾದಾತ್ಮ್ಯತೆಯ ಪೂರ ಕಳಚುತ್ತ ಸಾಗಬೇಕಾಗುತ್ತದೆ. ಅನುಭವಗಳು ಕೂಡ ದೃಶ್ಯಗಳನ್ನು ತೇಲಿಬಿಡುವ ಸಾಧ್ಯತೆಗಳು ಉಂಟೆಂಬುದರ ಅರಿವಿನಲ್ಲೇ ಲೇಖಕ ಪ್ರಬುದ್ಧನಾಗುತ್ತಾನೆ. ಅತಿಭಾವುಕತೆ ಅರಿವಿಗೊಂದು ಮಾರಕವೆಂಬ ಎಚ್ಚರವು ಬರವಣಿಗೆಯ ತೂಕವನ್ನು ಕಾಯ್ದುಕೊಳ್ಳಲು ಸಮರ್ಥವಾಗುತ್ತದೆ. ಅವರ ಎರಡನೆಯ ಕಾದಂಬರಿ 'ಸಾಗರ ದೀಪ' ಇಂಥದೊಂದು ಭರವಸೆ ಹೊಮ್ಮಿಸುವ ಕೃತಿಯಾಗುತ್ತದೆ.

ಮೊಯಿಲಿಯವರ ಅಂತರಂಗದ ಕೆಲವು ಸುಸ್ಪಷ್ಟ ವಿಚಾರಗಳು ಪ್ರಗತಿಶೀಲ ಮಾದರಿಯವು. ಪುರೋಗಾಮಿ ಎನಿಸಬಹುದಾದೆಡೆಯಲ್ಲಿ ಹಾಗೆ ಆಗಗೊಡದ ಚಾಣಾಕ್ಷತನವೂ ಇದೆ. ಗಾಂಧಿಯವರಂತೆ ತಾಯಿ ಕೆಂಚಮ್ಮನ ಪಾದ ಮುಟ್ಟಿ "ಅನೀತಿಯ ಯಾವ ಕೆಲಸವನ್ನೂ ಮಾಡಲಾರೆ" ಎಂದು ಮಾಧವ ಪ್ರತಿಜ್ಞೆ ಮಾಡಿ ಹೆಚ್ಚಿನ ಶಿಕ್ಷಣಕ್ಕಾಗಿ ಮಂಗಳೂರಿಗೆ ತೆರಳುವುದಾಗಲಿ, (ಪುಟ: ೭೩) ರಾಜಕೀಯ ಸ್ವಾತಂತ್ರ್ಯದ ಗೋಪುರದ ಮೇಲೆ ಆರ್ಥಿಕ ಮತ್ತು ಸಾಮಾಜಿಕ ಸ್ವಾತಂತ್ರ್ಯದ ಸುಂದರ ಕಲಶಗಳನ್ನು ಸ್ಥಾಪಿಸಿ, ರಾಮರಾಜ್ಯದ ಕನಸನ್ನು ನನಸಾಗಿಸುವ ಸಂಕಲ್ಪವಾಗಲಿ, ಒಮ್ಮೊಮ್ಮೆ ಪರಕೀಯ ಪ್ರಜ್ಞೆಗಳಾಗಿ ಅಶಾಂತಿಯ ಅಲೆಗಳನ್ನು ಎಬ್ಬಿಸಿಬಿಡುತ್ತವೆ. ಅವ್ಯವಸ್ಥೆಯಿಂದ ದೇಶವನ್ನು ವಿಮೋಚನೆಗೊಳಿಸಬೇಕು (ಪುಟ:೩೭) ಎಂಬ ನಿರ್ಧಾರದೊಂದಿಗೆ "ದೇವಾಲಯದ ಹೊರಗೆ ನಿಂತಿರುವ ಕನಕದಾಸ ಒಳಗೆ ಬಂದಿದ್ದರೆ...? ಎಂಬ ಹಂಬಲ ಬೆಸೆದುಕೊಳ್ಳುತ್ತದೆ. ಆದರೆ ಇಂಥ ಹತ್ತು ಹಲವು ಸಂಗತಿಗಳಿಗೆ ಮುಖಾಮುಖಿಯಾಗುವ ತರುಣನೊಬ್ಬ ಒಮ್ಮೆಲೆ ಸಂಪ್ರದಾಯವಾದಿಯಂತೆ ಪ್ರತಿಗಾಮಿ ತತ್ವಗಳಿಗೆ ಜೋತು ಬಿದ್ದುದಾದರೂ ಹೇಗೆ?" ಎಂದು ಆಶ್ಚರ್ಯಪಡುವಂತೆ ಸ್ತ್ರೀವಾದಿ ಚಳವಳಿಗೆ ಸಂಬಂಧಿಸಿದ ಅವನ ಪ್ರತಿಕ್ರಿಯೆ ಹೀಗೆ ಧ್ವನಿಸುತ್ತದೆ.-

"ಮನೆಯಲ್ಲಿ ನಿಂತು ಪುರುಷನಿಗೆ ಸ್ಫೂರ್ತಿ ಕೊಡುವುದನ್ನು ಬಿಟ್ಟು ಸ್ವಾತಂತ್ರ್ಯ, ಸ್ವಾತಂತ್ರ್ಯವೆಂದು ಅಪಪ್ರಚಾರ ಮಾಡುತ್ತ (ಮಹಿಳೆ) ಬೀದಿಗಿಳಿದಿದ್ದಾಳೆ- ಸರಕಾರವು ಅನಿವಾರ್ಯವಾಗಿ ಇದಕ್ಕೆ ಬೆಂಬಲ ನೀಡುತ್ತಿದೆ." (ಪುಟ: ೭೪)

ಗಾಂಧಿ ಹುಟ್ಟಿದ ಈ ನಾಡಿನಲ್ಲಿ ಈ ವಿಚಾರಗಳು ತೀರಾ ಸವಕಲು ಎನಿಸಲಾರವೆ? ರಾಜಕೀಯ ಪುಢಾರಿಗಳಿಗೆ ಸಮಯಪ್ರಜ್ಞೆ ಇಲ್ಲವೆಂದು ಮಾಧವ ಸಹಜವಾಗಿಯೇ ಆಡಿಕೊಳ್ಳುತ್ತಾನೆ. ಈಗ ಸಮಾಜಕ್ಕೆ ಸಾವಿರ ಕಣ್ಣುಗಳು:

ಇವೆಲ್ಲವನ್ನು ಬದಿಗಿರಿಸಿ ಮೊಯಿಲಿಯವರನ್ನು ಓರ್ವ ಶುದ್ಧ ಮನಸ್ಸಿನ ಚಿಂತಕನನ್ನಾಗಿ, ಚೆಲುವನ್ನು ಪ್ರೀತಿಸುವ ಕಲಾಕಾರನನ್ನಾಗಿ ಗಣಿಸಿದರೆ ಭಾಷೆಯನ್ನು ದುಡಿಸಿಕೊಳ್ಳುವ ಅವರ ನಿಷ್ಠೆ ಮೆಚ್ಚಿಗೆಗೆ ಪಾತ್ರವಾಗುತ್ತದೆ- "ಬಡವರ ಹಂದರಗಳು ಅನಂತರ ಸಮಾಜದ ಸ್ಮಶಾನದಲ್ಲಿ ಸತ್ಯ, ನ್ಯಾಯ, ಧರ್ಮಗಳನ್ನು ಸುಡುವ ಕಟ್ಟಿಗೆಗಳಾಗುತ್ತವೆ" ಎಂದು ಪರಿತಪಿಸುವಲ್ಲಿ, ಶಾಂತಳ ಸಾನ್ನಿಧ್ಯದಿಂದೊಗೆದ ಪ್ರೇಮದ ಹುಚ್ಚು ಹೊಳೆ- ಕಡಲನ್ನು ಸಂಗಮಿಸುವುದೆನ್ನುವ ಮಾದಕ ಪರಿಕಲ್ಪನೆಯಲ್ಲಿ, ಶೈಲಿಗೆ ಹೊಚ್ಚ ಹೊಸ ತೊಡುಗೆಯೊಂದನ್ನು ತೊಡಿಸಿದ ಅನುಭವವಾಗುತ್ತದೆ. ಉದಾ: "ಅದೋ ಚಂದ್ರಮನ ಚೆಲುವಿಕೆಯ ಸೌರಭದಿಂದ ಹುಚ್ಚೆದ್ದು ಕುಣಿಯುತ್ತಿರುವಳು. ಸಾಗರೇಶ್ವರಿ.. ಇಗೋ ನಾನಿರುವೆ ನಿನ್ನ ಚಂದ್ರಮ, ನೀನಿರುವೆ ಸಾಗರೇಶ್ವರಿ" (ಪುಟ: ೧೧೦) ಅಜಂತಾದ ಭಿತ್ತಿ ಚಿತ್ರಣ, ಎಲ್ಲೋರದ ಶಿಲ್ಪ ಚಮತ್ಕೃತಿ ಇವು ಒಂದರಗಳಿಗೆ ಮೈಮರೆಯುವಂತೆ ಮಾಡಿದ ಕಲ್ಪನೆಯೂ ಅಷ್ಟೆ ಸುಂದರ!

ಮುದ್ದಣನ ರಾಮಾಶ್ವಮೇಧವನ್ನು ನೆನಪಿಗೆ ತರುವ ಆರಂಭ- "ಆಕಾಶದಲ್ಲಿ ಗುಡುಗು ಭೀಕರವಾಗಿ ಗುಡುಗುತ್ತದೆ. ಮಿಂಚು ಮಿಂಚಿ ದಿಗಂತವನ್ನು ಬೆಳಗಿಸುತ್ತದೆ. ರವಿಯೊಡನೆ ಸಮರಸವನ್ನೆಸಗಿದ ಮೋಡ ತನ್ನ ಪರಿವಾರವನ್ನು ಆಗಸದ ಸಮಸ್ತ ದಿಕ್ಕುಗಳಿಗೆ ಟದಿಸಿ ಅಹಂಭಾವಿ ಸೂರ್ಯನ, ತೇಜಃಪೂರ್ಣ ರಶ್ಮಿಗಳನ್ನು ತನ್ನ ಕರಾಳ ಛಾಯೆಯಿಂದ ಬಳಸಿದೆ- ನಿಸರ್ಗದ ಜಂಜಾಟದಿಂದ ಅದೇನು ವಿಪತ್ತು ಕಾದಿದೆಯೋ ಎಂದು ಆಕಾಶವಾಣಿ ಕಳವಳಿಸಿ ಕಪ್ಪು ಬಟ್ಟೆಯನ್ನುಟ್ಟು ಶೋಕಾಚರಣೆ ಮಾಡುತ್ತಿರುವಂತೆ ಭಾಸವಾಗುತ್ತದೆ." ಇದು ಕವಿ ಹೃದಯಕ್ಕೊಂದು ಕೈಗನ್ನಡಿ.

ಹೀಗಿದ್ದೂ ಕೊನೆಯಲ್ಲಿ ಮಾಧವ ಗಿರಿಜೆಯರ ಸಂಗಮಕ್ಕೆಂದೇ ಕಲ್ಪಿಸಿದ ಶಾಂತಳ ಸಾವು ನಾಟಕೀಯತೆಗೆ ವಾಲುವುದನ್ನು ಮಾತ್ರ ತಪ್ಪಿಸಿಕೊಳ್ಳಲಾಗಲಿಲ್ಲವಲ್ಲ ಎಂಬ ಖೇದ ಓದುಗರಿಗೆ!

೧೯೮೭ರಲ್ಲಿ ಮುದ್ರಣ ಕಂಡ ಮೊಯಿಲಿಯವರ ಎರಡನೆಯ ಕಾದಂಬರಿ 'ಸಾಗರ ದೀಪ.' ಇದು ಮೀನುಗಾರರ ಜೀವನದ 'ಹೋರಾಟದ ಕತೆ', ಪರಿಸರದಲ್ಲಿ ಹಾದುಹೋದ 'ನೈಜ ಘಟನೆ'ಗಳಿಂದ ಪ್ರೇರಿತವಾದದ್ದು ಎಂದು ಲೇಖಕರು ಹೇಳಿಕೊಂಡಿದ್ದಾರೆ. ಇಲ್ಲಿಯ ಹೋರಾಟವೆಂದರೆ ಉದ್ವೇಗಪೂರ್ಣ ಕ್ರಾಂತಿಯೆಂದರೂ ಸಲ್ಲುತ್ತದೆ. 'ಸುಳಿಗಾಳಿ'ಯಲ್ಲಿ ಕೋಮಲ ಭಾವನೆಗಳು, ಸಾತ್ವಿಕ ಕ್ರೋಧ ಎಡೆಯಾಡಿದರೆ ಇಲ್ಲಿ ಶೋಷಣೆಯ ವಿರುದ್ಧ ಸಿಡಿದೆದ್ದ ಪ್ರತಿಭಟನೆ ಮುಖ್ಯವೆನಿಸುತ್ತದೆ. ಸಾಮಾನ್ಯವಾಗಿ ಕ್ರಾಂತಿಗೆ ಸಂಘಟನೆಯ ಕೊರತೆ ಕಂಡಾಗ ಆರ್ಥಿಕ ದೌರ್ಬಲ್ಯವೂ ಸೇರಿ ಅದು ಸೋಲುವ ಸಂದರ್ಭಗಳೇ ಹೆಚ್ಚು. ಛಿದ್ರಕಾರಿ ಶಕ್ತಿಸಾಹಸಗಳು ಈ ದಿಸೆಯಲ್ಲೇ ದುಡಿಯುತ್ತವೆ. ಇಂಥದೊಂದು ವಿಷಮತೆಯನ್ನು ಕೇವಲ ನೈತಿಕ ಬಲದಿಂದ ಎದುರಿಸಿ ಸೋತರೂ ಸಮಗ್ರ ಜನಾಂಗದ ಜಾಗೃತಿಯನ್ನು ಹುಟ್ಟಿ ಹಾಕುವಲ್ಲಿ ನಾಯಕನ ಸಂಭವಿಸಿದ ಬಲಿದಾನವು ಒಟ್ಟು ಮಾನವೀಯ ಮೌಲ್ಯಗಳ ಗೆಲುವೆಂದೇ ಸಾಧಿಸಿದ್ದು ಇಲ್ಲಿಯ ಕಥಾವಸ್ತು.

'ಸಾಗರದೀಪ' ಮೀನುಗಾರರ ಸಹಕಾರಿ ಸಂಘದ ನೂತನ ಕಟ್ಟಡ. ಇದು ತರುಣ ಕುಮಾರನ ಸ್ಮಾರಕ ಕಟ್ಟಡವೆಂದರೂ ಸರಿಯೇ. ಇದರ ಹಿನ್ನೆಲೆಯಾಗಿ ತೆರೆದುಕೊಳ್ಳುವ ಕತೆಯೆಂದರೆ ಕುಮಾರನ ವೀರಗಾಥೆ. ತಾಯಿ ಗೌರಿ, ತ್ರಿವಿಕ್ರಮ ಛಲದಿಂದ ಅವನಿಗೆ ವಿದ್ಯೆ ಕೊಡಿಸಿದ್ದಾಳೆ. ತಂದೆಯಿಲ್ಲದ ತಬ್ಬಲಿಯೆಂದು ಅತಿ ಮಮತೆಯಿಂದ ಪೋಷಿಸಿದ್ದಾಳೆ. ಮ್ಯಾಟ್ರಿಕ್ ಮುಗಿಸಿದರೂ ಕಿತ್ತು ತಿನ್ನುವ ದಾರಿದ್ರ್ಯದ ಅಟ್ಟಹಾಸಕ್ಕೆ ಸೋತು ಮೀನುಗಾರನಾದ ಕುಮಾರ ಪರಿಸ್ಥಿತಿಯನ್ನು ಮೀರಿ ಬೆಳೆದ. ರಾಧೆಯ ಒಡನಾಟದಿಂದ ಮತ್ತಷ್ಟು ಉತ್ಸಾಹಿತನಾದ. ಆವಳ ತಂದೆ ಐತ ಸಾಹುಕಾರನ ಕೆಂಗಣ್ಣು ಬಂಟಪ್ಪನ ಕಳ್ಳಸಾಗಾಟ ವ್ಯವಹಾರಗಳು ಕುಮಾರನ ಸ್ವಾಭಿಮಾನ ಹಾಗೂ ಪ್ರತಿಭಟನಾ ಸಾಮರ್ಥ್ಯಗಳನ್ನು ಕೆರಳಿಸಿದ್ದರಿಂದ ಆತ ಮುಂಬಯಿ ಸೇರಿ

ಹೊಟೇಲಿನಲ್ಲಿ ಕೆಲಸ ಮಾಡುತ್ತ ಪದವಿ ಶಿಕ್ಷಣ ಮುಗಿಸಿದ. ವಕೀಲಿ ಶಿಕ್ಷಣವನ್ನು ಕೈಗೊಂಡು ತೇರ್ಗಡೆಯಾದ. ಬ್ಯಾಂಕು ನೌಕರಿ ದೊರೆತರೂ ಬಂಟಪ್ಪ ಆಗಾಗ ಪಂಥಾಹ್ವಾನ ನೀಡುವಂತೆ ಕುಮಾರನಿಗೆ ಭಾಸವಾಗುತ್ತಿತ್ತು.

ಹುಟ್ಟೂರಿಗೆ ಮರಳಿ ತನ್ನ ಕ್ರಿಯಾಶಕ್ತಿಯ ಬೀಜಾರೋಪಣ ಮಾಡಬೇಕೆನ್ನುವ ಹಂಬಲದಿಂದ ಊರು ಸೇರಿದ ಕುಮಾರ, ಮನೆಯೊಂದನ್ನು ಕಟ್ಟಿಸಿದ್ದರಿಂದಲೇ ಹಣ ದುರುಪಯೋಗದ ಆಪಾದನೆಗೆ ಒಳಗಾದ. 'ಮೊಗವೀರ ಮಹಾಜನ ಸಂಘಕ್ಕೆ ದ್ರೋಹ ಮಾಡಿದನೆಂಬ ಸುಳ್ಳು ಆರೋಪಕ್ಕೆ ಗುರಿಯಾದ ಕುಮಾರ ರಾಧಾಳನ್ನು ಜೀವನ ಸಂಗಾತಿಯನ್ನಾಗಿ ಮಾಡಿಕೊಂಡು ಮತ್ತೆ ಮುಂಬಯಿಗೆ ತೆರಳಿ ವಕೀಲಿ ವೃತ್ತಿಯನ್ನು ಕೈಗೊಂಡ. ನ್ಯಾಯದ ಕ್ಷೇತ್ರದಲ್ಲಿ ಮಾನವತೆ ಕೃಶವಾಗುತ್ತ ಅದು ಮಾರಾಟದ ವಸ್ತುವಾಗುವುದನ್ನು ಕಂಡು ಸಿಡಿದೆದ್ದ ಕುಮಾರ 'ಕೊಳಚೆ ನೀರು ಹರಿಯುವ ಗಟಾರಕ್ಕೆ (ವಕೀಲಿ) ಕೋಟನ್ನು ಎಸೆದು' ಕುಲ್ಯಾಗೆ ಹಿಂತಿರುಗಿದ. ಸುಟ್ಟು ಕರಕಲಾದ ಆದರ್ಶಗಳಿಗೆ ಮತ್ತೆ ಜೀವ ತುಂಬಿದ ಫಲವಾಗಿ ಮೀನುಗಾರರ ಸಹಕಾರಿ ಸಂಘಟನೆ ರೂಪುಗೊಂಡಿತು. ಮುಂದೆ ಮೀನುಗಾರರ ಮಾರುಕಟ್ಟೆ ಸಹಕಾರಿ ಸಂಘವು ಜನ್ಮತಾಳಿತು. 'ಧನಶಕ್ತಿಯ ವಿರುದ್ಧ ಜನಶಕ್ತಿಯ ಸಮರ' ಎಲ್ಲಿಯವರೆಗೆ? ಕಾಳಸಂತೆ, ಕಳ್ಳಸಾಗಾಟದ ಕಬಂಧ ಬಾಹುಗಳು ಚಾಚಿದುವೆಂದರೆ ನೈತಿಕ ಮೌಲ್ಯ ನೇಣುಗಂಬಕ್ಕೇರುತ್ತದೆ. ಕುಮಾರನ ಸ್ಥಿತಿಯಾದರೂ ಇಂಥದೇ. ವಿಷವರ್ತುಲದಲ್ಲಿ ಸಿಕ್ಕಿ ನರಳುವ ಅಸಹಾಯಕತೆಯ ಪ್ರತಿರೂಪವೆನಿಸಿ, ಆವನನ್ನೇ ಕಾಡುವ ಭೂತವಾಗಿ, ಕೊನೆಗಂತೂ ಕನಸಿನ ಚಿಗುರು ಕಮರಿಹೋಗುತ್ತದೆ. ದುಷ್ಕಾಲ ಆಗಮಿಸಿ ಶಿಸ್ತುಬದ್ಧ ವ್ಯವಸ್ಥೆ ಬುಡಮೇಲಾಗುತ್ತದೆ. ಸಾಗರಗರ್ಭದಲ್ಲಿ ಲೀನವಾದ ಕುಮಾರ- ರಾಧೆಯರ ಅಬ್ಬಲಿಯದ ಕತೆಯು ಮಾತ್ರ ಅಂತ್ಯವಿಲ್ಲದ ಹೋರಾಟದ ಕತೆಯಾಗಿ ಬೆಳೆಯುತ್ತದೆ.

'ಸಾಗರ ದೀಪ'ವೆಂದರೆ ಆದರ್ಶದ ಸಂಕೇತ ಮಾತ್ರವಲ್ಲ; ಲೇಖಕನ ಒಳತುಡಿತಗಳ ಮೂರ್ತ ಸ್ವರೂಪವೂ ಆಗಿದೆ ಎಂಬುದು ಇಲ್ಲಿ ನಿಚ್ಚಳ. ಕಾದಂಬರಿಯುದ್ದಕ್ಕೂ ಹೊರಹೊಮ್ಮುವ ಕೆಲವು



ಅಮ್ಮನ್ನ ಹೊಡೆದ್ರೆ ನೋಡು, ನಿನ್ನನ್ನು ವೀರಪ್ಪನ್ಗೆ ಹಿಡ್ಕೊಡ್ತೇನೆ....."

ಗಂಭೀರ ವಿಚಾರಗಳಂತೂ ಲೇಖಕನು ಪ್ರತಿಘಟನೆಯಲ್ಲಿ ತನ್ನನ್ನು ತಾನು ತೊಡಗಿಸಿಕೊಂಡ ಸೂಕ್ಷ್ಮ ನೋಟಗಳು ಹಾಯುತ್ತವೆ. "ಬಡತನದ ವಿರುದ್ಧ ಹೋರಾಟ ಬರೇ ಭೌತಿಕವಲ್ಲ, ಅದು ಬೌದ್ಧಿಕವೂ ಹೌದು; ಮಾನಸಿಕವೂ ಹೌದು. ಇದಕ್ಕೆ ಸಮಾಜದ ಸಾಂಪ್ರದಾಯಿಕ ದಪ್ಪ ಪದರವನ್ನು ವೈಜ್ಞಾನಿಕವಾದ ತೀಕ್ಷ್ಣ ಮನೋಕ್ರಾಂತಿಯಿಂದ ಕೊರೆಯುವ ತೀಕ್ಷ್ಣ ಯಂತ್ರದ ಅವಶ್ಯಕತೆಯಿದೆ" (ಪುಟ: ೬೯)

"ಸಹಕಾರಿ ಚಳವಳಿ ಸರಕಾರೀ ಚಳವಳಿಯಲ್ಲ... ಜನರ ನಿಚ್ಚಳ ಮನಸ್ಸಿನ ಶಕ್ತಿಪ್ರವಾಹದ ಸಮುದಾಯದ ಕ್ರಾಂತಿ" (ಪುಟ: ೧೧೨).

"ದೇಶದ ಅಮೌಲ್ಯೀಕರಣದ ಕವಲು ದಾರಿಯಲ್ಲಿ ನಾವು ಇದ್ದೇವೆ. ದಾರಿಯಲ್ಲಿ ಹೋಗುವ ಪ್ರವಾಹದ ಸುಳಿಗೆ ನಾವು ಸಿಲುಕಿದಾಗ ಯಾರ ಹತೋಟಿಯಲ್ಲಿಯೂ ಇರುವುದಿಲ್ಲ. ಆಗ ಭಾರತದ ಅಖಂಡತೆ ಕಂಡವರ ಸೊತ್ತಾಗುತ್ತದೆ." (ಪುಟ: ೧೦೮)

"ಪ್ರಜಾಪ್ರಭುತ್ವ ಪರಸ್ಪರ ವಿರೋಧಾಭಾಸದ ಅಕ್ರಮ ಸಂಬಂಧದ ವಿಕೃತ ಕೂಸಾಗಿದೆ" (ಪುಟ: ೧೯೯) "ಸಾರ್ವಜನಿಕ ಸೇವೆಯಲ್ಲಿ ತನ್ನದಲ್ಲವೆಂಬ ಪ್ರಜ್ಞೆ ಸದಾ ಇರಬೇಕಾಗಿದೆ." (ಪುಟ: ೪೭)

ಇಂಥ ಉದ್ಬುದ್ಧ ಹೇಳಿಕೆಗಳು ಕೆಲವೊಮ್ಮೆ ಭಾವುಕತೆಯಿಂದ ಭಾಷಣಗಳಂತೆ ಕಂಡರೂ ವಿರೋಧ ಪಕ್ಷದ ದಮನ ನೀತಿಯಂತೆ ಭಾಸವಾದರೂ ಸುಂದರ ಸುಲಲಿತ ಸುಬದ್ಧ ಕನಸುಗಳನ್ನು ಹೊತ್ತ ಭಾರತದ ಓರ್ವ ಪ್ರಜ್ಞಾವಂತ ಪ್ರಜೆಯಾಗಿ ಮೊಯಿಲಿಯವರು ಕಾಣುತ್ತಾರೆ. ಕೆಲವೆಡೆ ಶುದ್ಧ ಆದರ್ಶದ ಚೌಕಟ್ಟಿಗೆ ಲೇಖನ ಕಲೆಯನ್ನು ಒಗ್ಗಿಸಿಕೊಳ್ಳುವಾಗ ಅಲಿಪ್ತತೆ, ಉಪದೇಶ ರಹಿತ ಸಾಂದರ್ಭಿಕ ಚಿಂತನೆಗಳ ಕಾಳಜಿಯು ಮುಖ್ಯವೆಂಬುದರ ಗಣನೆಯಿಂದ ದೂರವಿರುವ ಅಪಾಯಕ್ಕೆ ತೆರವಾಗುವುದಿದೆ. ಮೊಯಿಲಿಯವರ ಭಾಷೆಯಲ್ಲಿ ಒನಪಿದೆ; ಸಂಸ್ಕಾರವಿದೆ, ಉದ್ವೇಗರಹಿತತೆಯಿಂದ ಕೂಡಿದ ಸಮತೂಕವಿದೆ. ಆದ್ದರಿಂದ ಪಾತ್ರದ ವೈಭವೀಕರಣದ ಹಿನ್ನೆಲೆಯ ದರ್ಶನದಲ್ಲಿ ತಾತ್ಸಾರ, ಜಿಗುಪ್ಸೆಗಳಿಂದ ದೂರ ನಿಂತು ವಾಸ್ತವಿಕತೆಯನ್ನು ಬಿಂಬಿಸುವ ಕಲೆಗಾರಿಕೆ ಇನ್ನಷ್ಟು ಪ್ರಬುದ್ಧಗೊಳ್ಳಬೇಕೆಂದು ಅನಿಸುತ್ತದೆ. ಇಷ್ಟಾನಿಷ್ಟಗಳು ಸಮಾಜದ ಎರಡು ಪ್ರಭಾವಶಾಲೀ ಅಂಶಗಳು ಒಂದರಮೇಲಿನ ಹಿಡಿತ ತಪ್ಪುವುದೆಂದರೆ ಮತ್ತೊಂದರ ಸರ್ವನಾಶ ಆಗಿಯೇ ತೀರುತ್ತದೆಂಬ ತೀರ್ಮಾನ ಸಲ್ಲದು. (ಕುಮಾರನ ಸಾವನ್ನು ಲಕ್ಷಿಸಿ ಈ ಅಭಿಪ್ರಾಯವಲ್ಲ. ಕಾದಂಬರಿಯ ಪಾತ್ರಗಳು ಲೇಖಕನ ಕೈಗೊಂಬೆಗಳಾಗದಂತೆ ವಹಿಸುವ ಎಚ್ಚರಕ್ಕೆ ಸಂಬಂಧಿಸಿದ್ದು.)

ದಕ್ಷಿಣ ಕನ್ನಡದ ಆಡುನುಡಿ, ಪ್ರಾದೇಶಿಕತೆಯ ಮೆರುಗು 'ಕರ್ಮಣಿ'ಸರದಲ್ಲಿ ಪವಳನ್ನು ಕೋದಂತೆ'- ಮುದ ನೀಡುತ್ತದೆ. ಹೊರನಾಡಿನ ನಮಗಂತೂ 'ಬರ್ಕೆ ಪೆಲಕಾಯಿ' ಸೀಳಿ ತಿಂದ ಅನುಭವ ! ಓೋಳಿರೊಟ್ಟಿಯ ಸಂತೃಪ್ತಿಯ ಊಟ ಕಲೆಂಬಿ, ಬೆಲ್ಲ ನೀರಿನ ಸರಬರಾಜು, ಕುತ್ತಿ ಬೆವರು, ನೆಟ್ಟಿ ತೆಗೆಯು, ಪಟ್ಟಾಂಗ, ಪುದೆ, ಫಳಿಕೆ... ಹೀಗೆ ಹುಡುಕುತ್ತ ಹೋದರೆ ಮೊಗೆದಷ್ಟು ದೊರೆತಾವು. ಮೊಯಿಲಿಯವರಿಗೆ ಭಾಷೆಯನ್ನು ಅಲಂಕಾರಿಕವಾಗಿ ದುಡಿಸುವ ಹುಮ್ಮಸ್ಸೂ ಉಂಟು. ಹೀಗಾಗಿ ಸಾಗರ ದರ್ಶನದಿಂದಾಗಿ ಆರಂಭವಾಗುವ 'ಸಾಗರ ದೀಪ'- ಸಾಗರದ ಮಡಿಲಲ್ಲಿ ಅಸ್ತಂಗತನಾಗುವ ಬೆಂಗದಿರನ ತಣ್ಣನೆಯ ಸ್ಪರ್ಶದೊಂದಿಗೆ ಮುಕ್ತಾಯಗೊಳ್ಳುತ್ತದೆ.

ಮೊಯಿಲಿಯವರ ಬೃಹತ್ ಕಾದಂಬರಿ 'ಕೊಟ್ಟ'. ೧೯೯೩ರಲ್ಲಿ ಪ್ರಕಟವಾಯಿತು. ೪೮೮ ಪುಟಗಳನ್ನೊಳಗೊಂಡು ಅಸಂಖ್ಯಾತ ಘಟನೆಗಳ ಚಿತ್ರದಿಂದ 'ಮುಖ್ಯಮಂತ್ರಿ ಬರೆದುದು' ಎಂಬ ಕುತೂಹಲವನ್ನು ಕೆರಳಿಸಿಕೊಂಡು ಸಾರಸ್ವತ ಲೋಕಕ್ಕೆ ಪರಿಚಿತವಾಯಿತು. ಬೆಲೆಯ ಭಾರ ಕುತೂಹಲಕ್ಕೆ ತಣ್ಣೀರು ಸುರಿದರೂ ಹಿಂದುಳಿದ ಸಮಾಜವೊಂದರ, ಅದರಲ್ಲೂ ಈ ದೇಶದ ಅತಿ ಪ್ರಾಚೀನ ನಿವಾಸಿಗಳೆನಿಸಿದ 'ಕೊರಗ' ಜನಾಂಗಕ್ಕೆ ಸಂಬಂಧಿಸಿ ಹೆಣೆದ ಕತೆಯೆಂಬ ಆಸಕ್ತಿ ಓದುಗರನ್ನು ಆಕರ್ಷಿಸಿತ್ತು. ಕಾದಂಬರಿ ಓದಿಸಿಕೊಂಡು ಹೋಯಿತು.

ಲೇಖಕರ ಅಧ್ಯಯನ ಅನುಭವ, ಸಾರಾಸಾರ ವಿವೇಚನೆ ಮತ್ತು ರಾಜಕಾರಣಿಯೊಬ್ಬನ ಎದೆಮಿಡಿತ, ಸಂಮ್ಮಿಳಿತಗೊಂಡು 'ಕೊಟ್ಟ' ವಿಮರ್ಶಕರ ಮನ ಸೆಳೆಯಿತು. ವಿದ್ಯಾಪೀಠದ ವಿದ್ವಾಂಸರ ಮನೋಗತಕ್ಕೆ ದಾರಿಮಾಡಿಕೊಟ್ಟಿತು. ಪ್ರಾಮಾಣಿಕ ಕಳಕಳಿಯ ಸತತ ಪರಿಶ್ರಮದಿಂದ ನಡೆಸಿದ ಅಭ್ಯಾಸದ ಫಲಶೃತಿಯಿದು ಎನ್ನುವ ಕಾರಣದಿಂದ ಗಂಭೀರ ಚಿಂತನೆಗೂ ಅವಕಾಶ ಮಾಡಿಕೊಟ್ಟಿತು. ವ್ಯಕ್ತಿ ಪರಧೋರಣೆಗಳು, ಸಮಗ್ರ ಸಮುದಾಯದ ಧ್ವನಿಯಾಗಿ ಪ್ರಚಲಿತ ನಂಬಿಕೆಗಳಿಗೆ, ಆಚಾರ-ವಿಚಾರಗಳಿಗೆ ಸವಾಲೆಸೆಯುವ ದಿಟ್ಟತನವನ್ನು ಹುಟ್ಟು ಹಾಕಿತು. 'ಕೊಟ್ಟ'- ಕಾದಂಬರಿ ಈ ಕಾರಣಗಳಿಂದಲೆ ಮೊದಲಿನ ಎರಡು ಕಾದಂಬರಿಗಳಿಗಿಂತ ಭಿನ್ನವೆನಿಸುತ್ತದೆ. ಅಂದವಾದ ಮುದ್ರಣವೂ ಇದಕ್ಕೆ ಪೂರಕ. ಸಂಶೋಧನಾ ಬರಹಗಳ ಆಕರಗಳನ್ನು ವಿನಯದಿಂದ ಸ್ಮರಿಸಿಕೊಂಡ ಮೊಯಿಲಿಯವರು, ಕೊರಗರ ಕೊಟ್ಟಗಳಿಗೆ (ಮನೆಗಳಿಗೆ) ಭೇಟಿ ನೀಡಿ, ಅದರಲ್ಲೂ ಜೇನು ಕುರುಬರ ಬದುಕಿನ ವಾಸ್ತವತೆಯನ್ನು ಅಭ್ಯಸಿಸಿ ತಾನು ಈ ಕೃತಿಯನ್ನು ಗಟಿಸುವ ಸಾಹಸ ಮಾಡಿದೆನೆಂದು ಹೇಳಿಕೊಂಡಿದ್ದಾರೆ. ಓದುಗರ ಅರಿವಿಗೆಂಬಂತೆ ಸುಮಾರು ಆರು ಪುಟಗಳಲ್ಲಿ ಕೊರಗ ಜನಾಂಗದ ತಲೆಮಾರಿನ ಕತೆಯನ್ನು ಹೆಣೆದು ಮುಂದಿಟ್ಟಿದ್ದಾರೆ. (ಪುಟ: ೮೨-೮೭) ಒಬ್ಬ ಕತೆ ಹೇಳುವ ಧಾಟಿಯಲ್ಲಿ ಕದಂಬ ರಾಜ ಮಯೂರವರ್ಮನನ್ನು ಕೊರಗ ನಾಯಕ ಹಬಾಶಿಕಾ (ಹುಬಾಶಿಕಾ ?) ಹಿಮ್ಮೆಟ್ಟಿಸಿದ್ದು, ಅಮಾಯ

ಕತನಕ್ಕೆ ಒಳಗಾಗಿ ಮಂಜೇಶ್ವರದ ರಾಜವೀರವ ರ್ಮನ ಕತ್ತಿಗೆ ನಿದ್ದೆಯಲ್ಲೆ ಆತ ಆಹುತಿಯಾದದ್ದು- ಮೊದಲಾದ ಸಂಗತಿಗಳು ನಿರೂಪಣೆಗೆ ಒಳಪಟ್ಟಿವೆ. ಕೊರಗ ಜನಾಂಗದ ಬಗೆಗೆ ಹಲವು ರೀತಿಯಿಂದ ಸಂಶೋಧನೆಗಳು ನಡೆದ, ನಡೆಯುತ್ತಿರುವ ಸಂದ ರ್ಭದಲ್ಲಿ ಇಂಥದೊಂದು ಕಾದಂಬರಿ ಬೆಳಕಿಗೆ ಬಂದುದು ಕೂಡಾ ಮಹತ್ವದ್ದು.

ಮೊಯಿಲಿಯವರ ಮಳೆ, ಕಾರ್ಮೋಡಗಳ ಬಗೆಗಿನ ಒಲವು, ಕಡಲಿನ ಆಕರ್ಷಣೆ ಇಲ್ಲಿಯೂ ಪ್ರಥಮ ಪುಟದಲ್ಲೇ ನಮ್ಮನ್ನು ತಟ್ಟುತ್ತವೆ. ಇಲ್ಲಿಯೂ ಆದರ್ಶವಾದಿಯೊಬ್ಬ ಸಂಧಿಸುತ್ತಾನೆ; ಶೋಷಣೆಯ ವಿರುದ್ಧ ಆತ ನಡೆಸುವ ಬುದ್ಧಿಪರ ಹೋರಾಟ ಮಾತ್ರ ಸಮಭಾವದ, ಸಮದರ್ಶಿತ್ವದ, ರಕ್ತರಹಿತ ಕ್ರಾಂತಿ, ಅಂಧಕಾರ ನೀಗಿ ಬರಲಿರುವ ಸುಪ್ರಭಾತ ಹಾತೊರೆಯುವಂತೆ ಕಾಣುವ ಆತನ ಹಂಬಲದಲ್ಲಿ ರಂಗುರಂಗಿನ ವಿನ್ಯಾಸಗಳಿರದೆ, ಆ ಕ್ಷಣದ ಅಗತ್ಯಗಳನ್ನು ಎದುರಿಸುವ ಧೀರತನ ಸ್ಫುಟ ಗೊಳ್ಳುತ್ತದೆ.

ಕಾದಂಬರಿಯ ಒಟ್ಟು ಕತೆಯ ಚೌಕಟ್ಟನ್ನು ಮಾತ್ರ ಇಲ್ಲಿ ಅವಲೋಕಿಸುವುದು ಸಾಧ್ಯವೆನಿಸು ವುದರಿಂದ, ಎಲ್ಲ ಪಾತ್ರಗಳ ಭಿನ್ನ ಭಿನ್ನ ನಿಲುವನ್ನು ವಿವರಿಸುವುದಾಗಲೀ ಘಟನೆಯಿಂದ ಘಟನೆಗೆ ಬೆಳೆ ಯುತ್ತ ಹೋಗುವ ತಂತ್ರಗಾರಿಕೆಯನ್ನಾಗಲೀ ಈ ಲೇಖನದಲ್ಲಿ ಚರ್ಚೆಗೆ ಗುರಿಪಡಿಸಲಾಗುವುದಿಲ್ಲ.

ಹೆಗ್ಗಡೆದೇವನಕೋಟೆಯ ಮಲ್ಲಯ್ಯ ಫಾರೆಸ್ಟ್ ಆಫೀಸರ್. ಮಧುಗಿರಿಯಿಂದ ಕುಂದಾಪುರಕ್ಕೆ ಬಂದು ಡ್ಯೂಟಿಗೆ ಹಾಜರಾದ ದಿನದಿಂದಲೂ ಅವನಿಗೆ ಕಳ್ಳಸಾಗಾಣಿಕೆದಾರರನ್ನು ಬಲೆಗೆ ಕೆಡವ ಬೇಕೆನ್ನುವ ಒತ್ತಾಸೆ! ಅಂಥ ಒಂದು ಸಂದರ್ಭ ಒದಗಿ ಬಂದಾಗಲೇ ಕಂಗೂರಿ ಕೊಟ್ಟದ ಹೆಣ್ಣು ಓಂಚಲು ಸಂಧಿಸಿದ್ದು. ಕಾಡು ಕುರುಬ ಮಲ್ಲಯ್ಯ ನಿಗೆ ಕಂಗೂರಿ ಕೊಟ್ಟದ ಕೊರಗರ ಪರಿಚಯ ಬೆಳೆದುದು ಹೀಗೆ. ಕಾದಂಬರಿಯ ಮಟ್ಟಿಗೆ ಇದೊಂದು ಆಕಸ್ಮಿಕ ಘಟನೆ. ಆದರೆ ಮುಂದೆ ನಡೆದ ಸಂಗತಿಗಳೇ ಕಾದಂಬರಿಯ ಜೀವ. ಹಿನ್ನೆಲೆ ಯಲ್ಲಿ ಪರದೆಯ ಚಿತ್ರಗಳಂತೆ ಬಣ್ಣನೆಗೆ ಒಳಗಾ ಗುವ ವಿವರಗಳು ಮಲ್ಲಯ್ಯನ ಪೂರ್ವೋತ್ತರಗಳಿಗೆ ಸಾಣೆ ಹಿಡಿಯುತ್ತವೆ.

ಕಂಗೂರಿ ಕೊಟ್ಟದ ಬದುಕಿನಲ್ಲಿ ಒಂದಾಗುವ ಮಲ್ಲಯ್ಯನ ಕ್ರಿಯಾಶೀಲತೆ ಮಾತ್ರ ಉದ್ಧಾರದ ನೆಲೆಯಲ್ಲಿ ಅರಳುವ ಬೌದ್ಧಿಕ ಕ್ರಿಯೆಯು ಆಗಿ ವಿಶಿಷ್ಟ ಸಮಾಜ ರಚನೆಯ ಕಡೆಗೆ ಸಾಗುವ ಆದರ್ಶದ ಹೊಂಬೆಳಕಿನಂತೆ ಸುತ್ತೆಲ್ಲ ಚೈತನ್ಯ ಬೀರುವ ಅದಮ್ಯ ಶಕ್ತಿಯಾಗುತ್ತದೆ. ಈ ನಡುವೆ ಜಾತಿ ಕಟ್ಟಳೆಗಳು, ಸಂಪ್ರದಾಯದ ಜಿಗುಟುತನ, ಜಿಡ್ಡುಕಟ್ಟಿದ ವ್ಯವಸ್ಥೆಗಳು ಅಡ್ಡಗಾಲು ಹಾಕುವು ದುಂಟು. ಮುಖ್ಯವಾಗಿ ಓಂಚಲು ತನ್ನ ಹೆಣ್ಣೆಂಡು ಭಾವಿಸಿದ ಗುಳ್ಯನ ಓಕಲಾಟ! ಆ ಅಮಾಸೆ ರಾತ್ರಿಯಲ್ಲಿ ಒಂದು ಹಗಲು, ಒಂದು ರಾತ್ರಿ ಕೊಟ್ಟ ಬಿಟ್ಟು ಹೋಗಿದ್ದರೂ ತಪ್ಪು ದಂಡ ಹಾಕದೆ ಓಂಚಲುವನ್ನ ಕೊತಾರಿಗೆ ಹೇಗೆ ಸೇರಿಸಿಕೊಂ ಡರು? ಎಂಬುದು ಅವನ ಪ್ರಶ್ನೆ. ಆದರೆ ಮಲ್ಲಯ್ಯ ಕೊಟ್ಟದಲ್ಲೆ ವಾಸಿಸಲು ಬಂದ ಮೇಲೆ ಅವನ ಸ್ಥಿತಿ ಹಲ್ಲು ಕಳಚಿದ ಹಾವಿನಂತಾಗುತ್ತದೆ. ಪತ್ರಕರ್ತ ಸದಾಶಿವನ ಗೆಳೆತನ ಮಲ್ಲಯ್ಯನಲ್ಲಿ ಉತ್ಸಾಹದ ಗರಿಮೂಡಿಸಿದರೂ ಶಾಸಕ ಅಂಬರ ಪ್ಪನ ಆಟೋಪ ಗುಡುಗಿನಂತೆ ಕೆಲವು ಬಾರಿ ಅವನ ಎದೆ ನಡುಗಿಸುವುದುಂಟು. ಕಾರ್ಕಳದಲ್ಲಿ ವಕೀಲಿ ವೃತ್ತಿ ನಡೆಸಲು ಬಂದ ಧೀರಜ್ ಧೈರ್ಯ ತುಂಬುವ ಆಶಾಂಕುರವಾಗಿ ಮಲ್ಲಯ್ಯ ತನ್ನ ಧ್ಯೇಯದ ಬಳ್ಳಿ ಹಬ್ಬುವ ಕನಸು ಕಾಣುತ್ತಾನೆ. ಅವರಿಬ್ಬರ ಸಂವಾದದಲ್ಲಿಯೇ ಕಾದಂಬರಿಯ ಮುಖ್ಯ ಉದ್ದೇಶ ಅಡಗಿರುದನ್ನು ಗುರುತಿಸಬ ಹುದು. ಲೇಖಕನ ಒಳನೋಟಗಳು ಒಂದು ಪಾತ್ರದ ರಕ್ತ ಮಾಂಸಗಳಾಗಿ ತುಂಬಿ ನಿಲ್ಲುವ ಅನಿರೀಕ್ಷಿತ ಬೆಳವಣಿಗೆಯು ಕಥಾವಸ್ತುವಿನ ಹಂದ ರವನ್ನು ಸೊಗೆಯಿಸುವ ಕ್ರಿಯೆಯು ಆಗುವುದ ರಿಂದ ಉಚಿತ ಪಾತ್ರ ನಿರೂಪಣೆ ಹೃದ್ಯವೆನಿಸುತ್ತದೆ. ಪಾತ್ರದ ಅಳಲು ತನ್ನಂತರಂಗದ ಅಳಲು ಎಂಬಂ ತಾಗುವುದು ಮಾತ್ರ ದೋಷವೇ. ಆಶಾವಾದಿ ಮಲ್ಲಯ್ಯ, ಕಿಸಾನ್ ಸಭಾದ ಅಧ್ಯಕ್ಷ ಧೀರಜ್ ಇವರಲ್ಲಿ ಮೊಯಿಲಿಯವರ ವ್ಯಕ್ತಿತ್ವ ಇಣುಕು ಹಾಕುತ್ತಿದೆಯ? ಎಂಬ ಗುಮಾನಿಯೂ ಉಂಟು.

ಒಂದು ಸಮಾಜದ ಪ್ರಗತಿಗೆ ಹಲವು ಕೈಗಳು ಸೇರಬೇಕು. ಇದಕ್ಕೆ ರಾಜಕೀಯ ಬೆಂಬಲವೂ ಬೇಕು. ದುಡಿಯುವ ಹಲವು ನಿಸ್ವಾರ್ಥ ಹೃದಯ

ಗಳು, ಮುದುಡಿದ ಜೀವಗಳಿಗೆ ಸಂಜೀವಿನಿಯಾಗಬೇಕು; ಇಷ್ಟೆಲ್ಲ ಬೇಕುಗಳಿಗೆ ಕೇಂದ್ರ ಶಕ್ತಿಯೊಂದು ಆಧಾರವಾಗಬೇಕು. ಮಲ್ಲಯ್ಯ ಇಂಥ ಚೇತನವಾಗಿ ಕೊಟ್ಟ ಕೇಂದ್ರವಾಗಿ ಎರಡು ಜನಾಂಗಗಳನ್ನು ಬೆಸೆಯುವ ಕಾರ್ಯ ಕೃತಿಯಲ್ಲಿ ನಡೆಯುತ್ತದೆ. ಮಲ್ಲಯ್ಯ, ಓಂಚಲು- ಇಲ್ಲಿ ಪ್ರಣಯಿಗಳಲ್ಲ. ಒಂದೇ ನೊಗದ ಭಾರವನ್ನು ಹೊತ್ತ ಸಮತೂಕದ ಸಮಪ್ರಜ್ಞೆಯ, ಸಂಚಾರಿಗಳು, ಜೇನು ಸಂಗ್ರಹಿಸುವ ಕಾಡು ಕುರುಬರಿಗೂ ಶೋಷಣೆ ಹೊಸತಲ್ಲ. ಸತ್ತ ಪ್ರಾಣಿಯ ಚರ್ಮ ಸುಲಿಯುವ ಕೊರಗರು ಇದರಿಂದ ಹೊರತಾಗಿಲ್ಲ. ಸಮಸ್ಯೆ ಬೇರೆ ಬೇರೆ ಮುಖ ಒಂದೇ. ಚದುರಂಗರು 'ಕೊಟ್ಟ'- ಎಂದರೆ ಕೇವಲ ಬೀಡಲ್ಲ 'ಮಲ್ಲಯ್ಯ ಕೊರಗರ ಬದುಕಿಗೆ ಹೊಸ ಚೈತನ್ಯ ಕೊಟ್ಟ' ಎಂದು ಅರ್ಥೈಸಿದ್ದಾರೆ. ಇದಕ್ಕೆ ನಾವು ದನಿಗೂಡಿಸಬಹುದು.

ಇನ್ನು ಕೊರಗರ ಬಗೆಗೆ ಒಂದು ಮಾತು; ಅವರ ಆಚಾರ ವಿಚಾರಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದ ಲೇಖಕರು ಬ್ರಾಹ್ಮಣರ ನಂಬುತನದ ಪ್ರಸ್ತಾಪ ಎತ್ತಿದ್ದಾರೆ. ಮರವಣಿಗೆಯಲ್ಲಿ ಭೂತದ ವೇಷ, ಯಕ್ಷಗಾನದ ದೃಶ್ಯಗಳು, ಮೂಲ ಉಡುಪಿನಿಂದಲೆ ಸಾಗುವ ಕೊರಗರು- ಈ ವರ್ಣನೆಯಲ್ಲಿ ಒಂದು ನಂಬಿಕೆಯ ವಿಕೃತಿಯ ಬಗೆಗಿನ ವಿಷಾದತೆ ಮತ್ತು ಸುಧಾರಣೆಯನ್ನು ಬಯಸದ ಪಟ್ಟಭದ್ರತನ 'ತನಿಯ ಕೊರಗ'- ಮೂಲಭೂತವಾದಿಗಳಿಂದ ಕೊಲೆಮಾಡಲ್ಪಟ್ಟ ದಲಿತ ನಾಯಕನೇ ಇರಬೇಕೆಂಬ ತರ್ಕ ಅಸ್ತಿತ್ವವಾದದ ಮಗ್ಗುಲಗಳನ್ನು ವೀಕ್ಷಿಸುವ ಮಾನವೀಯ ದೃಷ್ಟಿಕೋನವಾಗಿದೆ. ಇವೆಲ್ಲ ಮಲ್ಲಯ್ಯನ ಸಮಾಜವಾದಿ ಧೋರಣೆಗಳೆನಿಸಿದರೂ, ಒಂದು ವ್ಯವಸ್ಥೆಯ ವಿರುದ್ಧ ಕೈಗೊಳ್ಳುವ ಗಟ್ಟಿ ನಿಲುವುಗಳೆಂದೇ ಹೇಳಬೇಕು. ಕೊರಗರ ಭಾಷೆ ವಿಚಿತ್ರವಾಗಿಯೇ ಕಾಣುತ್ತದೆ. ಲೇಖಕರು ಅಲ್ಲಲ್ಲಿ ಅಡಿ ಟಿಪ್ಪಣಿ ಕೊಟ್ಟು ಉಪಕಾರ ಮಾಡಿದ್ದಾರೆ. ಇಂಥ ಶಬ್ದಗಳ ಕೋಶವು ಸದ್ದಿಲ್ಲದೆ ಮಾಯವಾಗುವ ಒಂದು ಭಾಷೆಯ ಮೂಲ ಸೌಂದರ್ಯವನ್ನು ಕಾಪಾಡಿಕೊಳ್ಳಲು ಸಹಾಯಕವೆನಿಸಬಹುದು. ಕೊರಗರ ಜೀವನ ಚರಿತ್ರೆಯ ಅಧ್ಯಾಯಗಳಲ್ಲಿ ಕಾಡು ಕುರುಬರ ನಡಾವಳಿಗಳೂ ಸೇರಿಕೊಳ್ಳುತ್ತವೆ; ಕಂಬಳ- ವಿಜೃಂಭಿಸುತ್ತದೆ. ಮೊಯಿಲಿಯವರು ಇಷ್ಟು ವರುಷಗಳಲ್ಲಿ ಕಂಡುಂಡ- ಕೇಳಿದ ಬದುಕಿನ ಆವಿಷ್ಕಾರ 'ಕೊಟ್ಟ'. ಕಾದಂಬರಿಯಲ್ಲಿ ಪ್ರತ್ಯಕ್ಷವಾಗುವುದರಿಂದಲೋ ಏನೋ ಅನುಭವಗಳ ಸಂತೆಯಲ್ಲಿ ಏನಿಲ್ಲ, ಏನುಂಟು ? ಎಂದು ಪ್ರಶ್ನಿಸಲು ಹಿಂದೆ ಮುಂದೆ ನೋಡಬೇಕಾಗುತ್ತದೆ.

ಈಗ ಅವರ ಕಾದಂಬರಿಗಳು ಚಲನಚಿತ್ರಗಳಾಗಿವೆ. ಸಿನಿಮೀಯ ಸನ್ನಿವೇಶಗಳನ್ನು ಹುಟ್ಟುಹಾಕುವಾಗ ಮೂಲದ್ರವ್ಯವನ್ನು ಕಾಪಾಡುವುದರ ಕಾಳಜಿ ಎಷ್ಟರಮಟ್ಟಿಗಿದೆ ಎನ್ನುವುದನ್ನು ಪ್ರೇಕ್ಷಕರಷ್ಟೇ ಹೇಳಬಲ್ಲರು. ●

# ಕೊಟ್ಟ



ಎಂ. ವೀರಪ್ಪ ಮೊಯಿಲಿಯವರ 'ಕೊಟ್ಟ' ಕಾದಂಬರಿಯ ಸಂಗ್ರಹವನ್ನು ನಮ್ಮ ಜನವರಿ ೧೯೯೫ರ ಸಂಚಿಕೆಯಲ್ಲಿ ಪ್ರಕಟಿಸಬೇಕಾಗಿತ್ತು. ಆದರೆ 'ಕೊಟ್ಟ' ಕಾದಂಬರಿಯ ಸಂಬಂಧದಲ್ಲಿ ನ್ಯಾಯಾಲಯಕ್ಕೆ ಅರ್ಜಿಯೊಂದು ಸಲ್ಲಿಸಲ್ಪಟ್ಟಿರುವ ಹಿನ್ನೆಲೆಯಲ್ಲಿ ಪ್ರಸ್ತುತ ಸಂಗ್ರಹ ರೂಪವನ್ನು ಪ್ರಕಟಿಸಲಾಗಲಿಲ್ಲ.

ಮುಂಬರುವ ಸಂಚಿಕೆಯೊಂದರಲ್ಲಿ ಈ ಸಂಗ್ರಹವನ್ನು ಪ್ರಕಟಿಸಲಾಗುವುದು.

● ಸಂಪಾದಕ

# ನಮ್ಮ ಊರಿನ ಪುಣ್ಯಜೀವಿಗಳು

## ಡಾ. ಎಂ.ಎಂ. ಮುಳಗುಂದ

ವೈದ್ಯಕೀಯ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಚಿರಂತನವಾಗಿ ಉಳಿಯುವ ಹೆಸರೆಂದರೆ ಡಾ. ಎಂ.ಎಂ. ಮುಳಗುಂದ ಅವರದು. ಸಮಷ್ಟಿ ಬದುಕಿನೊಡನೆ ಬೆರೆತ ಅವರ ಜೀವನ ಸಾರ್ವಜನಿಕರ ಸೇವೆಗಾಗಿ ಮೀಸಲಾಗಿತ್ತು.

ಮುಳಗುಂದರರದು ಬಹುಮುಖ ವ್ಯಕ್ತಿತ್ವ. ಗದಗಿನ ರೋಟರಿ ಸಂಸ್ಥೆ, ಕಬ್ಬಿಗರ ಕೂಟ, ವೈದ್ಯಕೀಯ ಸೇವಾ ಶಿಬಿರ, ಭಾರತೀಯ ವೈದ್ಯಕೀಯ ಸಂಸ್ಥೆ, ಶಿವಾನುಭವ ತರಬೇತಿ ಶಿಬಿರ, ಭಾರತೀಯ ಸಾಂಸ್ಕೃತಿಕ ಸಂಘ, ಪಂ.ಪಂಚಾಕ್ಷರಿ ಗವಾಯಿಗಳ ಶತಮಾನೋತ್ಸವ, ಚಿತ್ರಕಲಾ ಪ್ರದರ್ಶನ ಮುಂತಾದ ಹಲವು ಸಂಘಟನೆಗಳಲ್ಲಿ, ಕಾರ್ಯಕ್ರಮಗಳಲ್ಲಿ ಅಧ್ಯಕ್ಷರಾಗಿ, ಪದಾಧಿಕಾರಿಯಾಗಿ ತಮ್ಮನ್ನು ತೊಡಗಿಸಿಕೊಂಡು ಮಾಡಿದ ಸೇವೆ ಅನುಪಮವಾದುದು. ರೋಗಿಗಳ ಶುಶ್ರೂಷೆ ಮತ್ತು ಸಮಾಜ ಸೇವೆ ಅವರಿಗೆ ವೃತ್ತಿಯಾಗಿರಲಿಲ್ಲ; ವ್ರತವಾಗಿತ್ತು.

ತಂದೆಯ ಕಾಯಕನಿಷ್ಠೆ ತಾಯಿಯ ಅಂತಃಕರಣ ಮುಳಗುಂದರಿಗೆ ಮೈವೆತ್ತಿ ಬಂದಿದ್ದವು. ಹಳ್ಳಿಕೇರಿಯಲ್ಲಿ ಜನಿಸಿ ಹುಬ್ಬಳ್ಳಿಯಲ್ಲಿ ವೈದ್ಯಕೀಯ ಪದವಿ ಪಡೆದು ಗದಗದಲ್ಲಿ ಸೇವೆ ಸಲ್ಲಿಸುತ್ತಿದ್ದ ಅವರು ದಿನಕ್ಕೆ ಏನಿಲ್ಲೆಂದರೂ ಐದಾರು ಶಸ್ತ್ರಕ್ರಿಯೆ ನೆರವೇರಿಸುತ್ತಿದ್ದರು. ಅವರಲ್ಲಿಗೆ ಬರುತ್ತಿದ್ದವರಲ್ಲಿ ಗ್ರಾಮೀಣರು ಮತ್ತು ಅಸಹಾಯಕರೇ ಹೆಚ್ಚು. ಕೆಲವರಿಗೆ ಮುಳಗುಂದರೇ ಹಣ ಕೊಟ್ಟು ಊರಿಗೆ ಕಳಿಸಿದಂಥ ಉದಾಹರಣೆಗಳೂ ಇವೆ.



ಡಾ. ಮುಳಗುಂದ ವೃತ್ತಿಯಲ್ಲಿ ನಿಷ್ಠೆ-ಆಸಕ್ತಿ ಉಳ್ಳವರು. ಟ್ಯುಬೆಕ್ಟಮಿ ಮಾಡಿಸಿಕೊಂಡಿದ್ದ ಮಹಿಳೆಯೊಬ್ಬಳಿಗೆ ಮತ್ತೊಮ್ಮೆ ಶಸ್ತ್ರಕ್ರಿಯೆ ಮಾಡಿ ಟ್ಯುಬೆಕ್ಟಮಿಯನ್ನು ತೆರವು ಮಾಡುವ ಮೂಲಕ ಅವರು ಮತ್ತೆ ಆಕೆ ತಾಯಿಯಾಗುವ ಸೌಲಭ್ಯ ಕಲ್ಪಿಸಿದ್ದರು. 'ವೈದ್ಯ ಚಿಂತನ' ಎಂಬ ಗ್ರಂಥ ಅವರು ವೈದ್ಯಕೀಯ ಸಾಹಿತ್ಯಕ್ಕೆ ನೀಡಿದ ಕಾಣಿಕೆ. ಅವರು ಶಸ್ತ್ರಕ್ರಿಯೆ ಮಾಡುವಾಗ, ಶ್ರೇಷ್ಠ ಕಲಾಕಾರ ತನ್ನ ಕೃತಿಯನ್ನು ರಚಿಸುವುದರಲ್ಲಿ ತಲ್ಲೀನನಾದಂತೆ ಕಾಣುತ್ತಿತ್ತು.

ಆಕರ್ಷಕ ನಿಲುವು, ಉತ್ಸಾಹ ಉಕ್ಕಿಸುವ ಕಣ್ಣುಗಳು, ಪ್ರಶಾಂತ ಮುಖಮುದ್ರೆ, ಖಚಿತವಾದ ಪ್ರೌಢ ವಿವೇಚನೆ ಮತ್ತು ಶರಣ ಸಾಹಿತ್ಯದ ಸಂಸ್ಕಾರ ಅವರ ಪ್ರತಿಪಾದನೆಯ ಉದ್ದಕ್ಕೂ ಎದ್ದು ಕಾಣುತ್ತಿತ್ತು. ಪಂಡಿತರೂ ವಾಗ್ಮಿಗಳೂ ವಿಸ್ಮಿತರಾಗುವಂತೆ ಭಾಷಣ ಮಾಡುವ ಕಲೆ ಅವರಿಗೆ ಸಿದ್ಧಿಸಿತ್ತು. ಅಂಧ ಮಕ್ಕಳ ಶಾಲಾ ಕಟ್ಟಡಕ್ಕಾಗಿ ಅವರು ೨೪ ಲಕ್ಷ ರೂಪಾಯಿಗಳನ್ನು ಕೂಡಿಹಾಕಿದ್ದರು.

ಕೆಲ ತಿಂಗಳ ಹಿಂದೆ ಕಾರ್ಯನಿಮಿತ್ತ ಬೆಂಗ

ಳೂರಿಗೆ ಹೊರಟಾಗ ಸಂಭವಿಸಿದ ಅಪಘಾತದಲ್ಲಿ ಅವರು ಮೃತಪಟ್ಟರು. ಡಾ. ಮುಳಗುಂದ ಕಿರಿಯ ವಯಸ್ಸಿನಲ್ಲಿ ಹಿರಿಯ ಸಾಧನೆಗೈದವರು. ಅವರು ನಮ್ಮ ಊರಿನ ಪುಣ್ಯಜೀವಿಯಲ್ಲ, ಇಡೀ ನಾಡಿನ ಪುಣ್ಯಜೀವಿ ಎಂದರ ಅತಿಶಯೋಕ್ತಿಯಾಗಲಾರದು.

● ಗೀತಾ ಪಾಟೀಲ

---

## ನಾರಾಯಣಾಚಾರ್ಯ ಮಣ್ಣೂರ

೧೯೯೪ ಸೆಪ್ಟಂಬರ್ ೧೪ರಂದು ದಾವಣಗೆರೆಯ ಬಹುತೇಕ ವೈದಿಕ ಕುಟುಂಬಗಳಲ್ಲಿ ಸೂತಕವಿರದಿದ್ದರೂ ಅಂಥದೊಂದು ವಾತಾವರಣವಿತ್ತು. ಪ್ರತಿ ಕುಟುಂಬಕ್ಕೆ ಹಿರಿಯಣ್ಣನಂತಿದ್ದ ನಾರಾಯಣಾಚಾರ್ಯ ಮಣ್ಣೂರ ಅವರು ವಿಧಿವಶರಾದದ್ದು ಅದಕ್ಕೆ ಕಾರಣ.

ಆಚಾರ್ಯರು ಯಾಜ್ಞಿಕ ವೃತ್ತಿಯಲ್ಲಿ ಪಳಗಿದ್ದರು. ಎಲ್ಲರೊಂದಿಗೆ ಆತ್ಮೀಯತೆಯಿಂದ ಮಾತನಾಡಿ ಮನೆ ಜನರೆಲ್ಲರ ಮನ ಗೆಲ್ಲುತ್ತಿದ್ದ ಆಚಾರ್ಯರು ಎಂದೂ ಬಡವ-ಶ್ರೀಮಂತರೆಂಬ ಪಕ್ಷಪಾತ ಮಾಡಲಿಲ್ಲ. ಚಿಕ್ಕಮಕ್ಕಳ ಕಾಯಿಲೆ- ಕಸಾರಿಕೆಗಳನ್ನು ಆಚಾರ್ಯರು ಉಳುಕು ಮಂತ್ರ, ದೃಷ್ಟಿ ಮಂತ್ರ, ಕಾಮಣಿ ಮಂತ್ರಗಳನ್ನು ಹಾಕಿ ಗುಣಪಡಿಸುತ್ತಿದ್ದರು.

ನಾರಾಯಣಾಚಾರ್ಯರ ವಿದ್ಯೆ ಅವರೊಂದಿಗೇ ಮಣ್ಣಾಗಿ ಹೋಗಲಿಲ್ಲ. ಅನೇಕ ಯುವಕರಿಗೆ ಅವರು ಯಾಜ್ಞಿಕ ವೃತ್ತಿಯನ್ನು ಕಲಿಸಿ ಅದರಿಂದಲೇ ಅವರ ಜೀವನಯಾಪನೆಯಾಗುವಂತೆ ಮಾಡಿದ್ದಾರಲ್ಲದೆ, ಯಾವ ಧಾರ್ಮಿಕ ಕಾರ್ಯದಲ್ಲೂ ಹಿಂದೇಟು ಹಾಕದಂತೆ ಶಿಷ್ಯಂದಿರನ್ನು ಪಳಗಿಸಿದ್ದಾರೆ.

ಆಚಾರ್ಯರದು ಕಷ್ಟ-ಕಾರ್ಪಣ್ಯಗಳೊಂದಿಗೆ ಒಡನಾಟವಿದ್ದ ಬದುಕು. ಮೂಲತಃ ಅಣ್ಣಿಗೇರಿಯವರಾದ ಅವರು ತಮ್ಮೂರಿನಲ್ಲಿಯೇ ಇದ್ದ ಹತ್ತಿ ಮಿಲ್ ಒಂದರಲ್ಲಿ ವ್ಯವಸ್ಥಾಪಕರಾಗಿದ್ದರು. ಆ ಮಿಲ್ಲು ಇದ್ದಕ್ಕಿದ್ದಂತೆ ಬಾಗಿಲು ಹಾಕಿದಾಗ ಮುಂದಿನ ಜೀವನ ಹೇಗೆಂಬ ಚಿಂತೆ ಕಾಡತೊಡಗಿತು. ಊರು ಬಿಡುವ ಮನಸ್ಸಿಲ್ಲ. ಬೇರೆಡೆ ಕೆಲಸ ಸಿಗುವಂತಿಲ್ಲ. ಅಂಥ ಬಿಕ್ಕಟ್ಟಿನ ಸಂದರ್ಭದಲ್ಲಿ



ಧೈರ್ಯ ತುಂಬಿ ಆಚಾರ್ಯರನ್ನು ದಾವಣಗೆರೆಗೆ ಕರೆ ತಂದದ್ದು ಅವರು ಕಲಿತ ವೈದಿಕ ವಿದ್ಯೆಯೆ.

ಆಚಾರ್ಯರಲ್ಲಿ ಸುಪ್ತವಾಗಿ ಅಡಗಿದ್ದ ಪ್ರತಿಭೆಯನ್ನು ಸೂಕ್ಷ್ಮವಾಗಿ ಗಮನಿಸಿದ ಉತ್ತರಾದಿ ಮಠಾಧೀಶರು ಅವರನ್ನು ದಾವಣಗೆರೆಯ ಉತ್ತರಾದಿ ಮಠಾಧಿಕಾರಿಗಳೆಂದು ನೇಮಿಸಿ ಗೌರವಿಸಿದ್ದರು. ಇತ್ತೀಚಿನವರೆಗೂ ಆ ಹುದ್ದೆಯಲ್ಲಿದ್ದು ಅದಕ್ಕೆ ಗೌರವ ತಂದು ಕೊಟ್ಟು ಗುರು-ಶಿಷ್ಯರೆಲ್ಲರಿಂದ ಪ್ರಶಂಸೆ ಪಡೆದುಕೊಂಡಿದ್ದ ನಾರಾಯಣಾಚಾರ್ಯ ಮಣ್ಣೂರ ಅವರದು ಸಾರ್ಥಕ ಜೀವನ.

● ವೈ. ಎನ್. ಸುಧಾ

# ಬೆನ್ನುಹತ್ತಿದ ಭೂದೇವಿ

● ಡಾ. ಎಂ.ಆರ್. ಮಂದಾರವಲ್ಲಿ

ನನಗ ಭವಿಷ್ಯ ಎಂದರೆ ಭಯ. ನಮ್ಮಜಮಾನರಿಗೆ ಅಲರ್ಜಿ. ಮುಂದೆ ಹೀಗಿರಬೇಕು, ಹಾಗಿರಬೇಕು ಅಂತ ನಾವೆಂದೂ ಯೋಚಿಸುವುದಿಲ್ಲ. ಹಾಗಾಗಿ ಯಾರಾದ್ರೂ 'ಭ....' ಅಂದರೆ ಸಾಕು ಜಾಗ ಖಾಲಿ ಮಾಡ್ತೀವಿ.

ಮೊನ್ನೆ ಬೆಳ್ಳಂಬೆಳಗ್ಗೆ ಇವರು ವಾಕಿಂಗ್ ಹೋಗಿದ್ದಾಗ ಮನೆ ಮುಂದೆ ಬುಡುಬುಡುಕೆ ಸದ್ದು ಕೇಳಿಸ್ತು. ಬಡಾವಣೆ ಜನರೆಲ್ಲ ಹೊರಗೇ ಇದ್ರು- ಗಿಡಕ್ಕೆ ನೀರು ಹಾಕ್ತ, ಮನೆ ಮುಂದೆ ರಂಗೋಲಿ ಹಾಕ್ತ, ಪಕ್ಕದ್ಮನೇಯವರ ಕಾಫಿ ವಿಚಾರಿಸ್ತ.... ಅಲ್ಲೆ ಇದ್ದವ್ರು ಬುಡುಬುಡುಕೆ ಧ್ವನಿ ಕೇಳಿದ ಕೂಡಲೇ ಅತ್ತ ತಿರುಗಿದರು. ನಾನೂ ಬಾಲ್ಕನೀಲಿ ಕಾಫಿ ಕುಡೀತಿದ್ದವಳು, ಆ ಕಡೆ ನೋಡಿದೆ. ಆತ ಹೆಂಗಳೆಯರ ಮುಖ ನೋಡುತ್ತ ಹೇಳ್ತಲೇ ಬಂದ- "ಶುಭವಾಗತ್ಯೆತಿ.... ತಮಗೆ ಶುಭವಾಗುತ್ಯೆತಿ. ಅಷ್ಟಲಕ್ಷ್ಮಿಯರು ಬರ್‍ತಾರೆ, ನಿಮ್ಮ ಪಾದ ತೊಳೀತಾರೆ, ಮನೆಗೆ ಲಕ್ಷ್ಮೀ ಕಳೆ ಬಂದ್ಯೆತೆ, ನಿಮಗೆ ಹೊಸ ಸಿದ್ಧಿ ಲಭಿಸ್ಯೆತೆ, ನಿಮ್ಮ ಮನೆಯವರಿಗೆ ಬಡ್ತಿ ಕಾದ್ಯೆತೆ..." ಬುಡುಬುಡುಕೆ ಆಡಿಸ್ತಾ ಹೇಳೇ ಹೇಳ್ದ. ಕೇಳಿದ ಹೆಂಗಳೆಯರು ಒಳಗಿನಿಂದ ಅಕ್ಕಿ, ಬೆಲ್ಲ, ದುಡ್ಡು, ಬೇಳೆ ತಂದು ಸುರಿದೇ ಸುರಿದ್ರು ಅವನ ಜೋಳಿಗೆಗೆ. ಮತ್ತೇನು, ಅಷ್ಟಲಕ್ಷ್ಮಿಯರು ಪಾದ ತೊಳೆವಾಗ ಇವರು ಜಿಪುಣರಾಗಲು ಸಾಧ್ಯವೇ? ಅಷ್ಟರಲ್ಲಿ ಎದುರು ಮನೆ ಅಂಬುಜಮ್ಮನಿಗೆ ಹೇಳುತ್ತಿದ್ದ- "ನಿಮ್ಮನೇಲಿ ಗೋಪಾಲ ನಲಿಯುತ್ತಾನೆ, ಹಾಲಿನ ಹೊಳೆ ಹರೀತ್ಯೆತೆ... " ಆಕೆ ಒಳಗಿಂದ ಸೇರಕ್ಕಿ, ಬೆಲ್ಲ, ಪಂಚೆ ತಂದು ಅವನಿಗೆ ಉದ್ದಂಡ ನಮಸ್ಕಾರ ಹೊಡೆದಳು. ಆತ ತಲೆ ಎತ್ತಿ ನನ್ನನ್ನೇ ನೋಡಿದ. ಹಾಗೆಯೇ ದಿಟ್ಟಿಸಿದ. ಅವನತ್ತ ಕುತೂಹಲದಿಂದ ನೋಡ್ತಿದ್ದ ನನಗೆ ಹಿಪ್ನಾಟಿಸಂ ನೆನಪಾಗಿ ಭಯವಾಯ್ತು. ಯಾರೋ ಹೀಗೆ ನೋಡಿದವಳು ಅರ್ಧ ರಾತ್ರೀಲಿ 'ಬಾ.... ಬಾ' ಎಂದಾಗ ಮನೆಯಿಂದ ಓಡಿ ಹೋಗಿದ್ಲಂತೆ. ಎಂದೋ ಎಲ್ಲೋ ಕೇಳಿದ್ದು ನೆನಪಾಗಿ ನಡುಕ ಹುಟ್ಟಿತು. ಒಳಗೆ ಹೋಗಲು ನೋಡಿದೆ. ಆತ ಬಿಡಬೇಕಲ್ಲ! "ನಿಲ್ಲು ತಾಯಿ. ಶ್ರೀದೇವಿ ನಿನ್ನ ಬೆನ್ನ ಹಿಂದಿದ್ದಾಳೆ. ಓಡಿ ಬರ್‍ತಿದ್ದಾಳೆ. ಹಿಂತಿರುಗಿ ನೋಡಿ ಬರಮಾಡಿಕೋ. ಭೂದೇವಿ ನಿನ್ನ ಕಾಲ ಬಳಿ ಕುಳಿತಿದ್ದಾಳೆ. ಅರಶಿನ ಕುಂಕುಮ ನೀಡು ತಾಯೇ" ಅಂದ.

ಶ್ರೀದೇವಿ, ಭೂದೇವಿ ಅಂದೊಡನೆ ಒಂದೀಟು ಆಸೆ ಹುಟ್ಟಿತು. ಬಾಲ್ಕನಿಗೆ ಹಿಂತಿರುಗಿದೆ. ನೆಲದಿಂದ ಮುಷ್ಟಿ ಮಣ್ಣೆತ್ತಿ ಹಿಡಿದು "ತೆಗೆದುಕೊ ತಾಯಿ. ಭೂತಾಯಿ ಬೇಕೆಂದರೆ ಇಳಿಯಲೇಬೇಕು. ಈಕೆಯ ಪೂಜೆ ಮಾಡು. ನಿನ್ನಿಷ್ಟವೆಲ್ಲ ನಡೆದೇ ತೀರುತ್ತೆ. ಶಕುನ ಸುಳ್ಳಾಗದು" ಅಂದ. ಇಡೀ ಬಡಾವಣೆ ನನ್ನನ್ನೇ ನೋಡುತ್ತಿದೆ. ಮತ್ತೆ ನಾನು ಇಳಿದು ಹೋಗದಿದ್ದರೆ ಆಗುತ್ತ್ಯೆ?

ಮೆಟ್ಟಿಲಿಳಿದು ಹೋದೆ. ಕೈ ನೀಡಿದೆ. ಆ ಮಣ್ಣನ್ನೇ ಕೈಲಿ ಹಾಕಿ "ಇಂದಿನಿಂದ ೪೦ ದಿನಗಳವರೆಗೆ ಈಕೆಯನ್ನೇ ಪೂಜಿಸು. ಅನುಗ್ರಹ ಮಾಡ್ತಾಳೆ. ದಕ್ಷಿಣೆ ಇಲ್ಲದ ಶಕುನ ಪ್ರಯೋಜನವಿಲ್ಲ. ಏನಾದರೂ ದಾನ ಕೊಡಮ್ಮ..." ಎಂದ. 'ಸರಿ' ಅಂದವಳೇ ಆ ಮಣ್ಣನ್ನು ಮನೆಗೆ ತಂದು ಕಾಗದದ ಮೇಲೆ ಹಾಕಿ, ಅವನಿಗೆ ಎರಡು ರೂ. ತೆಗೆದುಕೊಂಡು ಹೋಗಿ ಕೊಟ್ಟೆ. ಅವನದನ್ನು ಕಣ್ಣಿಗೊತ್ತಿಕೊಂಡು ಮತ್ತೊಮ್ಮೆ ಆಶೀರ್ವದಿಸಿದ.

ಮನೆಗೆ ಬಂದ ನನಗೆ ಮಣ್ಣಿನದೇ ಯೋಚನೆ. ಆ ಮಣ್ಣನ್ನು ಬೀಸಾಡಲು ಮನಸ್ಸಿಲ್ಲ. ಇಟ್ಟುಕೊಳ್ಳಲೂ ಸಾಧ್ಯವಿಲ್ಲ. ವಾಕಿಂಗ್ ಹೋದ ಇವರು ಬರುವ ಸಮಯ. ಬಂದು ಅದನ್ನು ನೋಡಿದರೆ ರಾದ್ಧಾಂತವೇ ಆಗಬಹುದು. ಕೊನೆಗೆ ಏನೂ ತೋಚದೇ ಬಚ್ಚಲು ಮನೆಯಲ್ಲಿದ್ದ ಒಂದು ಹಳೆಯ ಪ್ಲಾಸ್ಟಿಕ್ ಮಗ್‌ನಲ್ಲಿ ಹಾಕಿಟ್ಟು ಬಂದೆ.

ಇವರು ಮನೆಗೆ ಬಂದವರೇ ದಡ ದಡ ಸ್ನಾನಮಾಡಿ, ಪೂಜೆ ಮುಗಿಸಿ "ತಿಂಡೀ..."



ಎನ್ನುವ ವೇಳೆಗೆ "ರೆಡೀ" ಅಂದು ಟೇಬಲ್ ಮೇಲಿಟ್ಟೆ. "ಓಹೋ, ಉಪ್ಪಿಟ್ಟಾ..." ಅನ್ನುತ್ತಲೇ ತಿನ್ನಲು ಶುರುಮಾಡಿದರು.

ನಾನು "ರ್‍ರೀ, ಇವತ್ತೆನಾಯ್ತು, ಗೊತ್ತಾ" ಅಂದೆ.

"ಇನ್ನೇನಾಗುತ್ತೆ, ಮಲ್ಲಿಗೇ ಹೂವು ಆರು ರೂಪಾಯಿಗೆ ಮಾರು ಅಂದಿರ್‍ತಾನೆ. ಐದು ರೂ.ಗೆ ತೂಗೊಂಡಿರ್‍ತೀಯ."

"ಅಲ್ಲರೀ, ಇವತ್ತು ಒಬ್ಬ ಬುಡುಬುಡುಕೆಯವನು ಬಂದಿದ್ದ" ಅನ್ನುತ್ತಿದ್ದಂತೆಯೇ,

"ನೀನೇನೂ ಕೇಳ್ಲಿಲ್ಲ ತಾನೇ ಸಧ್ಯ" ಅಂದ್ರು, ತೀಕ್ಷ್ಣದೃಷ್ಟಿ ಬೀರಿ.

"ನಾನೇನೂ ಕೇಳ್ಲಿಲ್ಲರೀ, ಅವನಾಗೇ ಏನಂದ ಅಂದ್ರೇ..."

"ನೂರ್‍ಸಲ ಹೇಳ್ತಿನಿ, ಕಳ್ರು, ಸುಳ್ರು ಅವರೆಲ್ಲ. ಆ ಸಹವಾಸ ಬೇಡ ನಮ್ಗೆ ಅಂತ. ನೀನೆಲ್ಲಿ ಕೇಳ್ತೀಯೆ!" ಉರಿದು ಬಿದ್ದರು! "ನೋಡು ಈಗ್ಲೇ ಹೇಳ್ತೀದ್ದೀನಿ. ನಾಳೆ ಏನಾದ್ರೂ ಹೆಚ್ಚು ಕಡಿಮೆ ಆದ್ರೆ ನಾನು ಜವಾಬ್ದಾರನಲ್ಲ ಅಪ್ಪ" ಅಂದು ಕೈ ತೊಳೆದು ಎದ್ದೇ ಬಿಟ್ಟರು. ಶರ್ಟು ಹಾಕಿಕೊಳ್ತಿದ್ರೂ ಅವರ ಗೊಣಗಾಟ ನಡೆದೇ ಇತ್ತು.

"ಬುದ್ಧಿ ಅನ್ನೋದು ಓದ್ನಿಂದ ಬರಲ್ಲ. ವಿವೇಕ ತಲೇಲಿ ಹುಟ್ಟಬೇಕೆ ಹೊರ್‍ತು ಪುಸ್ತಕದಲ್ಲಲ್ಲ... ನಾನಿನ್ನು ಬರ್‍ತೀನಿ. ಬಾಗಿಲು ಭದ್ರವಾಗಿ ಹಾಕ್ಕೊ. ಯಾರು ಬಂದರೂ ಒಳಗೆ ಸೇರಿಸ್ಬೇಡ" ಅಂದು ಹೊರಟುಬಿಟ್ಟರು.

ಅವರನ್ನು ಕಳಿಸಿ ಒಳಗೆ ಬಂದ ನನಗೆ ತಿಂಡಿ ತಿನ್ನಲು ಮನಸ್ಸೇ ಇಲ್ಲ. ಅವರ ಬೈಗುಳದಿಂದ ನನಗ್ಯಾವ ಬೇಜಾರೂ ಇಲ್ಲ. ಆದ್ರೇ ಮನಸ್ಸೆಲ್ಲ ಬುಡುಬುಡುಕೆಯವನ ಮಾತನ್ನೆ ಮೆಲಕು ಹಾಕ್ತಿತ್ತು. ಕುಕ್ಕರ್ ಇಳಿಸಿ ಸ್ನಾನಕ್ಕೆ ಹೋದೆ. ಅಲ್ಲಿ ಮಣ್ಣು ನನ್ನ ನೋಡಿ ನಕ್ಕಿತು. ಹೊರಗೆಸೆದು ಬಿಡೋಣ ಅಂದುಕೊಂಡೆ. ಪುನಃ ಮನಸ್ಸು ಬರಲಿಲ್ಲ. ಆಕಡೆ ನೋಡದೆಯೇ ಸ್ನಾನ ಮುಗಿಸಿದೆ. ತಲೆ ಬಾಚಿಕೊಳ್ಳುತ್ತಿದ್ದೆ. ಎದುರು ಮನೆ ಅಂಬುಜಮ್ಮ ಬಂದರು. ಬಾಗಿಲನ್ನು ಜೋರಾಗಿ ಬಡಿಯತೊಡಗಿದರು.

ನಾನು ಬಾಗಿಲು ತೆಗೆದು ಅವರನ್ನು ನೋಡಿ "ಬನ್ನಿ ಒಳಗೆ ಅದೇನು ಅಷ್ಟು ಜೋರಾಗಿ ತಟ್ತಿದಿರಾ? ಕಾಲಿಂಗ್‌ಬೆಲ್ ಮಾಡಬಾರದಾ?" ಅಂದು ಒಳಗೆ ಹೋದೆ. ಅವರೂ ನನ್ನ ಹಿಂದೆಯೇ ಬರುತ್ತಾ, "ಅಲ್ಲರೀ, ಇವತ್ತೇ ಭವಿಷ್ಯ ಕೇಳಿ ನೀವೆಲ್ಲ ಕನಸು ಕಾಣ್ತೀರ್‍ತೀರೋ ಅಂತ ಅಷ್ಟೊಂದು ಜೋರಾಗಿ ಬಡಿದೆ," ಅಂದರು.

ನನಗ್ಯಾಕೋ ಆ ಮಾತು ಬೇಡವಾಗಿತ್ತು. ಕನ್ನಡಿಯಲ್ಲಿ ನೋಡಿಕೊಳ್ತ ಹಣೆಗಿರಿಸಿಕೊಳ್ತಿದ್ದೆ. ಅಂಬುಜಮ್ಮ "ನಾನಂತೂ ಅವನನ್ನ ನಂಬ್ತೀನಿ. ನಮ್ಮ ನಾದಿನಿ ಮಗ ಇದ್ದಾನಲ್ಲ, ಅವನ ಹೆಂಡ್ತಿ ತಮ್ಮನ, ಗೆಳೆಯನ ಭಾವನ ಪರಿಚಯದವರೊಬ್ಬರಿಗೆ ಹೀಗೆ ಆಯ್ತುಂತೇರೀ...." ಅವರ ಮಾತನ್ನು ತುಂಡರಿಸಿ,

"ಕೂತ್ಕೊಳ್ಳಿ ನಿಂತೇ ಇದೀರಲ್ಲ!" ಎಂದು ಅಲ್ಲೇ ಇದ್ದ ಕುರ್ಚಿ ಸರಿಸಿದೆ.

ಅವರು ಮಾತು ಮುಂದುವರೆಸ್ತಾ, "ಅವನಿಗೆ ಏನಾಯ್ತುಂತ ಗೊತ್ತಾ...?" ಅನ್ನುತ್ತಿರುವಂತೆಯೇ, ನಾನು "ಸಕ್ರೆ ಬೇಕಿತ್ತಾ ಅಂಬುಜಮ್ಮ?" ಅಂದೆ.

"ಅಲ್ಲರಿ, ಈ ತುಟ್ಟಿ ಕಾಲಲ್ಲಿ ಸಕ್ರೆ ಕೇಳ್ತೀನಾ?" ಅಂದರು. ಆಕೆಗೋ ಕೊಂಚ ಅರ್ಥ ಆಗಿರಬೇಕು. "ಯಾಕ್ರೀ ಒಂಥರಾ ಇದ್ದೀರಾ ಅಷ್ಟೊಂದು ಒಳ್ಳೆ ಶಕುನ ಕೇಳಿ ಸಿಹಿತಿನ್ನೋದು ಬಿಟ್ಟು ಪೆಚ್ಚು ಮುಖ ಹಾಕ್ಕೊಂಡಿದ್ದೀರಿ?" ಅಂದರು.

ನಾನೇನೂ ಮಾತನಾಡದೇ ಹಣೆಗಿರಿಸಿಕೊಂಡು ಸಾರು ಕುದಿಸಲು ಹೋದೆ. ಆಕೆ ಹಿಂದೆಯೇ ಬಂದರು. ಸುತ್ತಲೂ ಕಣ್ಣಾಡಿಸ್ತಾ "ಅದ್ಸರಿ, ಆಕೇನ ಏನು ಮಾಡಿದ್ರಿ" ಪಿಸುದನೀಲಿ ಕೇಳಿದ್ರು.

"ಯಾರನ್ನ?" ಕಕ್ಕಾಬಿಕ್ಕಿಯಾಗಿ ಕೇಳ್ದೆ.

"ಒಳ್ಳೆ ಚೆನ್ನಾಯ್ತುರೀ ನೀವು ಕೇಳೋದು ಅದೇರೀ ಆಕೇನ ಆಗ್ಲೇ ಬರಮಾಡಿಕೊಂಡಿದ್ರಲ್ಲ..." ಕೊಂಚ ಹುಬ್ಬೇರಿಸಿಯೇ ಕೇಳಿದ್ರು.

"ಯಾರ್‍ರೀ 'ಆಕೆ' ಅಂದ್ರೇ?" ಕೊಂಚ ಸಿಡುಕಿದೆ. ನಾನ್ಯಾರನ್ನೋ ಕರಕೊಂಡು ಬಂದು ಕೊಲೆ ಮಾಡಿದೀನೀ ಅನ್ನೋ ರೀತೀಲಿ ಮಾತಾಡ್ತಿರೋರು ನೋಡಿ ನನಗೆ ಒಂದ್ರೀತಿ ಭಯವೇ ಆಗಿತ್ತು.

"ಮೆಲ್ಲಗೆ ಯಾರಾದ್ರೂ ಕೇಳಿಸ್ಕೊಂಡ್ರೇನು ಗತಿ?" ಅಂತ ಪಿಸುದನೀಲಿ ಆಕೆ ಹೇಳಿದಾಗ,

ನನಗೆ ತಡೆಯಲಾರದಷ್ಟು ಕೋಪ ಬಂತು.

"ಏನ್ರೀ ಹಾಗಂದ್ರ? ನಾನೇನು ಕಳ್ಳನಾ ಮಾಡಿದ್ದೀನಾ? ಕೊಲೆ ಮಾಡಿದ್ದೀನಾ" ಅಂತ ಜೋರಾಗೇ ರೇಗಿದೆ. ಅಕ್ಕ ಪಕ್ಕದ ಫ್ಲ್ಯಾಟ್‌ನ ಎರಡು ಕಿಟಕಿ ತೆಗೆದು ನಾಲ್ಕು ಕಣ್ಣುಗಳು ಇಣುಕಿ ನೋಡಿದವು.

ನನ್ನ ರೇಗಾಟಕ್ಕೆ ಆಕೆ ಬೆದರಿದರೂ ಹುಡುಕು ನೋಟ ಏನೂ ನಿಲ್ಲಲಿಲ್ಲ. ನನಗೆ ಆಕೆಯೊಡನೆ ಮಾತನಾಡಲು ಇಷ್ಟವಾಗದ್ದರಿಂದ ಕೆಲಸಕ್ಕೆ ತೊಡಗಿದೆ. ಕೆಲವು ನಿಮಿಷಗಳ ನಂತರ,

"ಅದೆಲ್ಲ ಸರೀ, ಆದರೂ ಆಕೇನ ಎಲ್ಲಿಟ್ರೀ ಅಂತ ಹೇಳಲೇ ಇಲ್ಲಾ?" ಅಂದ್ರು. ನಾನು ಸ್ವಲ್ಪ ವ್ಯಂಗ್ಯವಾಗಿ "ಆಗ್ನಿಂದ ಆಕೇ, ಆಕೇ, ಅಂತೀದ್ದೀರಲ್ಲ ಯಾರು ಅಂತ ಹೇಳಲೇ ಇಲ್ಲಾ!" ಅಂದೆ.

"ಅದೇರೀ, ಆಕೆ ಭೂಮಾತೆ..." ಅಂದರು.

"ರೀ ಪುನಃ ಶುರುಮಾಡಬೇಡಿ. ಯಾವ ಭೂತಾಯಿ ನನಗೆ ಗೊತ್ತಿಲ್ಲ," ಅನ್ನುತ್ತಿದ್ದಂತೆ ಆಕೆ ತಡೆದು

"ಪುನಃ ರೇಗಬೇಡಿ. ಅದು ಆ ಬುಡುಬುಡುಕೆಯವ ಕೊಟ್ಟಿದ್ದಲ್ಲ..." ಎನ್ನುತ್ತ ಅರ್ಧಕ್ಕೆ ನಿಲ್ಲಿಸಿದರು. ಮುಂದೆ ಹೇಳುವುದು ಮಹಾ ಅಪರಾಧ ಎನ್ನುವಂತೆ.

"ಓ..... ಮಣ್ಣಾ" ಅಂದೆ. ನನಗೀಗ ಆಕೆ ಬಂದ ಉದ್ದೇಶ ತಿಳಿಯಿತು. ಕೈಯಲ್ಲಿ ಬಟ್ಟಲು ನೆಪಮಾತ್ರ. ನಾನು ಆ ಮಣ್ಣನ್ನು ಎಲ್ಲಿಟ್ಟಿದೀನಿ, ಹೇಗೆ ಪೂಜಿಸ್ತೀನಿ, ಏನಾದ್ರೂ ಹಣಕಾಸು ಜೋಡಿಸಿ ಆಸ್ತಿ ಮಾಡ್ತೀನಾ ಅಂತೆಲ್ಲ ವಿಚಾರಿಸಲು ಆಕೆ ಬಂದದ್ದು.

"ಶ್... ಅದನ್ನ ಮಣ್ಣು ಅನ್ನಬಾರದು. ಹಾಗಂದ್ರೇ ವರ ಸಿದ್ಧಿಸಲ್ಲ. ಹೊಸ್ತಿಲಲ್ಲಿ ತಥಾಸ್ತು ದೇವತೆ ಇರ್ತಾಳೆ. ನೀವು ಮಣ್ಣು ಅಂದ್ರೇ... ಮಣ್ಣೆ ಆಗೋದು. ಸರೀ... ಆಕೇನ ಎಲ್ಲಿಟ್ರೀ?" ಅಂದರು.

"ಬಚ್ಚಲು ಮನೇಲಿ ಒಂದು ಪ್ಲಾಸ್ಟಿಕ್ ಮಗ್ ಇತ್ತು. ಅದ್ರಲ್ಲಿ ಹಾಕಿದೀನಿ," ಅಂದೆ.

"ಅಯ್ಯೋ ರಾಮ, ಕೈಗೆ ಬಂದದ್ನ ಹೀಗೆ ಹಾಳು ಮಾಡೋದೆ?" ಎನ್ನುತ್ತಾ ತಲೆ ಚಚ್ಚಿಕೊಂಡರು.

"ಯಾಕ್ರೀ! ನಾನೇನು ಮಾಡ್ದೆ?" ಅಂದೆ ಆಶ್ಚರ್ಯದಿಂದ.

"ಹೋಗ್ರೀ... ಬೇಗ ಆಕೇನ ಕರಕೊಂಡು ಬನ್ನಿ. ಎಂಥ ಕೆಲ್ಸ ಮಾಡಿದ್ರಿ?" ಎನ್ನುತ್ತಾ ವಿಲಪಿಸತೊಡಗಿದರು. ಅವರ ರೇಗಾಟಕ್ಕೆ ಹೆದರಿ ಓಡಿಹೋಗಿ ಆ ಮಣ್ಣನ್ನು ತಂದೆ.

"ಅನ್ಯಾಯ. ಒಂದು ಬೆಳ್ಳಿ ಅಥವಾ ತಾಮ್ರದ ಬಟ್ಟಲು ಸಿಗಲಿಲ್ವೆ ನಿಮಗೆ! ಪ್ಲಾಸ್ಟಿಕ್‌ನಲ್ಲಿ ವರದ ಪ್ರಭಾವ ಕಡಿಮೆ ಆಗುತ್ತೆ. ನಿಮಗೆ ಬುದ್ಧೀನೇ ಇಲ್ಲ, ಅರ್ಥವೂ ಆಗಲ್ಲ..." ಎಂದು ಗೊಣಗುತ್ತಾ ಅಲ್ಲೇ ದೇವರ ಮುಂದೆ ಇದ್ದ ಒಂದು ಬೆಳ್ಳಿ ಬಟ್ಟಲಿಗೆ ಅದನ್ನು ಹಾಕಿದರು.

"ಅಲ್ಲ ಅಂಬುಜಮ್ಮ... ಬೆಳ್ಳಿ ಆದ್ರೇನು ಪ್ಲಾಸ್ಟಿಕ್ ಆದ್ರೇನು, ಒಳಗಿರೋದು ಮಣ್ಣೇ ಅಲ್ವೆ?" ಅಂದೆ.

"ಪುನಃ ಆ ಪದ ಹೇಳ್ಬೇಡಿ," ಕೆನ್ನೆ ಕೆನ್ನೆ ಬಡಕೊಂಡ್ರು "ಆಕೆ ಭೂಮಾತೆ. ಅವಳಿಗೆ ಕೊಡಬೇಕಾದ ಮರ್ಯಾದೆ ಕೊಡಬೇಕು."

ಹೊರಗೆ ಹೋದರು. ಐದು ನಿಮಿಷದಲ್ಲಿ ಬಂದರು ಯಾವುದೋ ಎಲೆಗಳು, ಹೂಗಳನ್ನು ಹಿಡಕೊಂಡು ಬಂದು ಮಣ್ಣಿಗೆ ನೀರು ಚುಮುಕಿಸಿ, ಅರಶಿನ, ಕುಂಕುಮ ಹಾಕಿ, ಊದು ಬತ್ತಿ ಹಚ್ಚಿ ಯಾವುದೋ ಸ್ತೋತ್ರ ಹೇಳಿ "ಅಡ್ಡ ಬೀಳ್ರೀ, ತಪ್ಪಾಯ್ತು ಅಂತ ಕೇಳ್ಕೋಳ್ಳಿ" ಅಂದ್ರು. ಪುನಃ ಬೈದಾರು ಅಂದುಕೊಂಡು ಅಡ್ಡಬಿದ್ದೆ.

ಅವರಿಗೀಗ ಸಮಾಧಾನ ಆದಂತಿತ್ತು. "ಇವತ್ತಿಂದ ೪೦ ದಿನಗಳ ಕಾಲ ಪೂಜೆ ಮಾಡಿ. ಒಳ್ಳೆಯದಾಗುತ್ತೆ. ಭೂದೇವಿ ಒಲಿತಾಳೆ. ನಿಮಗೆ ಗೊತ್ತಿಲ್ಲದ ಕಡೆ ಬುದ್ಧಿ ಉಪಯೋಗಿಸಬೇಡಿ," ಅಂದರು.

"ಸರಿ," ಎಂದೆ.

"ಕರೆಂಟ್ ಪ್ಲಾಸ್ಟಿಕ್‌ನಲ್ಲಿ ಹರಿಯುತ್ತೇನ್ರಿ?" ಅಂತ ಪ್ರಶ್ನಿಸಿದ್ರು.

ಈಗ್ಯಾಕಪ್ಪ ಅದು ಅಂತ ಅಂದ್ಕೊಂಡು, "ಇಲ್ಲ," ಅಂದೆ.

"ಹಾಗೆ ವರ ಕೂಡ ಕರೆಂಟ್ ಥರಾ. ಎಲ್ಲಿ ಹರಿಯುತ್ತೋ ಅಂತಹ ಕಡೆ ವರಪ್ರಸಾದ ಇಡಬೇಕು. ಸರಿ, ನನಗೆ ಸ್ವಲ್ಪ ಸಾರಿನ ಪುಡಿ ಕೊಡಿ,

ಮತ್ತೆ ದಿನಾ ಪೂಜೆ ಮಾಡೋದ್ನ ಮರೀಬೇಡಿ" ಅನ್ನುತ್ತಾ ಸಾರಿನ ಪುಡಿ ತೆಗೆದುಕೊಂಡು ಹೊರಟು ಹೋದರು.

ಆಕೆಯ ತರ್ಕವನ್ನು ಮೆಚ್ಚಿದರೂ ಇವರಿಗೆ ತಿಳಿದರೆ ಏನು ಹೇಳ್ತಾರೋ ಅಂತ ಹೆದರಿದೆ. ಸಂಜೆ ಅವರು ಹೊರಗೆ ಸುತ್ತಾಡಲು ಕರೆದಾಗ ಬೇಡ ವೆಂದೆ. "ಯಾಕೆ ಏನಾಯ್ತು ರಾಣಿ'ಗೆ ?" ಎನ್ನುತ್ತಾ ಹಣೆ ಮುಟ್ಟಿ ನೋಡಿ- "ಎಲ್ಲ ಸರಿಯಾಗಿದೆ ಯಲ್ಲ !" ಅಂದರು.

ಸುಮ್ಮನಿದ್ದೆ.

"ಓಹೋ, ಬೆಳಿಗ್ಗೆ ಬೈದದ್ದಕ್ಕೆ ಕೋಪ ಬಂತಾ ?" ಅಂದರು. ಹಾಗೇ ಮುಂದುವರೆಸಿ "ನೋಡು ನೀನ್ಯಾವತ್ತು ಬುದ್ಧಿವಂತೆ ಆಗೋದು ?" ಅಂದ್ರು. ನಾನು ಅಂಬುಜಮ್ಮ ಬಂದು ಹೋದದ್ದು, ಬುಡ ಬುಡಿಕೆಯವನ ಮಾತು ಎಲ್ಲ ಹೇಳ್ದೆ - "ರ್‍ರೀ, ನಮಗೆ ನಂಬ್ಕೆ ಇದ್ಯೋ ಇಲ್ವೋ, ಸುಮ್ನೇ ಅದಕ್ಕೆ ಅರಶಿನ, ಕುಂಕುಮ ಹಾಕಿದ್ರೆ ಹೇಗೆ !" ಅಂದೆ.

"ಇಲ್ಲೇ ನಾವು ಎಡವ್ತೋದು. ನೀನು ಹೇಳೋದು ಹೇಗೆ ಅಂದ್ರೇ ಕುಡೀದಿದ್ರೂ ಬೇಡ, ಬಾರಿಗೆ ಹೋಗಿ ಸುಮ್ನೆ ಕೂತ್ಕೊಳ್ಳೋಣ ಅಂತ. ಅಲ್ಲ ಕಣೇ, ದಿನಾ ಪೂಜೆ ಮಾಡ್ತಾ, ಭಕ್ತಿ ಅದು ಇದು ಅಂತ ಶುರು ಆಗೀ ಅದರ ಹಿಂದೆ ವ್ರತ, ಪೂಜೆ, ನೇಮ, ನಿಷ್ಠೆ ಅಂತ ಎಲ್ಲ ಬಾಲಂಗೋಚಿ ತರ ಅಂಟಿಕೊಳ್ಳಲು ನನಗಿಷ್ಟ ಇಲ್ಲ. ಈಗ ನಮ ಗೇನು ಕೆಟ್ಟದಾಗಿದೆ ?" ಅಂದರು.

"ಹಾಗಲ್ಲರೀ, ಏನೋ ಒಂದ್ವೇಳೇ..."

"ಅದೆಲ್ಲ ಬೇಡ, ಸೈಟ್ ಬೇಕು ಅಂದ್ರೇ ಹಣ ಸೇರಿಸೋಣ. ಕೊಂಡ್ಕೊಳ್ಳೋಣ. ಮಣ್ಣನ್ನು ಪೂಜಿಸಿದ್ರೇ ಆಕಾಶದಿಂದ ಹಣ ಉದುರಲ್ಲ". ಖಂಡಿತ ವಾಗಿ ಹೇಳಿದ್ರು.

"ರ್‍ರೀ, ನನಗೆ ಅದನ್ನ ಬೀಸಾಕಕ್ಕೆ ಮನಸ್ಸಿಲ್ಲ.

ನೀವು ಪೂಜೆ ಮಾಡಬೇಡಿ ನಾನ್ಮಾಡ್ತೀನೀ ಸರೀನಾ!'' ಅಂದೆ.

ಕೆಲವು ನಿಮಿಷ ಸುಮ್ಮಿದ್ರು. ನಂತರ "ಸರೀ ಅದು ಬರೀ ಪೂಜೆ ಮಾತ್ರ. ಜತೆಗೆ ಬಾಲಂಗೋಚಿ ಬೇಡ. ಅಂದ್ಹಾಗೇ ಎಲ್ಲಿಟ್ಟಿದ್ದೀಯಾ?'' ಅಂದ್ರು.

"ಆಕೆ, ದೇವರ ಮುಂದೆ ಇದ್ದಾಳೆ'' ಅಂದೆ.

"ಯಾರೇ?'' ಬೆಚ್ಚಿ ಬಿದ್ರು.

"ಅದೇರೀ, ಆಕೇ, ಭೂಮಾತೆ'' ಅಂದೆ. ಗೊಳ್ಳನೇ ನಕ್ಕರು. ನಂತರ ಹೋಗಿ ನೋಡಿ ಹೇಳಿದ್ರು- "ಊದಿನ ಕಡ್ಡಿ ಸಿಗಿಸಕ್ಕೆ ಏನೂ ಇಲ್ಲ ಅಂತಿದ್ವೆ. ಇದು ಅದಕ್ಕಾದ್ರೂ ಆಯ್ತು.''

ದಿನಾ ಪೂಜೆ ಮಾಡೋವಾಗ ಅರಶಿನ ಕುಂಕುಮ ಅಂತೂ ಬೀಳ್ತಿತ್ತು ಆಕೆಗೆ. ಆದ್ರೇ.... ಭೂಮಿ ಕೊಡುವ ನೆಂಟರು ನಮ್ಮಲ್ಲಿ ಯಾರೂ ಇಲ್ಲ. ಅಬ್ಬಬ್ಬಾ ಅಂದ್ರೆ ೧೦೦೦ ರೂ. ಬರಬಹುದು. ಅಂಥದ್ರಲ್ಲಿ ಭೂಮಿ ನಮಗ್ಹೇಗೆ ಸಿಕ್ಕೀತು? ಬುಡುಬುಡುಕೆಯವ- ಅಂಬುಜಮ್ಮ ನನ್ನ ಮನಸ್ಸು, ನಂಬಿಕೆ... ಹೀಗೆ ದಿನಾ ಯೋಚಿಸಿ ಯೋಚಿಸಿ ನೆಮ್ಮದಿಯೇ ಕೆಟ್ಟು ಹೋಯ್ತು. ಇನ್ನು ನಮ್ಮವರು ಹೇಳಿದಂತೆ ಕಾಸಿಗೆ ಕಾಸು ಜೋಡಿಸಿದರೂ ೪೦ ದಿನದಲ್ಲಿ ಭೂಮಿ ಕೊಂಡುಕೊಳ್ಳೋದು ಗಗನ ಕುಸುಮ.

ಒಂದಿನ ಇವರು ಆಫೀಸಿನಿಂದ ಬಂದವರೇ - "ಲಲಿತತ್ತೆ ನಿನಗೆ ಬರ್ದಿದ್ದಾರೆ ನೋಡು'' ಎಂದು ಒಂದು ಪತ್ರ ಕೊಟ್ಟರು..

ಪತ್ರ ಬಿಡಿಸಿದೆ --'ನಿನ್ನ ಹತ್ರ ಮುಖ್ಯವಿಚಾರ ಚರ್ಚಿಸಬೇಕಿದೆ ಬಾ' ಎಂದಷ್ಟೆ ಇತ್ತು.

ಏನಿರಬಹುದು ಅಂತಹ ವಿಚಾರ? ಲಲಿತತ್ತೆ ನನ್ನ ದೂರದ ಅಜ್ಜಿ. ನನ್ನ ಕಂಡ್ರೆ ವಿಪರೀತ ಇಷ್ಟ. ಆಗಿನ ಕಾಲದಲ್ಲಿ ಮದುವೆ ಆಗದೇ ಉಳಿದ ಹೆಣ್ಣು ಮಗಳು. ಬಹಳ ಛಲಗಾತಿ. ಸಾಕಷ್ಟು ದುಡಿಮೆ ಹೊಲ, ಮನೆ, ಹಸು ಎಲ್ಲ ಇಟ್ಟುಕೊಂಡಿದ್ದಳು. ಎಲ್ರೂ ಅತ್ತೇ ಅಂತಿದ್ರಿಂದ ನಾನೂ ಹಾಗೇ ಕರೀತಿದ್ದೇ. ಸಾಕಷ್ಟು ಬಂಗಾರ ಸಹ ಇತ್ತು. ಅವರ ತಾಯಿಯ ಆಸ್ತಿಯೆಲ್ಲ ಈಕೆಗೇ ಬಳುವಳಿ ಬಂದಿತ್ತು. ಮದುವೆ ಆಗಲಿಲ್ಲ ಎಂಬ ಕಾರಣಕ್ಕೆ ತಾಯಿ, ತನ್ನದನ್ನೆಲ್ಲ ಕೊಟ್ಟಿದ್ದರು. ಈಕೆ ಅದನ್ನೇ ರೂಢಿಸಿ, ಮತ್ತಷ್ಟು ವೃದ್ಧಿಪಡಿಸಿದ್ದಳು. ನಾನು ಮದುವೆಯಾಗಿ ಹೊರಟಾಗ ಆಕೆ ಅತ್ತೇ ಬಿಟ್ಟಿದ್ದಳು.

"ನೀನೂ ಹೊರಟೆ, ನನ್ನ ಕಾಲವೂ ಮುಗಿಯಿತು. ಸುಖವಾಗಿರು.''

ನನಗೆ ಎಲ್ಲವೂ ನೆನಪಿಗೆ ಬರುತ್ತಿತ್ತು. ಈಗೇಕೆ ಬರೆದಿರಬಹುದು. ಅವರಿಗೆ ಹೇಳಿ ಶನಿವಾರ ಹೊರಡುವ ಸಿದ್ಧತೆ ನಡೆಸಿದೆವು. ಈ ನಡುವೆ ಒಮ್ಮೆ ಅಂಬುಜಮ್ಮ ಬಂದಾಗ ಪತ್ರದ ವಿಷಯ ಹೇಳಿದೆ. ತಕ್ಷಣ ಆಕೆ,

"ನಾನ್ಹೇಳ್ಲಿಲ್ವಾ! ಒಲಿದಳಲ್ಲ ಭೂ ತಾಯಿ,'' ಅಂದರು.

"ಹೇಗೆ?'' ಅಂದೆ

"ಅವರಿಗೆ ಮದುವೆ ಆಗಿದ್ಯಾ?''

"ಇಲ್ಲ''

"ಜಮೀನಿದ್ಯಾ!''? "ಹೂಂ!''

"ಮನೆ ಇದ್ಯಾ!''

"ಹೂಂ.''

"ವಯಸ್ಸು ಹೋಗಿ ಮುದುಕರಾಗಿದ್ದಾರಾ!''

"ಹೌದು, ಏನ್ಹೇಳಿ?'' ಅಂದೆ.

"ಇನ್ನೇನು ಬಂಪರ್ ಹೊಡೀತು. ಆಕೆಗೆ ಕಾಲ ಮುಗಿದಿರ್ಬೇಕು. ನಿಮಗೆ ಬರ್ದಿದ್ದಾರೆ. ಇನ್ನೇನು ಎಲ್ಲ ನಿಮಗೇ ಆಯ್ತಲ್ಲ!'' ಅನ್ನುತ್ತಾ ಹೊರಟೇಬಿಟ್ಟಳು

ಅಷ್ಟು ಹೊತ್ತು ಲಲಿತತ್ತೆಯ ಪತ್ರದ ನೆನಪಿನಲ್ಲಿ ಮುಳಗಿದ್ದ ನನಗೆ ಸಾವಿರ ಕ್ಯಾಂಡಲ್ ಬಲ್ಬ್ ಹಚ್ಚಿದಂತಾಯ್ತು. ಅಂಬುಜಮ್ಮ ಹೇಳಿದ್ದು ನಿಜವೇ ಇರಬೇಕು. ಅತ್ತೆಗೆ ಏನೋ ಆಗಿದೆ. ನನ್ನ ಕಂಡ್ರೆ ಇಷ್ಟ ಅಂತ ಆಸ್ತಿ ಎಲ್ಲ ನನಗೆ ಬರೆದು ಪತ್ರ ನನ್ನ ಕೈಗಿಡೋಕೆ ಹೀಗೆ ಬರೆದಿರಬೇಕು. ಯಾಕೋ ಮನಸ್ಸೆಲ್ಲ ಪಿಚ್ಚೆನ್ನಿಸಿತು. ಆಸ್ತಿ ನನಗೆ ಬರುವುದರ ಬಗ್ಗೆ ಸಂತೋಷ ಆಗಲಿಲ್ಲ. ಆದರೂ ಭಂಡ ಮನಸ್ಸು! ಹೇಗಿದ್ರೂ ಅತ್ತೆಗೆ ವಯಸ್ಸಾಗಿದೆ. ಆಸ್ತಿ ಎಲ್ಲ ಯಾರಿಗಾದರೂ ಕೊಡಲೇಬೇಕಲ್ಲ... ಅಂದು ಸಮಾಧಾನ ಪಟ್ಟುಕೊಂಡಿತು. ಈ ಭಾವನೆಯ ಜತೆ ಇಷ್ಟು ದಿನದ ತಾಕಲಾಟಕ್ಕೆ ಮುಕ್ತಿ ಸಿಕ್ಕಿತು.

ಸಂಜೆ ಅವರು ಬಂದಾಗ ಹೇಳಿದೆ. ಕೇಳಿ ಸಿಡಿದರು. "ಹುಚ್ಚುಚ್ಚಾಗಿ ಆಡ್ಬೇಡ. ನಿನಗೆಲ್ಲೋ ಭೂತ ಹತ್ತಿದೆ. ಅಲ್ಲ ಕಣೇ ಅಷ್ಟು ಇಷ್ಟಪಡ್ತಾರೆ ಅಂತೀಯ. ಅವರ ಸಾವನ್ನು ಹೇಗೇ ಬಯ

## ಅಂದು - ಇಂದು







ಸ್ತೀಯಾ? ಕಂಡವರ ಆಸ್ತಿಗೆ ಯಾವತ್ತೂ ಕೈ ಒಡ್ಡಬಾರದು ಕಣೇ. ನಮ್ಮ ಮುಷ್ಟೀಲಿ ಎಷ್ಟು ಹಿಡಿಯುತ್ತೋ ಅಷ್ಟೇ ಕಾಳು ನಮ್ಮದು. ಉಳಿದದ್ದು ನಮ್ಮದಲ್ಲ. ನಿನಗ್ಯಾಕೆ ಈ ಬುದ್ಧಿ ಬಂತೋ'' ಅಂದು ರೇಗಿದರು.

''ಅಲ್ಲರೀ, ಒಂದ್ವೇಳೆ ಹಾಗಾಗಿದ್ರೇ ಆಗ!'' ಅಂದೆ.

''ಪುನಃ ಅದೇ ಮಾತು, ಹಾಗಾದಾಗ ನೋಡೋಣ. ಈಗ ಸುಮ್ನಿರು. ಬೆಳಗ್ಗೆ ಹೊರಡ ಬೇಕು. ತಯಾರಿ ನಡೆಸು,'' ಅಂದು ಎದ್ದುಹೋದರು.

ರಾತ್ರಿ ಪೂರಾ ನಿದ್ರೆ ಇಲ್ಲ. ಬೆಳಗ್ಗೆ ಬೇಗ ಎದ್ದು ತಯಾರಾದೆ. ಬಸ್ಸಿನ ತುಂಬಾ ಅದೇ ಯೋಚನೆ. ಊರಿನಲ್ಲಿ ಇಳಿದವಳೇ ದಾಪುಗಾಲು ಹಾಕಿ ನಡೆದೆ. ಯಾವಾಗಲೂ ನನಗಿಂತ ಎರಡು ಹೆಜ್ಜೆ ಮುಂದಿರುತ್ತಿದ್ದ ಅವರು, ಈಗ ನನಗಿಂತ ಎರಡು ಮೂರು ಹೆಜ್ಜೆ ಹಿಂದೆ ಉಳಿದಿದ್ರು. ಮನದಾಳದಲ್ಲಿ ಭೀತಿ, ದುಃಖ, ಕಳವಳ, ಹೊತ್ತು ನಡೆದ ನನಗೆ, ಲಲಿತತ್ತೆ ಹಸುಗಳ ಬೆನ್ನು ತಡವುತ್ತಿದ್ದುದು ಕಂಡು ಕೊಂಚ ನೆಮ್ಮದಿಯೇ ಆಯ್ತು. ಅದರ ಹಿಂದೆ ನಿರಾಸೆ ಕೂಡ. ನನ್ನ ನೋಡಿದ ಲಲಿತತ್ತೆ ''ಬಂದ್ಯಾ, ಬಾ, ಯಜಮಾನ್ರು?'' ಅಂದು ಒಳಗೆ ಕರೆದರು. ಚಾಪೆಯ ಮೇಲೆ ಉಸ್ಸೆಂದು ಕುಳಿತು, ಅವರು ಕೊಟ್ಟ ಮಜ್ಜಿಗೆ, ಬೆಲ್ಲ ತಗೆದುಕೊಂಡು ಕೇಳ್ದೆ-- ''ಅಲ್ಲತ್ತೆ ಏನು ಅಂತ ಬರೀಬಾರ್ದ? ನನಗೆ ಗಾಬ್ರಿ ಆಯ್ತು, ಗೊತ್ತಾ? ಕೈಕಾಲೇ ಓಡಲಿಲ್ಲ. ಸದ್ಯ ಆರಾಮಾಗಿದ್ದೀಯಲ್ಲ!'' ಅಂದೆ. ನನ್ನ ಹಿಂದೆಯೇ ನಡೆದು ಬಂದು ಕುರ್ಚಿಯಲ್ಲಿ ಕುಳಿತಿದ್ದ ಇವರಿಗೆ ಮಜ್ಜಿಗೆ ನೀಡುತ್ತಾ ಅತ್ತೆ ಕೇಳಿದಳು, ''ಅಂಥದೇನೇ ಬರ್ದಿದ್ದೆ. ಗಾಬ್ರಿ ಯಾಕಾಗ್ಬೇಕು. ನೀನು ಯಾವಾಗಲೂ ಹೀಗೆ. ಅತೀ. ಅಲ್ವ?'' ಎಂದು ನನ್ನೆಜಮಾನ್ರನ್ನ ಕೇಳಿದ್ರು.

''ನೀವು ಹೇಳಿದ್ದು ನೂರಕ್ಕೆ ನೂರು ಸತ್ಯವಾದ ಮಾತು,'' ಅಂದರು ಇವರು.

ನನಗೀಗಾಗಲೇ ನಾಚಿಕೆ ಆಗತೊಡಗಿತ್ತು ಎಂಥ ಯೋಚನೆಬಂದಿತ್ತಲ್ಲ ನನಗೆ ಅಂತ. ಆದರೂ ಕಲ್ಪನೆಯ ಸಂಭ್ರಮ ಅನುಭವಿಸಿದ್ದ ಮನಸ್ಸಿಗೆ ನಿರಾಸೆ ತಡೆದುಕೊಳ್ಳಲು ಆಗದೇ ಮುಖ ಬಾಡಿತ್ತು. ನಾವು ಮಜ್ಜಿಗೆ ಕುಡಿಯುತ್ತಿದ್ದಂತೆಯೇ ೧೦-೧೨ ವರ್ಷದ ಹುಡುಗಿಯೊಬ್ಬಳು ಓಡಿ ಬಂದು ಅಜ್ಜಿಯ ಕುತ್ತಿಗೆಗೆ ಕೈ ಬಳಸಿ 'ಅಮ್ಮಾ' ಎಂದು ನಿಂತಿತು. ಅತ್ತೆ ಹೇಳಿದರು. ''ನಿನ್ನ ಮದ್ವೆ ಆದ್ಮೇಲೆ ನನಗೆ ತುಂಬಾ ಬೇಜಾರಾಗಿ ಬಿಡ್ತು. ಒಬ್ಬಳೇ ಇರಲು ಆಗಲೇ ಇಲ್ಲ. ಅದಕ್ಕೆ ಈ ಹುಡುಗೀನ ಅನಾಥಾಶ್ರಮದಿಂದ ಕರಕೊಂಡು ಬಂದೆ. ಈಗ ಅನ್ನಿಸ್ತಿದೇ, ನನ್ನ ಸ್ವಾರ್ಥಕ್ಕೋಸ್ಕರ ಇವಳ ಓದು ಬರಹ ಎಲ್ಲ ನಿಂತು ಬಿಡೋದು ಒಳ್ಳೇದಾ ಅಂತ. ಆದ್ರೆ ಇವಳನ್ನು ಓದಿಸೋಕೆ ಪಟ್ಟಣಕ್ಕೆ ಕಳಿಸ್ಬೇಕು. ಅಲ್ಲಿ ಎಲ್ಲಿ ಬಿಡೋದು. ಅದಕ್ಕೇ ನಿನಗೆ ಬರೆದೆ,'' ಎಂದು ನಿಲ್ಲಿಸಿದರು.

"ಅಲ್ಲ ಅತ್ತೆ. ಹಾಗೆ ಅವಳ್ನ ಕಳಿಸೀದ್ರೆ ನಿಮಗೆ ಪುನಃ ಬೇಜಾರಾಗಲ್ವ ?" ಅಂದೆ.

'ಇಲ್ಲ ಕಣೆ ! ಹೀಗೆ ಮೋಹದಿಂದ ಬಿಡುಗಡೆ ಆಗಬೇಕು ನಾನು. ಇಷ್ಟು ವಯಸ್ಸಿನ ನಂತರವೂ ನಾನು ವ್ಯಾಮೋಹದಿಂದಿದ್ರೆ ಏನರ್ಥ ? ಈಗ ನಾನು ಬೇರೇ ರೀತಿ ಯೋಚಿಸಲು ಕಲಿತಿದ್ದೀನಿ," ಅಂದ್ರು.

ಲಲಿತತ್ತೆಯ ಮಾತು ನನ್ನನ್ನು ಇರಿಯಿತು. ನಮ್ಮೆಜಮಾನ್ರು- "ಸರಿ ಅತ್ತೆ. ಅವಳು ನಮ್ಮ ಜತೇಲಿದ್ದು ಓದ್ತಾಳೆ. ನೀವು ಚಿಂತಿಸ್ಬೇಡಿ" ಅಂದರು.

"ಅಲ್ಲ, ನಿಮಗೇಕೆ ತೊಂದ್ರೇ..." ಅನ್ನುತ್ತಿದ್ದಂತೇ, ಇವರು-

"ಛೆ ! ನನ್ತಂಗೀರೆಲ್ಲ ನನ್ನ ಹತ್ರ ಬೆಳಲಿಲ್ವ ? ಇವಳೂ ಹಂಗೇ ಇರ್‍ತಾಳೆ. ಮತ್ತೆ ನನ್ನವಳಿಗೆ ಕೊಂಚ ಕೆಲಸವಾದ್ರು ಸಿಗುತ್ತೆ. ಇವಳಿಗೆ ಪಾಠ ಹೇಳಿಕೊಡ್ತಾಳೆ. ಅಲ್ವ !" ಅಂದರು ನನ್ನೆಡೆಗೆ ನೋಡಿ.

ನಾನು ಮೌನವಾಗಿಯೇ 'ಹೂಂ' ಎಂದೆ. ನನ್ನ ಮನಸ್ಸು ಎತ್ತೆತ್ತಲೋ ಹೋಗಿತ್ತು. "ಬಾ ಮರಿ ನಿನ್ನೆಸ್ರೇನು ?" ಎನ್ನುತ್ತಾ ಇವರು ಆಕೆಯನ್ನು ಬಳಿಯಲ್ಲಿ ಕರೆದು ಕುಳ್ಳಿರಿಸಿಕೊಂಡರು.

ಮರುದಿನವೇ ಹೊರಟು ಊರಿಗೆ ಬಂದೆವು. ಸಾಮಾನೆಲ್ಲ ಜೋಡಿಸುತ್ತಿದ್ದೆ. ಇವರು ಹಾಲು ತರಲು ಹೋಗಿದ್ದರು. ಆ ಹುಡುಗಿಗೆ ಬೀರುವಿನಲ್ಲಿ ಒಂದು ಭಾಗ ತೋರಿಸಿ "ಇಲ್ಲಿ ನಿನ್ನ ವಸ್ತುಗಳನ್ನಿಟ್ಟುಕೋ" ಅನ್ನುತ್ತಿದ್ದಂತೆಯೇ ಅಂಬುಜಮ್ಮ ಬಂದರು. "ಏನ್ರಿ, ಹೋದ ಕೆಲಸ ಆಯ್ತಾ ?" ಅಂದರು.

"ಹೂಂ, ತುಂಬಾ ಚೆನ್ನಾಗೇ ಆಯ್ತು," ಅಂದೆ

"ಏನೇನ್ ಸಿಕ್ತು !" ಅಂದ್ರು ಉತ್ಸಾಹದಿಂದ.

"ನನಗೆ ಸಿಕ್ಕಿದಷ್ಟು ಇನ್ಯಾರಿಗೂ ಸಿಗಲಿಕ್ಕಿಲ್ಲ" ಅಂದೆ.

"ಏನು ಸೈಟಾ ? ಎಷ್ಟು ಅಳತೇದು ? ಜಮೀನಾ ! ಎಷ್ಟೆಕರೆ ? ಅಥವಾ ತೋಟವೇ ಸಿಕ್ತಾ ? ತೋಟದಲ್ಲಿ ಮನೆ ಬಾವಿ, ಎಲ್ಲ ಇದ್ಯಾ ?" ಅಂತ ಒಂದೇ ಸಮನೆ ಕೇಳಿದ್ರು.

"ಶ್, ಹಾಗೆಲ್ಲ ಭೂಮಾತೇನ ಕರೀಬಾರ್‍ದು ಭೂಮಾತೆ ಅಂತ್ಲೆ ಹೇಳಬೇಕು. ಇಲ್ಲದಿದ್ರೇ ಆಕೆ ಕೋಪಿಸ್ಕೊತಾಳೆ" ಅಂದೆ.

"ಅದೆಲ್ಲ ಇರ್‍ಲೀರಿ, ಏನ್ಸಿಗ್ತು ಹೇಳಿ," ಅಂದ್ರು.

"ಭೂಮಾತೇರೀ, ನಿಜಕ್ಕೂ ಸಾಕ್ಷಾತ್ ಭೂದೇವಿ," ಅಂದೆ.

"ಏನ್ರೀ ಹಾಗಂದ್ರೇ, ನಿಮಗೆ ಜಂಬ ಬಂದಿರೋಹಾಗಿದೆ. ಸರಿಯಾಗಿ ಹೇಳೋ ಹಾಗಿದ್ರೆ ಹೇಳಿ. ಇಲ್ಲದಿದ್ರೆ ನಾನು ಹೋಗ್ತೀನಿ" ಅಂದ್ರು.

ನಾನು ಒಳಗೆ ಹೋಗಿ, ಆ ಹುಡುಗೀನ ಕರಕೊಂಡು ಬಂದೆ.

"ನೋಡಿ ಸಾಕ್ಷಾತ್ ಭೂಮಾತೆ. ವಸುಂಧರ ಅಂತ, ನಮ್ಮತ್ತೆ ಮಗಳು. ಓದಲೆಂದು ಬಂದಿದ್ದಾಳೆ. ಇಲ್ಲೇ ಇರ್‍ತಾಳೆ" ಅಂದೆ. "ವಸುಂಧರ !" ಎಂದ ಅವರ ಮುಖ ಇಂಗು ತಿಂದ ಮಂಗನಂತಾಗಿತ್ತು. ನನಗಾಗಿದ್ದೂ ಹಾಗೇ ಅಲ್ಲವೇ !

●

## ಸ್ವಾಮಿನಿಷ್ಠೆ

ಮನುಷ್ಯರು ಆಮರಣ ಉಪವಾಸ ಮಾಡುವುದು ನಮಗೆ ಗೊತ್ತು. ಆದರೆ ೧೯೭೯ರಲ್ಲಿ ನಾಗಾಲ್ಯಾಂಡಿನ ಕಾಟ್‌ಕೋಟಿಯಲ್ಲಿ ಎರಡು ಅಲ್ಸೇಷಿಯನ್ ನಾಯಿಗಳ ಆಮರಣಾಂತ ಉಪವಾಸ ಮಾಡಿ ಒಡೆಯನ ಸಾವಿಗೆ ಅಶ್ರುತರ್ಪಣಾಗೈದವು. ಅವು ಒಂದು ಹನಿ ನೀರನ್ನೂ ಕುಡಿಯಲಿಲ್ಲ, ಆಹಾರವನ್ನೂ ಮೂಸಲಿಲ್ಲ. ಆಹಾರ ತಿನ್ನುವಂತೆ ಮಾಡಿದ ಪ್ರಯತ್ನಗಳು ವ್ಯರ್ಥವಾದವು. ನಂಬಿಗಸ್ಥ ನಾಯಿಗಳು ಒಡೆಯನೊಂದಿಗೆ ಸಾವಿನಲ್ಲೂ ಸಂಗಾತಿಗಳಾಗಿ ಗೋರಿ ಸೇರಿದವು. ಹೇಗಿದೆ ನಿಷ್ಠೆ ?

● ಪ್ರಕಾಶ ಎಸ್. ಮನ್ನಂಗಿ

# ಅಚ್ಚಳಿಯದ ಪುಟಗಳು

## ವಿಶ್ವವಿಜೇತ ವಿವೇಕಾನಂದ

ಭಗವಂತನ ಕೃಪೆ ಮತ್ತು ತಾಳ್ಮೆ ಇದ್ದವರು ಎಂಥ ಪರಿಸ್ಥಿತಿಯನ್ನೂ ನಿಭಾಯಿಸಬಲ್ಲರೆಂಬುದು ವಿವೇಕಾನಂದರ ಖಚಿತ ನಿಲುವಾಗಿತ್ತು. (ಲೇ: ಸ್ವಾಮಿ ಪುರುಷೋತ್ತಮಾನಂದ. ಪ್ರಕಾಶಕರು: ಶ್ರೀ ರಾಮಕೃಷ್ಣ ಆಶ್ರಮ, ಬೆಂಗಳೂರು-೧೯. ಬೆಲೆ: ರೂ. ೫೫. ಪ್ರಕಟಿತ ವರ್ಷ: ೧೯೮೬)

“ಅಸೂಯೆ, ಒಗ್ಗಟ್ಟಿನಿಂದ ಕೆಲಸ ಮಾಡುವ ಪ್ರವೃತ್ತಿಯಿಲ್ಲದಿರುವುದು ಇದೇ ಗುಲಾಮ ರಾಷ್ಟ್ರದಲ್ಲಿ ಎದ್ದು ಕಾಣುವ ಸ್ವಭಾವ. ಆದರೆ ನಾವದನ್ನು ಕೊಡವಿ ಹಾಕುವ ಪ್ರಯತ್ನ ಮಾಡಲೇಬೇಕು. ಎಷ್ಟೇ ಕಷ್ಟವನ್ನಾದರೂ ಎದುರಿಸಿ, ಯಾವುದೇ ಬೆಲೆಯನ್ನಾದರೂ ತೆತ್ತು ಆ ಅಸೂಯೆ ನಮ್ಮೊಳಗೆ ಪ್ರವೇಶಿಸದಂತೆ ನೋಡಿಕೊಳ್ಳಬೇಕು. ನಾವು ಹತ್ತೇ ಜನರಿದ್ದೇವೋ ಅಥವಾ ಇಬ್ಬರೇ ಇದ್ದೇವೋ ಲೆಕ್ಕಿಸಬೇಡಿ. ಆದರೆ ಇರುವಷ್ಟು ಜನ ಮಾತ್ರ ನಿಷ್ಕಳಂಕ ವ್ಯಕ್ತಿಗಳಾಗಿರಬೇಕು.

“ನಿಮಗೆ ನಿಮ್ಮ-ನಿಮ್ಮಲ್ಲಿ ಪರಸ್ಪರ ಅತಿಶಯವಾದ ಪ್ರೀತಿಯಿರಲಿ. ಜನರ ಟೀಕೆಗಳ ಬಗ್ಗೆ ನಿರ್ಲಿಪ್ತ ಧೋರಣೆಯಿರಲಿ. ಅದೊಂದಿದ್ದರೆ ಸಾಕು. ನಾನು ನಿಮಗೆ ಭರವಸೆ ಕೊಡುತ್ತೇನೆ. ಭಗವಂತನ ಕೃಪೆಯಿಂದ- ನಿಮ್ಮ ನಿಮ್ಮಲ್ಲಿ ಮನಸ್ತಾಪವಿಲ್ಲದಿರುವವರೆಗೆ ನೀರಿನಲ್ಲಾಗಲೀ ಬೆಂಕಿಯಲ್ಲಾಗಲೀ ಪರ್ವತ ಶಿಖರದ ಮೇಲಾಗಲಿ ಶತ್ರುಗಳ ಮಧ್ಯ ನಿಮಗೆ ಯಾವುದೇ ಅಪಾಯವಿಲ್ಲ. ಅಲ್ಲದೆ ಶ್ರೇಷ್ಠವಾದ ಪ್ರತಿಯೊಂದು ಕಾರ್ಯವೂ ಅಡಚಣೆಗಳಿಂದಲೇ ತುಂಬಿರುತ್ತವೆ. ನೀವೆಲ್ಲ ಕಟಿಬದ್ಧರಾಗಿ ನಿಂತು ನನ್ನನ್ನು ಹಿಂಬಾಲಿಸಿ ಬರುತ್ತಿರುವವರೆಗೆ, ಇಡೀ ಜಗತ್ತೇ ನಿಮಗೆದುರಾದರೂ ನಿಮಗೆ ಭಯವಿಲ್ಲ.”

ಸಂಗ್ರಹ: **ಪಿ. ವಸಂತಿ ಎಂ. ಭಟ್**

## ಸಂಜೆಗಣ್ಣಿನ ಹಿನ್ನೋಟ

ದೇವರು ಕರುಣಾಮಯನೆ ? ಆತ ಪದೇ ಪದೇ ಅವತಾರವೆತ್ತುವ ಅವಶ್ಯಕತೆ ಇದೆಯೆ ? ಎಂದು ಪ್ರಶ್ನಿಸುವ ಎ.ಎನ್. ಮೂರ್ತಿರಾವ್ ಅವರು ತಮಗೆದುರಾದ ಈ ಸಂದೇಹಗಳಿಗೆ ಕಾರಣವನ್ನು ವಿವರಿಸಿದ್ದಾರೆ. ಅವರ ವಾದಸರಣಿ ಹೀಗಿದೆ: (ಪ್ರಕಾಶಕರು: ಡಿ.ವಿ.ಕೆ. ಮೂರ್ತಿ, ಮೈಸೂರು-೪. ಬೆಲೆ: ರೂ. ೧೦೦. ಎರಡನೆಯ ಮುದ್ರಣ: ೧೯೯೩)

ದೇವರು ಕರುಣಾಮಯಿ ಎಂದು ಎಲ್ಲರೂ ಹೇಳುತ್ತಾರೆ. ಅದು ನಿಜವಾದರೆ ಅವನು ನನ್ನ ತಂದೆಗೆ ನಡುವಯಸ್ಸಿನಲ್ಲಿ ಹನ್ನೆರಡು ವರ್ಷ ನರಳಿ ಸಾಯುವ ಕಷ್ಟವನ್ನೇಕೆ ಕೊಟ್ಟ? ನನ್ನ ಅಜ್ಜಿಗೆ ಮಗ ಹಾಗೆ ಸಾಯುವುದನ್ನು ನೋಡುವ ಸಂಕಟವನ್ನೇಕೆ ಕೊಟ್ಟ? ಹಸುಗೂಸು ಮೈಥಿಲಿಗೆ ಮದುವೆಯಾಗಿ ಆರು ತಿಂಗಳೊಳಗೆ ವಿಧವೆಯಾಗುವ ಸಂಕಟವನ್ನೇಕೆ ಕೊಟ್ಟ? ಮುದ್ದೆಭಟ್ಟರ ಸಂಸಾರ ಒಬ್ಬರೂ ಉಳಿಯದಂತೆ ಎರಡು ದಿನಗಳಲ್ಲಿ ತೊಡೆದು ಹೋಯಿತಲ್ಲ, ಅದನ್ನೇಕೆ ತಪ್ಪಿಸಲಿಲ್ಲ?

ಪ್ರಕೃತಿಯಲ್ಲಿ ಕಾಣುವ ವ್ಯವಸ್ಥೆಯನ್ನು ನೋಡಿದರೆ ಅದನ್ನು ಸೃಷ್ಟಿಸಿದವನೊಬ್ಬ- ದೇವರು- ಇದ್ದೇ ಇರಬೇಕು ಎಂದು ವಾದಿಸುವವರುಂಟು. ಪ್ರಕೃತಿಯಲ್ಲಿ ವ್ಯವಸ್ಥೆಯೇನೋ ಇದೆ. ಅದರ ಜೊತೆಗೆ ನಿರ್ದಯತೆ ಕ್ರೌರ್ಯಗಳೂ ಇವೆ. ದೇವರು ಅವನ್ನೇಕೆ ಇರಗೊಟ್ಟ?

“ಸಾಧುಗಳನ್ನು ರಕ್ಷಿಸುವುದಕ್ಕೆ, ದುಷ್ಟರನ್ನು ಶಿಕ್ಷಿಸುವುದಕ್ಕೆ ಧರ್ಮವನ್ನು ಸ್ಥಾಪಿಸುವುದಕ್ಕೆ ಯುಗ ಯುಗದಲ್ಲೂ ಅವತಾರ ಮಾಡುತ್ತೇನೆ.” ಶ್ರೀ ಕೃಷ್ಣ ಈ ಮಾತನ್ನು ಹೇಳಿದ ಮೇಲೆ ಸಾವಿರಾರು ವರ್ಷಗಳು ಆಗಿಹೋಗಿವೆ. ಈಗಲೂ ಸಾಧುಗಳು (ಸಜ್ಜನರು ಎಂಬ ಅರ್ಥದಲ್ಲಿ) ಕಷ್ಟಪಡುತ್ತಿದ್ದಾರೆ. ದುಷ್ಟರು ಇದ್ದೇ ಇದ್ದಾರೆ; ಧರ್ಮಸಂಸ್ಥಾಪನೆಯೇನೂ ಆದಂತಿಲ್ಲ. ಸರ್ವಶಕ್ತನಾದ

ದೇವರು ಒಂದೇ ಒಂದು ಪೆಟ್ಟಿನಿಂದ ದುಷ್ಟರ ಕಥೆಯನ್ನು ಮುಗಿಸಬಹುದಾಗಿತ್ತಲ್ಲ! ಹಾಗೆ ಮಾಡಿದ್ದರೆ ಮತ್ತೆ ಮತ್ತೆ ಯುಗೇ ಯುಗೇ ಅವತಾರ ಮಾಡುವ ತೊಂದರೆ ತಪ್ಪುತ್ತಿತ್ತು.

ಕೇಡಿನ ಸಮಸ್ಯೆಗಿಂತ ಹೆಚ್ಚಾಗಿ ನಮ್ಮನ್ನು ಕಾಡುವುದು ನೋವಿನ- ಸಂಕಟದ- ಸಮಸ್ಯೆ. ಸಂಕಟವೆಲ್ಲ ಮಾನವನ ಕರ್ಮದ ಫಲ ಎನ್ನಲಾಗುವುದಿಲ್ಲ. ಭೂಕಂಪನದಿಂದ ಸಾವಿರಾರು ಜನ ಸಾಯುತ್ತಾರೆ. ಅದು ಮಾನವನ ಕೆಲಸವಲ್ಲವಷ್ಟೇ! ಸಂಕಟವಿದ್ದರೆ ದೇವರಿಲ್ಲ, ದೇವರಿದ್ದರೆ ಸಂಕಟ ಇರಬಾರದು.

ಸಂಕಟ ಕರ್ಮದ ಫಲ. ಅನುಭವಿಸಲೇಬೇಕಾದದ್ದು ಎಂಬ ವಾದ ಸಲ್ಲ. ಮಗ ತಪ್ಪು ಮಾಡಿದರೆ ತಂದೆ ಅವನಿಗೆ ಬುದ್ಧಿ ಹೇಳುತ್ತಾನೆ. ಕ್ಷಮಿಸುತ್ತಾನೆಯೇ ಹೊರತು ಅನುಭವಿಸು ಎನ್ನುವುದಿಲ್ಲ. ಮಾನವರಿಗಿರುವಷ್ಟು ಕರುಣೆಯೂ ಕ್ಷಮಾಶೀಲತೆಯೂ ಇರಬೇಡವೇ ದೇವರಿಗೆ?

ಸಂಗ್ರಹ: **ಕ.ಬೋ. ಚಿಕ್ಕೇಗೌಡ**

## ಹುಟ್ಟು ಸಾವುಗಳ ಮಧ್ಯೆ

**ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು ಬರೆದ ಹತ್ತು ವೈಚಾರಿಕ ಪ್ರಬಂಧಗಳ ಸಂಕಲನವಿದು. ಲೇಖಕರು ಮಠಾಧೀಶರಾದರೂ ಇಲ್ಲಿ ಪಾರಮಾರ್ಥಿಕ ಚಿಂತನೆ ಇಲ್ಲ. ಅಂಧಾನುಕರಣೆ ಎಂದರೆ ಅವರಿಗೆ ಎಲ್ಲಿಲ್ಲದ ಅಸಮಾಧಾನ. (ಪ್ರಕಾಶಕರು: ತರಳಬಾಳು ಪ್ರಕಾಶನ, ಸಿರಿಗೆರೆ-೫೭೭ ೫೪೧. ಬೆಲೆ: ರೂ. ೧೮.)**

ಮಕ್ಕಳೇ ದೇಶದ ಸಂಪತ್ತು. ಹಾಗೆಂದಾಕ್ಷಣ ಲೆಕ್ಕವಿಲ್ಲದಷ್ಟು ಮಕ್ಕಳನ್ನು ಹೆತ್ತು ಸಮಾಜಕ್ಕೆ ಧಾರೆಯೆರೆದಾಕ್ಷಣ ಅಂಥ ಮಕ್ಕಳ ಸಮೂಹವನ್ನೆಲ್ಲ ದೇಶದ ಸಂಪತ್ತೆಂದು ಪರಿಗಣಿಸಲು ಬರುವುದಿಲ್ಲ.

"ಹುಟ್ಟಿಸಿದ ದೇವರು ಹುಲ್ಲು ಮೇಯಿಸುವುದಿಲ್ಲ," ಎಂದು ಗಾದೆ ಹೇಳುತ್ತಾ ಅಡ್ಡಾಡುವ ಜನರೇ ಜಾಸ್ತಿ. ಬಹುಶಃ ಇಂಥವರ ಮಕ್ಕಳೇ ದೇಶದ್ರೋಹಿಗಳಾಗಿ ಸ್ವೇಚ್ಛಾಚಾರಿಗಳಾಗಿ, ಸಮಾಜ ವಿದ್ರೋಹಕ ಕಾರ್ಯಗಳಲ್ಲಿ ಪಾಲ್ಗೊಂಡಿರುವುದು.

ಹಾಲನ್ನು ಬಳಸುವವರು ಹಸು ಏನನ್ನು ತಿಂದಿದೆ ಎಂದು ಪರೀಕ್ಷಿಸುವುದಿಲ್ಲ. ಅಂತೆಯೇ ಬಡಗಿ ತಯಾರಿಸುವ ವಸ್ತುಗಳ ಸೌಂದರ್ಯ ಮತ್ತು ಗುಣಮಟ್ಟ ಗಮನಿಸುತ್ತೇವೆಯೇ ವಿನಾ ಬಡಗಿಯ ಗುಣಾವಗುಣಗಳನ್ನಲ್ಲ.

ಪ್ರವಾಹದಲ್ಲಿ ತೇಲಿ ಬಂದ ಹೆಣ ತಮ್ಮ ಊರಿನ ಸೇತುವೆಗೆ ಅಡ್ಡವಾಗಿರುವುದನ್ನು ಕಂಡ ಓಲೆಕಾರ ಊರಗೌಡನಿಗೆ ವರದಿ ಮಾಡುತ್ತಾನೆ. ಆ ಗೌಡ, "ಇದರ ಪಂಚನಾಮೆ ಮಾಡಿಸುವ ಜವಾಬ್ದಾರಿ ನನಗೇಕೆ? ಕೋಲಿನಿಂದ ನೀರಿನಲ್ಲಿ ತಳ್ಳಿಬಿಡು ಎನ್ನುತ್ತಾನೆ." ವಿದ್ಯಾರ್ಥಿಗಳನ್ನು ಮುಂದಿನ ತರಗತಿಗೆ ತಳ್ಳುವಲ್ಲಿ ಬಹುಪಾಲು ಅಧ್ಯಾಪಕರು ಈ ಗುಣಗಳನ್ನು ರೂಢಿಸಿಕೊಂಡು ಬರುತ್ತಿದ್ದಾರೆ.

ಅಂತರ್‌ಜಾತೀಯ, ಅಂತರ್‌ಮತೀಯ, ಅಂತರ್‌ದೇಶೀಯ ವಿವಾಹಗಳು ಹೆಚ್ಚುವಂತೆ ಮಾಡಿ, ಕೊಡುಕೊಳ್ಳುವಿಕೆ, ಉಡುಗೆ-ತೊಡುಗೆ ಮುಂತಾದ ಸನ್ನಿವೇಶಗಳಲ್ಲಿ ಮುಕ್ತ ಮನಸ್ಸಿನಿಂದ ವರ್ತಿಸುವುದು ಯೋಗ್ಯ ಪರಿಸರಕ್ಕೆ ಪೂರಕವಾಗುವುದರಲ್ಲಿ ಸಂಶಯವಿಲ್ಲ.

ಇಂದು ಹೆಣ್ಣಿನವರೇ ಗಂಡಿಗಾಗಿ ಹತ್ತಾರು ಕಡೆ ಅಲೆದು, ವರನ ಕಡೆಯವರು ಹಾಕುವ ಶರತ್ತುಗಳಿಗೆಲ್ಲ ಕೌಲೆತ್ತಿನಂತೆ ತಲೆಹಾಕಿ, ದಾಸಾನುದಾಸರಾಗಿ ತಮ್ಮ ಮಗಳನ್ನು ಧಾರೆಯೆರೆದು ಕೊಡುತ್ತಿದ್ದಾರೆ. ಅಳಿಯ ಲಕ್ಷಾಧಿಪತಿಯಾದರೆ ಮಾವ ಮನೆ ಬರಿದು ಮಾಡಿಕೊಂಡು ಭಿಕ್ಷಾಧಿಪತಿಯಾಗುತ್ತಿದ್ದಾನೆ.

ಗೊಬ್ಬರ, ಬೀಜ, ಬಾವಿ, ಪಂಪಸೆಟ್‌ಗಳಿಗೆಂದು ಸಾಲ ಮಾಡಿ ಆಯಾ ಉದ್ದೇಶಗಳಿಗೆ ಬಳಸದೆ ಮದುವೆಗಾಗಿ ದುಂದು ವೆಚ್ಚ ಮಾಡುತ್ತಾರೆ. ಇದರಿಂದ ನಾಳೆ ಅವರ ಹೊಲಗಳಲ್ಲಿ ಬೆಳೆಯುವುದು ಸಾಲವೇ ಹೊರತು ಬೆಳೆಯಲ್ಲ.

ಸಂಗ್ರಹ: **ಎಂ.ಆರ್. ಧನಂಜಯ**



# ಬೋರ್ಡೋ ದ್ರಾವಣದ ಅಜೇಯ ಶತಕ!

● ಸೋಮಶೇಖರ ರುಳಿ

೧೮೮೨ರ ಅಕ್ಟೋಬರ್ ತಿಂಗಳಿನ ಒಂದು ಸಂಜೆ. ಫ್ರಾನ್ಸಿನ ಮೆಡೂಕ್‌ನಲ್ಲಿನ ದ್ರಾಕ್ಷಿ ತೋಟಗಳನ್ನು ಪರೀಕ್ಷಿಸುತ್ತ ಸಾಗಿದ್ದ ಪ್ರೊ. ಮಿಲ್ಲಾರ್ಡೆಟ್ ರಸ್ತೆ ಬದಿಯ ಎಲ್ಲ ದ್ರಾಕ್ಷಿ ಬಳ್ಳಿಗಳ ಮೇಲೆ ನೀಲಿ ಮಿಶ್ರಿತ ಬಿಳಿ ಪುಡಿ ಇರುವುದನ್ನು ಕಂಡು ಅಚ್ಚರಿಯಿಂದ ಒಂದು ಕ್ಷಣ ನಿಂತರು.

ಆ ಹಿಂದಿನ ನಾಲ್ಕು ವರ್ಷಗಳಲ್ಲಿ ಕೇದಿಗೆ ರೋಗ (Downy Mildew) ದ್ರಾಕ್ಷಿಯನ್ನು ಹಾಳು ಮಾಡಿದ್ದರಿಂದ ರೈತರೆಲ್ಲ ಕಂಗಾಲಾಗಿದ್ದರು. ವಿಜ್ಞಾನಿಗಳೆಲ್ಲ ಈ ಹೊಸದೊಂದು ರೋಗಕ್ಕೆ ಮದ್ದು ಕಂಡು ಹಿಡಿಯಲು ಅಹೋರಾತ್ರಿ ಶ್ರಮಿಸುತ್ತಿದ್ದರು. ಅಂಥ ವಿಜ್ಞಾನಿಗಳ ಪೈಕಿ ಬೋರ್ಡೋ ವಿಶ್ವವಿದ್ಯಾಲಯದಲ್ಲಿ ಸಸ್ಯಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಪ್ರೊ. ಮಿಲ್ಲಾರ್ಡೆಟ್ ಕೂಡ ಒಬ್ಬರಾಗಿದ್ದರು. ಈ ನೀಲಿ ಪುಡಿ ಇರುವಲ್ಲೆಲ್ಲ ಕೇದಿಗೆ ರೋಗದ ಶಿಲೀಂಧ್ರದ ಸುಳಿವೇ ಇರಲಿಲ್ಲ. ಎಲೆಗಳೆಲ್ಲ ಹಚ್ಚ ಹಸುರಾಗಿ ಆರೋಗ್ಯವಂತವಾಗಿದ್ದವು. ಅವರಿಗೆ ಏನೋ ಹೊಳೆದಂತಾಗಿ ಆ ತೋಟವನ್ನು ನೋಡಿಕೊಳ್ಳುತ್ತಿದ್ದ ಅರ್ನೆಸ್ಟ್ ಡೇವಿಡ್ ಎಂಬುವವನನ್ನು ಕರೆದು ಆ ಕುರಿತು ಹೇಳಿದಾಗ ಅವನಿಗೂ ಆಶ್ಚರ್ಯವೇ ಆಗಿತ್ತು. ದಾರಿಹೋಕರು ಒಂದು ವಿಷವೆಂದು ತಿಳಿದು, ದ್ರಾಕ್ಷಿಯನ್ನು ಕೀಳಬಾರದೆಂದು ಆ ಪ್ರದೇಶದ ರೈತರು ಬಳ್ಳಿಗಳ ಮೇಲೆಲ್ಲ ಕಣ್ಣಿಗೆ ರಾಚುವಂತೆ ತಾಮ್ರದ ಸಲ್ಫೇಟ್ ಮತ್ತು ಸುಣ್ಣದ ಮಿಶ್ರಣವನ್ನು ಸಿಂಪಡಿಸುತ್ತಿದ್ದರು. ಹಾಗಾಗಿ ಆ ಭಾಗದಲ್ಲೆಲ್ಲ ಇದೊಂದು ಸಾಮಾನ್ಯ ರೂಢಿಯೇ ಆಗಿ ಹೋಗಿತ್ತು. ಈ ಮಿಶ್ರಣದಲ್ಲಿ ಮಿಂದ ಬಳ್ಳಿಗಳು ಉಳಿದ ಬಳ್ಳಿಗಳಿಗಿಂತ ಆರೋಗ್ಯದಿಂದಿದ್ದವು. ಅರಿಯದೇ ಆದ ಈ ಆಕಸ್ಮಿಕದಲ್ಲಿ ತಾಮ್ರದ ಸಲ್ಫೇಟ್‌ನ ಪಾತ್ರ ಏನಾದರೂ ಇದೆಯೇ? ಎಂದು ಡೇವಿಡ್ ಯೋಚಿಸತೊಡಗಿದರು.

ಪ್ರೊ. ಮಿಲ್ಲಾರ್ಡೆಟ್ ಕೂಡ ಸುಮಾರು ನಾಲ್ಕು ವರ್ಷಗಳಿಂದ ಪೆರೊನೊಸ್ಪೋರಾವನ್ನು ನಿಯಂತ್ರಿಸಬಲ್ಲ ರಾಸಾಯನಿಕವನ್ನು ಕಂಡು ಹಿಡಿಯಲು ಅಹೋರಾತ್ರಿ ಶ್ರಮಿಸುತ್ತಿದ್ದರು. ೧೮೭೮ರಲ್ಲಿ ಈ ಶಿಲೀಂಧ್ರ ಫ್ರಾನ್ಸಿಗೆ ಕಾಲಿಟ್ಟಂದಿನಿಂದ ದ್ರಾಕ್ಷಿ ಬೆಳೆಗಾರರ, ಕೃಷಿ ವಿಜ್ಞಾನಿಗಳ ಹಾಗೂ ಸರ್ಕಾರದ ನಿದ್ರೆಯೇ ಹಾರಿ ಹೋಗಿತ್ತು. ದ್ರಾಕ್ಷಿ ಫ್ರಾನ್ಸಿನ ಸುರೆಯ ಉದ್ಯಮ (Wine industry)ದ ಜೀವಾಳ. ದ್ರಾಕ್ಷಿ ಬೆಳೆಯುವುದನ್ನೇ ನಿಲ್ಲಿಸಿದ್ದರೆ ಉದ್ಯಮವೇ ಹಾಳಾಗಿ ದೇಶದ ಆರ್ಥಿಕತೆಗೆ ಭಾರೀ ಪೆಟ್ಟು ಬೀಳುತ್ತಿತ್ತು. ಆದ್ದರಿಂದ ಈ ಹೊಸ ರೋಗಕ್ಕೆ ಹೆದರಿ ದ್ರಾಕ್ಷಿ ಬೆಳೆಯುವುದನ್ನೇ ಬಿಟ್ಟು ಕೊಡಲು ರೈತರು ತಯಾರಿರಲಿಲ್ಲ. ಪೆರೊನೊಸ್ಪೋರಾವನ್ನು ಸಮರ್ಥವಾಗಿ ತಹಬಂದಿಗೆ ತರುವ ರಾಸಾಯನಿಕ ಮಿಶ್ರಣದ ಅವಶ್ಯಕತೆ ತೀವ್ರವಾಗಿತ್ತು.

## ಕಲ್ಲೊಂದು ಕಾಯಾರು

ಪೆರೊನೊಸ್ಪೋರಾದ ಜೀವನ ಚಕ್ರವನ್ನು ಆಳವಾಗಿ ಅಭ್ಯಸಿಸಿದ್ದ ಪ್ರೊ. ಮಿಲ್ಲಾರ್ಡೆಟ್ ಅವರು, ಅದು ರಾಸಾಯನಿಕ ಮಿಶ್ರಣದ ಆಕ್ರಮಣಕ್ಕೆ ಆಹುತಿಯಾಗಬಹುದಾದ ಹಂತವನ್ನು ಕಂಡುಕೊಂಡಿದ್ದರು. ಬೇಸಿಗೆಯ ಶಿಲೀಂಧ್ರದ ಬೀಜಗಳು

ಮೊಳೆತು ಅವುಗಳ ಬಾಹುಗಳು ಎಲೆಗಳನ್ನು ಪ್ರವೇಶಿಸುವುದಕ್ಕೆ ಮೊದಲು ಅವುಗಳನ್ನು ನಿಯಂತ್ರಿಸಬಹುದಾಗಿತ್ತು. ಎಲೆಗಳ ಮೇಲೆ ಸಿಂಪಡಿಸಿದಾಗ ಶಿಲೀಂಧ್ರದ ಬೀಜಗಳನ್ನು ಕೊಲ್ಲಬಲ್ಲ ಒಂದು ಔಷಧಿಯು ಬೇಕಾಗಿತ್ತು. ತಾಮ್ರದ ಸಲ್ಫೇಟ್ (ಮೈಲು ತುತ್ತದ ನೀಲಿ ಹರಳು) ಮತ್ತು ಸುಣ್ಣದ ಮಿಶ್ರಣ ಸಮಸ್ಯೆಗೆ ಪರಿಹಾರ ಒದಗಿಸಬಲ್ಲುದೆ ಎಂಬ ವಿಚಾರ ಅವರಿಗೆ ಬಾರದಿರಲಿಲ್ಲ.

ಮುಂದೆ ಅವರು ತಡಮಾಡಲಿಲ್ಲ. ೧೮೮೩ರ ಬೇಸಿಗೆಯಲ್ಲಿ ನಡೆಸಬಹುದಾದ ಪ್ರಯೋಗಗಳಿಗಾಗಿ ಚಳಿಗಾಲದಲ್ಲಿಯೇ ಯೋಜನೆಗಳನ್ನು ಸಿದ್ಧಪಡಿಸಿಕೊಂಡರು. ಆದರೆ ಅವರೆಂದುಕೊಂಡಂತೆ ಮುಂದಿನ ಎರಡು ವರ್ಷಗಳಲ್ಲಿ ಕೇದಿಗೆ ರೋಗದ ತೀವ್ರತೆ ಅಷ್ಟಾಗಿ ಇರಲಿಲ್ಲ. ಆದರೂ ಮೈಲುತುತ್ತ ಮತ್ತು ಸುಣ್ಣದ ಮಿಶ್ರಣದೊಂದಿಗೆ ಕಾರ್ಬೋನೇಟ್ ಸಲ್ಫೇಟ್, ಸಲ್ಫೈಡ್ ಫಾಸ್ಫೈಡ್, ಕಬ್ಬಿಣದ ಸಲ್ಫೈಡ್‌ಗಳನ್ನೆಲ್ಲ ಪರೀಕ್ಷೆಗೆ ಒಳಪಡಿಸಿದರು. ಪರೀಕ್ಷೆಯಲ್ಲಿ ಉತ್ತೀರ್ಣವಾದದ್ದು ಮೈಲುತುತ್ತ ಮತ್ತು ಸುಣ್ಣದ ಮಿಶ್ರಣ ಮಾತ್ರ. ಪೆರೊನೊಸ್ಪೋರಾದ ತೀವ್ರತೆ ಈ ಎರಡು ವರ್ಷಗಳಲ್ಲಿ ಕಡಿಮೆಯಾಗಿದ್ದರೂ ಅದನ್ನು ಈ ಮಿಶ್ರಣ ಸಮರ್ಥವಾಗಿ ನಿಯಂತ್ರಿಸಬಲ್ಲುದು ಎಂಬುದರಲ್ಲಿ ಯಾವುದೇ ಸಂಶಯ ಉಳಿಯಲಿಲ್ಲ. ಇದೇ ಸಮಯಕ್ಕೆ ಇನ್ನೂ ಕೆಲವು ಅಚ್ಚರಿಯ ಫಲಿತಾಂಶಗಳು ಹೊರಬಂದವು. ಕೆಲವು ಉತ್ಸಾಹಿಗಳು ಇದನ್ನು ಗೋಧಿ, ಆಲೂಗಡ್ಡೆ, ಟೊಮ್ಯಾಟೋ, ಗುಲಾಬಿ ಮತ್ತು ಹಣ್ಣಿನ ಬೆಳೆಗಳ ಮೇಲೆ ಪ್ರಯೋಗಿಸಿದರು. ಎಲ್ಲರ ಆಶ್ಚರ್ಯಕ್ಕೆ ಇಂಬುಕೊಡುವಂತೆ ಈ ಎಲ್ಲ ಬೆಳೆಗಳ ಶಿಲೀಂಧ್ರ ರೋಗಗಳನ್ನು ಈ ಮಿಶ್ರಣ ನಿಯಂತ್ರಿಸಿತಲ್ಲದೆ ಅದು ಬೆಳೆಗಳಿಗೆ ಸುರಕ್ಷಿತವಾಗಿಯೂ ಇತ್ತು. ಇದರಿಂದಾಗಿ ೧೮೪೫ರ ಆಸುಪಾಸಿನಲ್ಲಿ ಯುರೋಪಿನಲ್ಲಿ ರುದ್ರತಾಂಡವವಾಡಿದ 'ಆಲೂಗಡ್ಡೆಯ ಅಂಗಮಾರಿ'ಗೆ ಕೂಡ ಒಂದು ಸಮರ್ಥ ಪರಿಹಾರ ಸಿಕ್ಕಿತು.

## ಪ್ರಬಲ ಸೂತ್ರ

ಕೇದಿಗೆ ರೋಗಕ್ಕೆ ಪರಿಹಾರ ಹುಡುಕಲು ಹೋಗಿ, ಬಹುತೇಕ ಎಲ್ಲ ಶಿಲೀಂಧ್ರಗಳನ್ನು ಉಡುಗಿಸಬಲ್ಲ ಔಷಧಿಯೊಂದನ್ನು ಪ್ರೊ. ಮಿಲ್ಲಾರ್ಡೆಟ್ ಕಂಡು ಹಿಡಿದ ಸುದ್ದಿ ಯುರೋಪಿನಲ್ಲೆಲ್ಲ ಹರಡಲು ಬಹಳ ಹೊತ್ತು ಹಿಡಿಯಲಿಲ್ಲ. ಪ್ರೊ. ಮಿಲ್ಲಾರ್ಡೆಟ್ ೧೮೮೫ರ ಮೇನಲ್ಲಿ ಗರ್ನೋಡ್‌ನ 'ಸೊಸೈಟಿ ಆಫ್ ಅಗ್ರಿಕಲ್ಚರ್'ಗೆ ತಮ್ಮ ಅಮೂಲ್ಯವಾದ ಸಂಶೋಧನೆಯ ಬಗ್ಗೆ ತಿಳಿಸಿದರು. ತಾವು ಕೆಲಸ ಮಾಡುತ್ತಿದ್ದ ಬೋರ್ಡೋ ವಿಶ್ವವಿದ್ಯಾಲಯದ ನೆನಪಿಗಾಗಿ ತಾವು ತಯಾರಿಸಿದ ದ್ರಾವಣಕ್ಕೆ 'ಬೋರ್ಡೋ ದ್ರಾವಣ' ಎಂದು ಹೆಸರಿಸಿದರು. ಮೊಟ್ಟ ಮೊದಲ ಬಾರಿ ಅವರು ಸಿದ್ಧಪಡಿಸಿದ ಈ ದ್ರಾವಣದ ಸೂತ್ರ ತುಂಬಾ ಸರಳವಾಗಿದೆ. ಮೊದಲಿಗೆ ೮ ಕಿಲೋ ಮೈಲು ತುತ್ತವನ್ನು ೧೦೦ ಲೀಟರ್ ನೀರಿನಲ್ಲಿ ಕರಗಿಸಿ ಇಟ್ಟುಕೊಳ್ಳಲಾಯಿತು. ಬೇರೊಂದು ಪಾತ್ರೆಯಲ್ಲಿ ೧೫ ಕಿಲೋದಷ್ಟು ಸುಣ್ಣವನ್ನು ೩೦ ಲೀಟರ್ ನೀರಿನಲ್ಲಿ ಕರಗಿಸಿ, ಸುಣ್ಣದ ನೀರನ್ನು ಸಿದ್ಧಪಡಿಸಲಾಯಿತು. ನಂತರ ಈ 'ಹಾಲ'ನ್ನು ಮೈಲುತುತ್ತದ ದ್ರಾವಣದಲ್ಲಿ ನಿಧಾನವಾಗಿ ಸುರಿದು ಚೆನ್ನಾಗಿ ಬೆರೆಸಲಾಯಿತು.

ಕೇದಿಗೆ ರೋಗಕ್ಕೆ ಪರಿಹಾರ ಸೂತ್ರವೊಂದು ಸಿಕ್ಕಿದೆ ಎಂದು ತಿಳಿದದ್ದೇ ತಡ ಮೆಡೊಕ್, ಡಾರ್ಯುಕ್, ಬೊಕೆಲ್ಲನ್ ಅಲ್ಲದೆ ಇಟಲಿಯ ಚಾಟೂ ಬ್ಯಾಗ್ಲಿಯೋಲೋನ ದ್ರಾಕ್ಷಿ ಬೆಳೆಯುವ ಪ್ರಮುಖ ರೈತರು, ಬೋರ್ಡೋ ದ್ರಾವಣವನ್ನು ತಾವೇ ಸಿದ್ಧಪಡಿಸತೊಡಗಿದರು. ಇದು ನಿಜಕ್ಕೂ ಒಂದು ಚಮತ್ಕಾರವನ್ನೇ ಮಾಡಿತು. ಈ ನೀಲಿ ದ್ರವ ಶಿಲೀಂಧ್ರವನ್ನು ಹಿಡಿತದಲ್ಲಿಟ್ಟಿತಷ್ಟೇ ಅಲ್ಲ, ಅದರ ಸಿಂಚನದಿಂದಾಗಿ ಬಳ್ಳಿಗಳು ಆರೋಗ್ಯದಿಂದ ನಳ-ನಳಿಸತೊಡಗಿದವು. ಹಣ್ಣುಗಳು ಗಾಢ ಕಪ್ಪು ಬಣ್ಣತಳೆದು ಸಕಾಲದಲ್ಲಿ ಪಕ್ವವಾದವು. ಹಾಗೆಯೇ ಬಿಡಲಾದ ಬಳ್ಳಿಗಳಲ್ಲಿ ರೋಗದಿಂದಾಗಿ ಬಹಳಷ್ಟು ಎಲೆಗಳು ಉದುರಿಹೋದವು. ಉಳಿದುಕೊಂಡ ಎಲೆಗಳು ಮುರುಟಿಕೊಂಡವು. ಹಣ್ಣುಗಳು ಪಕ್ವವಾಗದೇ ದ್ರಾಕ್ಷಾರಸ ತಯಾರಿಸಲಿಕ್ಕೆ ಯೋಗ್ಯವಾಗಿದ್ದವು.

## ಹಕ್ಕಿಗಾಗಿ ಹೋರಾಟ

ಬೋರ್ಡೋ ಮಿಶ್ರಣದ ಅಪಾರ ಯಶಸ್ಸಿನಿಂದಾಗಿ ಅದೇ ಕ್ಷೇತ್ರದಲ್ಲಿ ಸುಮಾರು ವರ್ಷಗಳಿಂದ ದುಡಿಯುತ್ತಿದ್ದವರಲ್ಲಿ ಕೆಲವರು ಬೋರ್ಡೋ ದ್ರಾವಣ ತಮ್ಮ 'ಕಲ್ಪನೆಯ ಕೂಸು' ಎಂದೂ

ಅದನ್ನು ಕಂಡು ಹಿಡಿದ ಯಶಸ್ಸು ತಮಗೇ ಸಿಗಬೇಕೆಂದೂ ವಾದಿಸತೊಡಗಿದರು. ಮೌಂಟ್ ಪೆಲ್ಲಿಯರ್‌ನ ಮಾನ್‌ಸಿಯರ್ ಎಸ್ಪೆಫ್ ಎಂಬಾತ ಮೈಲುತುತ್ತ ಸೇರಿಸಿದ 'ಸಲ್ಫಟೈನ್' ಎಂಬ ಔಷಧಿಯನ್ನು ತಯಾರಿಸಿ ಮಾರುತ್ತಿದ್ದ. ಈಗ ಆತ ೧೮೮೦ರಷ್ಟು ಹಿಂದೆಯೇ ಮೈಲುತುತ್ತಯ ರೋಗನಾಶಕ ಗುಣವನ್ನು ಗುರುತಿಸಿದ್ದುದಾಗಿ ಹೇಳಿಕೊಳ್ಳತೊಡಗಿದ. ೧೮೮೧ರಷ್ಟು ಹಿಂದೆಯೇ ಪೌಲ್ ಓಲಿವರ್ ಎಂಬುವವ ನೀಲಿ ಹರಳನ್ನು ಹಣ್ಣಿನ ಗಿಡಗಳ ಮೇಲೆ ಪ್ರಯೋಗಿಸಿದ್ದ. ಡಿಸೆಂಬರ್ ೧೮೮೪ರಲ್ಲಿ ಬೇರನ್ ಥಾಸ್ ಎಂಬುವವ ಕೂಡ ಇದೇ ಮಿಶ್ರಣದ ಒಳ್ಳೆಯ ಪರಿಣಾಮಗಳನ್ನು ಕುರಿತು ಗರ್ನೋಡ್‌ನ 'ಅಗ್ರಿಕಲ್ಚರಲ್ ಸೊಸೈಟಿ'ಯ ಗಮನ ಸೆಳೆದಿದ್ದ. ಇವರೆಲ್ಲ ಬೋರ್ಡೋ ಸೂತ್ರದ 'ಮೂಲಯೋಚನೆ' ತಮ್ಮದೇ ಎಂದು ಸಮರ್ಥಿಸಿಕೊಳ್ಳತೊಡಗಿದರು.

ಮೇ ೧೮೮೫ರಲ್ಲಿ ತಮ್ಮ ಸಂಶೋಧನೆಯನ್ನು ಪ್ರಕಟಪಡಿಸಿದ ಪ್ರೊ. ಮಿಲ್ಲಾರ್ಡೆಟ್ ಅವರು ತಡ ಮಾಡುವ ಮೂಲಕ ತಪ್ಪು ಮಾಡಿದ್ದರೆಂದೇ ಹೇಳಬೇಕು. ಪರಿಣಾಮವಾಗಿ ಈ ಸಂಶೋಧನೆಯ ಹಕ್ಕನ್ನು ತಮ್ಮದಾಗಿಸಿಕೊಳ್ಳಲು ಅವರು ಬಹಳ ಶ್ರಮಪಡಬೇಕಾಯಿತು. ೧೮೮೦ಕ್ಕೂ ಪೂರ್ವದಲ್ಲಿಯೇ ತಾಮ್ರದ ಶಿಲೀಂಧ್ರನಾಶಕ ಗುಣದ ಬಗ್ಗೆ ಲೇಖನವನ್ನು ಬರೆಯದೇ ಹೋಗಿದ್ದರೆ ಬಹುಶಃ ಈ ಹಕ್ಕಿನ ಸಂತೋಷ ಅವರಿಗೆ ಸಿಗುತ್ತಿರಲಿಲ್ಲವೇನೋ!

## ಪರ್ಯಾಯಗಳು

ಬೋರ್ಡೋ ಮಿಶ್ರಣದ ಸಂಶೋಧನೆಯ ಕೀರ್ತಿ ಪ್ರೊ. ಮಿಲ್ಲಾರ್ಡೆಟ್‌ರ ಪಾಲಾದ ಮೇಲೆ ಅವರಿಗಾಗದ ಬರ್ಗಂಡಿಯ ವಿಜ್ಞಾನಿಗಳ ಬಳಿಯಿದ್ದ ಇನ್ನೊಂದು ಮಾರ್ಗವೆಂದರೆ ಬೋರ್ಡೋ ದ್ರಾವಣಕ್ಕಿಂತ ಉತ್ತಮವಾದ, ಮಿಶ್ರಣವನ್ನು ಕಂಡುಹಿಡಿಯುವುದು. ಈ ನಿಟ್ಟಿನಲ್ಲಿ ಕಾರ್ಯತತ್ಪರನಾದ ಅಡೋನಾಯ್ಡ್ ಎಂಬುವವ ತಾಮ್ರದ ಸಲ್ಫೇಟ್ ಮತ್ತು ಅಮೋನಿಯಗಳುಳ್ಳ ನೀಲಿದ್ರವವನ್ನು ತಯಾರಿಸಿದ. 'ಯೂ ಸೆಲೆಸ್ಟ್' ಎಂದು ಕರೆಯಲ್ಪಟ್ಟ ಈ ಔಷಧಿ ಎಲೆಗಳಿಗೆ ತಕ್ಕ ಮಟ್ಟಿಗೆ ಹಾನಿಕರವಾಗಿತ್ತಲ್ಲದೆ, ಅಮೋನಿಯ, ಸುಣ್ಣಕ್ಕಿಂತ



"ಯಾಕೆ ಒಂಥರಾ ಇದ್ದೀರಿ. ಅಡಿಗೆಯನ್ನೇನಾದರೂ ಕೆಡಿಸಿದ್ದೀರೋ ಹೇಗೆ?"

ತುಟ್ಟಿಯದಾಗಿತ್ತು. ಎಮಿಲ್ ಮ್ಯಾಸ್ಸನ್ ಎಂಬ ಇನ್ನೊಬ್ಬ ತಜ್ಞ ೧೮೮೭ರಲ್ಲಿ ಮೈಲುತುತ್ತಗೆ ವಾಶಿಂಗ್‌ಸೋಡಾ ಬೆರೆಸಿ 'ಬರ್ಗಂಡಿ ಮಿಶ್ರಣ'ವನ್ನು ತಯಾರಿಸಿದ. ಆದರೆ ಸ್ಪ್ರೇಯರ್‌ನ ನಳಿಕೆಯ ರಂಧ್ರಗಳನ್ನು ಮುಚ್ಚಿಬಿಡುವಷ್ಟು ಇದು ಜಿಗುಟಾಗಿತ್ತು. ಇದೇ ದ್ರಾವಣಕ್ಕೆ ಸ್ವಲ್ಪ ಅಮೋನಿಯವನ್ನು ಸೇರಿಸಿ 'ಪರಿವರ್ತಿತ ಯೂ ಸೆಲೆಸ್ಟ್' ಔಷಧಿಯನ್ನು ಕೂಡ ಸಿದ್ಧಪಡಿಸಲಾಯಿತು. ೧೮೮೯ರಲ್ಲಿ ಮೈಕೆಲ್ ಪೆರೆಟ್ ಬೋರ್ಡೋ ದ್ರಾವಣಕ್ಕೆ ಕಾಕಂಬಿಯನ್ನು ಸೇರಿಸಿದ. ಅವನ ಈ ಸಂಶೋಧನೆ ಮುಂದೆ ಬಹಳ ಮಹತ್ವದ್ದೆನಿಸಿದರೂ, ಯಾವುದೇ ಸುಧಾರಣೆ ಇಲ್ಲವೆಂದು ತಿರಸ್ಕೃತವಾಯಿತು.

## ಅಮೇರಿಕದಲ್ಲಿ....

ಅತ್ತ ಅಮೇರಿಕ ಫ್ರಾನ್ಸ್‌ನಲ್ಲಾಗುತ್ತಿದ್ದ ಬೆಳವಣಿಗೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿತ್ತು. ತಾಮ್ರದ ಮಿಶ್ರಣಗಳು ಬೆಳೆಗಳ ರೋಗಗಳನ್ನು ಪರಿಣಾಮಕಾರಿಯಾಗಿ ನಿಯಂತ್ರಿಸುತ್ತಿದ್ದುದು ಸಾಬೀತಾಗುತ್ತಿದ್ದ ಹಾಗೆ ೧೮೮೭ರಲ್ಲಿ ಅಮೇರಿಕದ ಸರಕಾರ ಫ್ರಾನ್ಸಿನಿಂದ ಆ ಮಿಶ್ರಣಗಳನ್ನು ಆಮದು ಮಾಡಿಕೊಳ್ಳಬೇಕೆಂದು ಆದೇಶ ಹೊರಡಿಸಿತು. ಅಮೇರಿಕದಲ್ಲಿ ಆಗ ಶಿಲೀಂಧ್ರ ರೋಗಗಳಿಂದಾಗಿ

ಅಪಾರ ಹಾನಿಯಾಗುತ್ತಿದ್ದುದರಿಂದ, ಕೃಷಿ ಇಲಾಖೆ ವಿಶೇಷ ಅಧ್ಯಯನಕ್ಕೆಂದು ವಾಶಿಂಗ್‌ಟನ್ನಿನಲ್ಲಿ 'ತರ ಕಾರಿ ರೋಗಶಾಸ್ತ್ರ' ಎಂಬ ವಿಭಾಗವನ್ನು ತೆರೆದು ಲ್ಯಾಮ್ಸನ್ ಸ್ಕ್ರಿಬ್ನರ್ ಹಾಗೂ ಗ್ಯಾಲ್ಲೋವೇ ಇವ ರನ್ನು ಅದರ ಮುಖ್ಯಸ್ಥರನ್ನಾಗಿ ನೇಮಿಸಿತು.

ಅಮೇರಿಕದಲ್ಲಿ ದ್ರಾಕ್ಷಿಯನ್ನು ಕೊಳೆರೋಗ (Black rot) ಹಿಂಸಿಸಿ ವಿಜೃಂಭಿಸುತ್ತಿದ್ದ ಕಾಲ ವದು. ದ್ರಾಕ್ಷಿ ಬೆಳೆಗಾರರು ಈ ರೋಗಕ್ಕೆ ಮದ್ದು ಸಿಗದೆ ಹತಾಶರಾಗಿದ್ದರು. ಮಳೆಗಾಲದಲ್ಲಿ ಎಲೆಗಳ ಮೇಲೆ ಕಪ್ಪು ಚುಕ್ಕೆಗಳು ಕಾಣಿಸಿ ಮುಂದೆ ಅವು ಹಣ್ಣುಗಳಿಗೆ ಹರಡಿ, ಅವೆಲ್ಲ ಕೊಳೆತು ಉದುರಿ ಹೋಗಿ ರೈತರಿಗೆಲ್ಲ ಅಪಾರವಾದ ಹಾನಿಯಾಗು ತ್ತಿತ್ತು. ಈ ಸಮಯದಲ್ಲಿ ಫ್ರಾನ್ಸಿನಿಂದ ಹೊರಬಂದ ಸಂಶೋಧನೆಗಳಿಂದ ಅಮೇರಿಕದ ರೈತರು ಸಮಾ ಧಾನದ ನಿಟ್ಟುಸಿರು ಬಿಡುವಂತಾಯಿತು.

ಸ್ಕ್ರಿಬ್ನರ್ ಮತ್ತು ಗ್ಯಾಲ್ಲೋವೇ ಮುಂದೆ ತಡ ಮಾಡದೆ ಫ್ರಾನ್ಸಿನಿಂದ ತಾಮ್ರಯುಕ್ತವಾದ ಎಲ್ಲ ಮಿಶ್ರಣಗಳ ಸೂತ್ರಗಳನ್ನು ತರಿಸಿಕೊಂಡು ರೈತರ ಹೊಲಗಳಲ್ಲಿ ದ್ರಾಕ್ಷಿ, ಆಲೂಗಡ್ಡೆ, ಟೊಮ್ಯಾಟೋ ಮುಂತಾದ ಬೆಳೆಗಳ ಮೇಲೆಲ್ಲ ಸಿಂಪಡಿಸಿ ಫಲಿತಾಂ ಶವನ್ನು ನಿರೀಕ್ಷಿಸತೊಡಗಿದರು. ಆದರೆ ಅವರು ಯಾವ ಮಿಶ್ರಣದ ಬಗ್ಗೆಯೂ ರೈತರಿಗೆ ಮಾರ್ಗ ದರ್ಶನ ನೀಡದೆ ಯಾವುದು ಉತ್ತಮ ಮಿಶ್ರಣ ಎಂಬುದನ್ನು ಅವರೇ ಕಂಡುಕೊಳ್ಳಲಿ ಎಂದು ಬಿಟ್ಟಿದ್ದರು. ರೈತರು ಒಮ್ಮೆಯಲ್ಲ; ಹಲವು ಬಾರಿ ಅವುಗಳನ್ನು ಶೋಧಿಸಿದರು. ಅವರ ಪರೀಕ್ಷೆಯಲ್ಲಿ ಗೆದ್ದು ಬಂದದ್ದು ಬೋರ್ಡೋ ದ್ರಾವಣ. (ಅಲ್ಲಿ ಅದನ್ನು 'ಗರ್ನೋಡ್‌ನ ತಾಮ್ರದ ಮಿಶ್ರಣ' ಎಂದು ಕರೆಯಲಾಗುತ್ತಿತ್ತು.) ಅಮೇರಿಕದ ಕಪ್ಪು ದ್ರಾಕ್ಷಿಗೆ ಭೂತದಂತೆ ಬೆನ್ನಟ್ಟಿದ್ದ ಕೊಳೆರೋಗ ವನ್ನು ಈ ದ್ರಾವಣ ಹಿಮ್ಮೆಟ್ಟಿಸಿದ ಘಟನೆಯಿಂದ ಅಮೇರಿಕನ್ನರು ಮತ್ತೊಮ್ಮೆ ಸುಮಧುರವಾದ ದ್ರಾಕ್ಷಾರಸವನ್ನು ಹೀರುವಂತಾಯಿತು.

## ಅಜೇಯಾಸ್ತ್ರ

ಬೋರ್ಡೋ ದ್ರಾವಣ ೧೮೯೫ರ ಸುಮಾರಿಗೆ ಶಿಲೀಂಧ್ರ ರೋಗಗಳ ವಿರುದ್ಧ ಅಮೆರಿಕ ಮತ್ತು ಯುರೋಪಿನ ರೈತರ ಬತ್ತಳಿಕೆಗಳ ಬ್ರಹ್ಮಾಸ್ತ್ರವಾಗಿ ತ್ತೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ಒಂದು ಕ್ರಾಂತಿಯನ್ನೇ ಮಾಡಿದ ಆ ದ್ರಾವಣವನ್ನು ಕಂಡು ಹಿಡಿದು ಈಗ ಒಂದು ಶತಮಾನವೇ ಕಳೆದುಹೋ ಗಿದೆ. ಆದರೆ ಇನ್ನೂತನಕ ಇದಕ್ಕೆ ಸರಿಸಮಾನ ವಾದ, ಬೆಳೆಗಳ ಮತ್ತು ಮನುಷ್ಯನ ಆರೋಗ್ಯಕ್ಕೆ ಹಾನಿಕರವಲ್ಲದ ಶಿಲೀಂಧ್ರನಾಶಕ ಹುಟ್ಟೇ ಇಲ್ಲ ಎಂಬುದು ಪ್ರೊ. ಮಿಲ್ಲಾರ್ಡೆಟ್‌ರ ಹೆಗ್ಗಳಿಕೆಯಷ್ಟೇ ಅಲ್ಲ, ಬೋರ್ಡೋ ದ್ರಾವಣದ ಹೆಗ್ಗಳಿಕೆಯೂ ಹೌದು. (ಆಧಾರ)

## ಕಲ್ಲು ಮೀನು

ಹಿಂದೂ ಮಹಾಸಾಗರ ಮತ್ತು ಶಾಂತ ಸಾಗರಗಳ ಆಳವಿಲ್ಲದ ಪ್ರದೇಶಗಳ ಬಂಡೆಗಳ ಮಧ್ಯೆ 'ಕಲ್ಲು ಮೀನು' ಎಂಬ ಜಲಚರ ಅವಿತುಕೊಂಡಿರುತ್ತದೆ. ಅದು ಸುಮಾರು ೩೦ ಸೆಂಟಿಮೀಟರ್ ಉದ್ದವಿರುವ ಕುರೂಪಿ ಜಂತು. ಅದರ ಚರ್ಮ ಒರಟಾಗಿ, ಮಡಿಕೆಗೊಂಡು ಕಂದು ಮತ್ತು ಕೆಂಗಂದು ಚುಕ್ಕೆಗಳಿದ್ದು ನೋಡಲು ಭಯಂಕರವಾಗಿ ತೋರುತ್ತದೆ. ಈ ಬಣ್ಣ ಅದು ವಾಸಿಸುವ ಹವಳ ಗುಂಡಿಗಳ ಬಣ್ಣದೊಡನೆ ಚೆನ್ನಾಗಿ ಹೊಂದಿಕೊಂಡು ಅದರ ಇರವನ್ನು ಮರೆಮಾಚುತ್ತದೆ. ಯಾವುದಾದರೂ ಬೇಟೆಗಾರ ಪ್ರಾಣಿ ಅದನ್ನು ಪತ್ತೆ ಹಚ್ಚಿ, ಮೇಲೆರಗಿದರೆ ತನ್ನ ಚೂಪಾದ ಮುಳ್ಳಿನಂತಿರುವ ಮೇಲಿನ ಜಲಪಾದವನ್ನು ನಿಗುರಿಸಿ, ಮಾರಕ ವಿಷ ವಸ್ತುವೊಂದನ್ನು ಚಿಮುತ್ತದೆ. ನತದೃಷ್ಟ ಈಜುಗಾರರು ಕೆಲ ವೇಳೆ ಆಕಸ್ಮಿಕವಾಗಿ ಈ ವಿಷದ ದಾಳಿಗೆ ಒಳಗಾಗುತ್ತಾರೆ. ಮೊದಮೊದಲು ವಿಪರೀತ ನೋವು ಕಾಣಿಸಿಕೊಂಡು ಬಳಿಕ ದೇಹ ಮರಗಟ್ಟಿ ಹೋಗುತ್ತದೆ. ಬೇಗನೆ ಚಿಕಿತ್ಸೆಗೊಳಗಾಗದಿದ್ದರೆ ಸಾವೇ ಗತಿ.

ಸಂಗ್ರಹ: **ಶಂಕರಗೌಡ ವೈ. ಪಾಟೀಲ**

ಪುಸ್ತಕ ವಿಭಾಗ



# ಇಂದಿರಾ ಜತೆಗಿನ ನನ್ನ ವರ್ಷಗಳು

ಪಿ.ಸಿ. ಅಲೆಕ್ಸಾಂಡರ್

## ಪುಸ್ತಕ ವಿಭಾಗ

# ಇಂದಿರಾ ಜತೆಗಿನ ನನ್ನ ವರ್ಷಗಳು

ಡಾ. ಪಾಂಡಿಂಜರೇತಲಕಲ್ ಚೆರಿಯನ್ ಅಲೆಕ್ಸಾಂಡರ್ ಹುಟ್ಟಿ ಬೆಳೆದದ್ದು ಕೇರಳದಲ್ಲಿ. ತಿರುವಾಂಕೂರು, ಅಣ್ಣಾಮಲೈ ವಿಶ್ವವಿದ್ಯಾಲಯಗಳಲ್ಲಿ ಇತಿಹಾಸ, ಅರ್ಥಶಾಸ್ತ್ರಗಳ ಅಧ್ಯಯನ. ನಂತರ ಭಾರತೀಯ ಆಡಳಿತ ಸೇವೆಯಲ್ಲಿ (೧೯೪೮) ಸೇರ್ಪಡೆ. ಹಲವಾರು ಹುದ್ದೆಗಳ ನಿರ್ವಹಣೆಯನಂತರ ವಿದೇಶೀ ವ್ಯಾಪಾರ ಮತ್ತು ವಾಣಿಜ್ಯ ಕಾರ್ಯದರ್ಶಿಯಾಗಿ ನೇಮಕ. ಮೊರಾರ್ಜಿ ಸರಕಾರದಲ್ಲಿ ವಾಣಿಜ್ಯ ಕಾರ್ಯದರ್ಶಿಯಾಗಿ ವಿ. ಶಂಕರ್‌ರೊಂದಿಗೆ ಸಂಘರ್ಷ. ೧೯೭೮ರಲ್ಲಿ ಹುದ್ದೆಗೆ ರಾಜೀನಾಮೆ. ಭಾರತಕ್ಕೆ ಮರಳದಿರುವ ಸಂಕಲ್ಪದೊಂದಿಗೆ ಜಿನೀವಾಕ್ಕೆ ಪ್ರಯಾಣ. ನುಫ್ಫೀಲ್ಡ್ ಪ್ರತಿಷ್ಠಾನದ ಫೆಲೋಶಿಪ್‌ನೊಂದಿಗೆ ಲಂಡನ್ನಿನ ವಾಣಿಜ್ಯ ಮಂಡಳಿಯಲ್ಲಿ ತರಬೇತಿ. ಫೋರ್ಡ್ ಪ್ರತಿಷ್ಠಾನದ ಫೆಲೋಶಿಪ್‌ನೊಂದಿಗೆ ಕ್ಯಾಲಿಫೋರ್ನಿಯಾದ ಸ್ಟ್ಯಾನ್‌ಫೋರ್ಡ್ ಸಂಶೋಧನಾ ಸಂಸ್ಥೆಯಲ್ಲಿ ಅಧ್ಯಯನ.

ಡಾ. ಅಲೆಕ್ಸಾಂಡರ್ ಜಿನೀವಾದ ಅಂತಾರಾಷ್ಟ್ರೀಯ ವಾಣಿಜ್ಯ ಕೇಂದ್ರದಲ್ಲಿ ಸೇವಾ ನಿರತರಾಗಿದ್ದಾಗ (೧೯೮೧) ತಮ್ಮ ಸಚಿವಾಲಯದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ವಹಿಸಿಕೊಳ್ಳುವಂತೆ ಆಗಿನ ಪ್ರಧಾನಿ ಇಂದಿರಾರಿಂದ ಆಮಂತ್ರಣ. ರಾಜೀವ್ ಕಾಲದಲ್ಲೂ ಅದೇ ಹುದ್ದೆಯಲ್ಲಿ ಸೇವೆ. ೧೯೮೫-೮೮ರ ಅವಧಿಯಲ್ಲಿ ಬ್ರಿಟನ್ನಿನಲ್ಲಿ ಭಾರತದ ಹೈ ಕಮೀಶನರ್. ೧೯೮೮-೯೦ರಲ್ಲಿ ತಮಿಳುನಾಡು ರಾಜ್ಯಪಾಲ. ಸದ್ಯ ಮಹಾರಾಷ್ಟ್ರದ ರಾಜ್ಯಪಾಲ. 'ದಿ ಡಚ್ ಇನ್ ಮಲಬಾರ್', 'ಬುದ್ಧಿಸಂ ಇನ್ ಕೇರಳ,' 'ಇಂಡಸ್ಟ್ರಿಯಲ್ ಎಸ್ಟೇಟ್ಸ್ ಇನ್ ಇಂಡಿಯಾ,'- ಇವು ಡಾ. ಅಲೆಕ್ಸಾಂಡರ್ ಬರೆದ ಇತರ ಮೂರು ಪುಸ್ತಕಗಳು.

ಪ್ರಸ್ತುತ ಸಂಗ್ರಹ ಅವರ 'ಮೈ ಇಯರ್ಸ್ ವಿಥ್ ಇಂದಿರಾ ಗಾಂಧಿ' ಪುಸ್ತಕದಿಂದ ಆಯ್ದ ಪ್ರಕರಣಗಳ ಅನುವಾದ. ಇಲ್ಲಿ ಇಂದಿರಾರ ಕುರಿತ ಬೇರೆಯದೇ ಆದ 'ಆತ್ಮೀಯ' ಚಿತ್ರಣವಿದೆ.

ಸಂಗ್ರಹಾನುವಾದ:
**ವಾಸುಕಿ**

# ಪುಸ್ತಕ ವಿಭಾಗ

ಭಾರತದ ರಾಜಕೀಯ ಸನ್ನಿವೇಶ ಬಲು ವೇಗದಿಂದ ಬದಲಾವಣೆಯನ್ನು ಕಾಣತೊಡಗಿತು. ತನ್ಮೂಲಕ ನನ್ನ ಬದುಕಿನಲ್ಲೂ ಅನಿರೀಕ್ಷಿತ ತಿರುವುಗಳು ಉಂಟಾಗತೊಡಗಿದವು. ಉದಾತ್ತ ತತ್ವಗಳೊಂದಿಗೆ, ಉಚ್ಚ ಆದರ್ಶಗಳೊಂದಿಗೆ ಆಡಳಿತ ಸೂತ್ರವನ್ನು ಹಿಡಿದಿದ್ದ ಜನತಾ ಪಕ್ಷದ ನಾಯಕರು ವೈಯಕ್ತಿಕ ವಿದ್ವೇಷ, ಒಳಜಗಳಗಳಲ್ಲಿ ಮುಳುಗಿ, ಸರಕಾರವನ್ನು ಮುನ್ನಡೆಸುವ ಬದಲು ಒಬ್ಬರಿನ್ನೊಬ್ಬರ ಕಾಲು ಎಳೆಯುವ ಸನ್ನಾಹ ನಡೆಸುವುದರಲ್ಲೇ ಹೆಚ್ಚು ಆಸಕ್ತಿ ವಹಿಸತೊಡಗಿದರು. ಪ್ರಜಾಕೋಟಿಗೆ ಮತ್ತೆ ಆ ಹಿಂದಿನ ದಿನಗಳನ್ನು ಮೆಲುಕು ಹಾಕುವುದೇ ಒಂದು ಸುಖದ ಅನುಭವ. ಇಂದಿರಾ ಗಾಂಧಿಯ ಪರಿಣಾಮಕರ ಮತ್ತು ಪರಿಣತ ಆಡಳಿತೆಯ ಕಾಲವನ್ನು ಅವರು ಮತ್ತೆ ಮತ್ತೆ ನೆನಪಿಸಿಕೊಳ್ಳತೊಡಗಿದರು. ೧೯೭೮ರ ಕೊನೆಗೆ ಚಿಕ್ಕಮಗಳೂರಿನಿಂದ ವಿಜಯಿಯಾದ ಇಂದಿರಾ ಗಾಂಧಿ ಕೋಟ್ಯಂತರ ಜನರ ಆಶಾಕಿರಣವಾಗಿ ನಿಂತರು. ಜನಸಾಮಾನ್ಯನಿಗೆ ಜನತಾ ಸರಕಾರ ಭ್ರಮನಿರಸನವುಂಟು ಮಾಡಿತ್ತು. ಪ್ರಜೆಗಳೆಲ್ಲ ಮತ್ತೊಂದು ಬದಲಾವಣೆಯ ನಿರೀಕ್ಷೆಯಲ್ಲಿದ್ದರು.

ಅಂಥ ಸಂದರ್ಭದಲ್ಲಿ ದೇಶವನ್ನು ಉಳಿಸಬಲ್ಲ ಏಕೈಕ ನೇತಾರ ಎಂದರೆ ಇಂದಿರಾಗಾಂಧಿ ಎಂದು ನೆರೆನಂಬಿದ್ದ ಮಿಲಿಯಾಂತರ ಜನಸಾಮಾನ್ಯರಲ್ಲಿ ನಾನೂ ಒಬ್ಬನಾಗಿದ್ದೆ. ಅದೊಂದು ಪ್ರಾಮಾಣಿಕ ನಂಬಿಕೆ. ಆಗಿನ ಕಾಂಗ್ರೆಸ್ ಮುಂದಾಳುಗಳಲ್ಲಿ ಆಕೆ ಮಾತ್ರ, ಜವಾಹರಲಾಲ್ ನೆಹರೂ ದೇಶಕ್ಕೆ ಇತ್ತ ಜಾತ್ಯತೀತತೆ ಮತ್ತು ಆಧುನಿಕತೆಯ ಸಂದೇಶವನ್ನು ಶಿರಸಾವಹಿಸಿ ಅನುಸರಿಸಬಲ್ಲವರೆಂಬ ವಿಶ್ವಾಸವುಳ್ಳವನು ನಾನು.

ವಿದ್ಯಾರ್ಥಿದಶೆಯಿಂದಲೇ ನನ್ನ ನೆಚ್ಚಿನ ನಾಯಕ ನೆಹರೂ. "ನಾನು ನೆಹರೂ ಕಾಲದ ಭಾರತದ ಪ್ರಜೆ" ಎಂಬ ಹೆಮ್ಮೆ ಹೊತ್ತು ಬೆಳೆದಿದ್ದೆ. ತರುಣನಾಗಿದ್ದಾಗ, ಮದುವೆಯಾದ ಮೇಲೆ ಮಗ ಹುಟ್ಟಿದರೆ ಅವನಿಗೆ 'ಜವಾಹರ'ನೆಂದೇ ಹೆಸರಿಡುತ್ತೇನೆಂದು ಪ್ರತಿಜ್ಞೆಯನ್ನೂ ಮಾಡಿಬಿಟ್ಟಿದ್ದೆ! ೧೯೪೯ರಲ್ಲಿ ಅದು ನಿಜವೂ ಆಯಿತು. ಮೊದಲ ಮಗ ಬೆಳೆದು ನಿಂತ. ಆದರೆ 'ಜವಾಹರ' ಎಂಬ ಹೆಸರಿನ ಕುರಿತು ನನಗಿದ್ದ ಕುತೂಹಲ ಅವನಿಗಿರಲಿಲ್ಲ. ಆತ 'ನಾಯಕ ಪೂಜೆ'ಯನ್ನೊಪ್ಪದ ಹೊಸ ತಲೆಮಾರಿನ ಭಾರತೀಯ ತರುಣ ಅಲ್ಲವೆ? ದಿಲ್ಲಿಯಲ್ಲಿ ಶಾಲೆ-ಕಾಲೇಜು ಓದುತ್ತಿದ್ದಾಗ ಈ ಹೆಸರು ಅವನಿಗೆ ಅಷ್ಟು ವಿಚಿತ್ರವಾಗಿ ಕಂಡಿರಲಿಲ್ಲ. ಆದರೆ ೧೯೭೭ರಲ್ಲಿ ಐ.ಎ.ಎಸ್. ಅಧಿಕಾರಿಯಾಗಿ ಆಯ್ಕೆಯಾಗಿ ಕೇರಳದಲ್ಲಿ ಕೆಲಸ ಮಾಡಬೇಕಾಗಿ ಬಂದಾಗ ಈ ಹೆಸರು ಉಂಟುಮಾಡಬಹುದಾದ ಗೊಂದಲಗಳನ್ನು ಊಹಿಸಿಕೊಂಡು ಆತ ತನ್ನನ್ನು ಕೇವಲ 'ಜೆ.ಸಿ. ಅಲೆಕ್ಝಾಂಡರ್' ಎಂದು ಕರೆದುಕೊಂಡ. ಆದರೂ ಮನೆಯಲ್ಲಿ, ಮಿತ್ರರು ಮತ್ತು ಆಪ್ತವಲಯದಲ್ಲಿ ಆತ ಇಂದಿಗೂ 'ಜವಾಹರ'ನೆ. ಆ ಮಹಾನ್ ನೇತಾರನ ನೆನಪನ್ನು ತಂದು ಹೆಮ್ಮೆಯನ್ನು ಹೆಚ್ಚಿಸುವ ಹೆಸರು ಅದು.

ಹೀಗೆ ಇಂದಿರಾಗಾಂಧಿ-ನನ್ನ ನೆಚ್ಚಿನ ನಾಯಕನ ಮಗಳು-ನನ್ನ ಪಾಲಿನ ಗೌರವನೀಯ ಮುತ್ಸದ್ದಿಯಾಗಿ ಮನಸ್ಸಿನಲ್ಲಿ ನಿಂತುಬಿಟ್ಟರಲ್ಲದೆ ನಾನು ಮಾನಸಿಕವಾಗಿ ಆಕೆಯ ಎಲ್ಲ ಹೋರಾಟಗಳು ಹಾಗೂ ರಾಜಕೀಯ ಏರಿಳಿತಗಳ ಸಂದರ್ಭಗಳಲ್ಲಿ ಇಂದಿರಾ ಪರನಾಗಿಯೇ ಉಳಿದೆ. ಆದರೆ ಸರಕಾರಿ ಸೇವಕನಾದ ಕಾರಣದಿಂದ ಸಾರ್ವಜನಿಕವಾಗಿ ನಾನು ಅದನ್ನು ವ್ಯಕ್ತಪಡಿಸುವ ಹಾಗಿರಲಿಲ್ಲ. ದೂರದಲ್ಲಿದ್ದುಕೊಂಡೇ ಒಳಗೊಳಗೇ ಇಂದಿರಾಭಿಮಾನವನ್ನು ಬೆಳೆಸಿಕೊಂಡೆ. ಚಿಕ್ಕಮಗಳೂರು ಚುನಾವಣೆಯಲ್ಲಿ ಆಕೆ ಗೆದ್ದ ಸುದ್ದಿ ನಾನು ಜಿನಿವಾದಲ್ಲಿದ್ದಾಗ ತಿಳಿಯಿತು. ನಾನಾಗ ಭಾರತ ಸರಕಾರದ ಸೇವೆಯಲ್ಲಿರಲಿಲ್ಲ. ಉತ್ತರವನ್ನು ನಿರೀಕ್ಷಿಸದೆಯೆ ನಾನು ಇಂದಿರಾಜಿಗೆ 'ಅಭಿನಂದನಾಪರ ಪತ್ರ'ವೊಂದನ್ನು ಬರೆದೆ. ಆದಕ್ಕೆ ಪ್ರತಿಯಾಗಿ ಅವರಿಂದ ಪ್ರೀತಿ-ವಿಶ್ವಾಸಪೂರಿತ ಉತ್ತರ ಬಂತು.

# ಪುಸ್ತಕ ವಿಭಾಗ

೧೨, ವಿಲ್ಲಿಂಗ್ಡನ್ ಕ್ರೆಸೆಂಟ್,
ಹೊಸದಿಲ್ಲಿ,
೧೦, ಡಿಸೆಂಬರ್, ೧೯೭೮

ಪ್ರಿಯ ಶ್ರೀ ಅಲೆಕ್ಸಾಂಡರ್,

ಈನೆಯ ನವೆಂಬರಿನ ನಿಮ್ಮ ಪತ್ರಕ್ಕಾಗಿ ಧನ್ಯವಾದಗಳು. ಪತ್ರ ಬರೆದು ನಿಮ್ಮ ಸಹೃದಯತೆಯನ್ನು ತೋರಿದ್ದೀರಿ.

ನೀವು ಸೇವಾನಿವೃತ್ತಿಗೆ ಮನಸ್ಸು ಮಾಡುವಂಥ ಪ್ರಸಂಗಗಳ ಕುರಿತು ಕೇಳಿ ತಿಳಿದಿದ್ದೇನೆ. ಆದರೆ ನಿಮ್ಮಂಥ ಪ್ರಾಮಾಣಿಕ ಮತ್ತು ಯೋಗ್ಯ ವ್ಯಕ್ತಿಗಳ ಆವಶ್ಯಕತೆ ಸರಕಾರಕ್ಕೆ ಇರುವಂಥ ಸಂದರ್ಭದಲ್ಲೂ ಹೀಗಾದದ್ದು ವ್ಯಸನವುಂಟು ಮಾಡುವಂಥ ಸಂಗತಿ. ಆದಾಗ್ಯೂ ನಿಮ್ಮ ಹೊಸ ಹುದ್ದೆ ಮಹತ್ವದ್ದೂ ಆಸಕ್ತಿಕರವೂ ಆಗಿದೆ. ನೀವು ಅಲ್ಲಿ ಚೆನ್ನಾಗಿಯೇ ಕಾರ್ಯ ನಿರ್ವಹಿಸುತ್ತೀರೆಂಬ ಭರವಸೆ ನನಗಿದೆ.

ನಿಮಗೂ ನಿಮ್ಮಾಕೆಗೂ ಕ್ರಿಸ್‌ಮಸ್ ಮತ್ತು ಹೊಸ ವರ್ಷದ ಶುಭಾಶಯುಗಳೊಂದಿಗೆ,

ನಿಮ್ಮ ವಿಶ್ವಾಸಿ,
ಇಂದಿರಾ ಗಾಂಧಿ

ಇಂದಿರಾಜಿಗೆ ಮತ್ತೊಮ್ಮೆ ನಾನು ಬರೆದದ್ದು ಅವರು ಸ್ವಪ್ಪ ಬಹುಮತದಿಂದ ೧೯೮೦ರ ಜನವರಿಯಲ್ಲಿ ಅಧಿಕಾರಕ್ಕೆ ಬಂದಾಗ. ವಿದೇಶಗಳಲ್ಲಿದ್ದ ಭಾರತೀಯರಿಗೆಲ್ಲ ತಮ್ಮ ದೇಶದಲ್ಲಿ ನಡೆದಿದ್ದ ರಾಜಕಾರಣಗಳ ಕಚ್ಚಾಟ, ಅಧಿಕಾರದಾಹ, ಪಕ್ಷಾಂತರ ಹಾಗೂ ಉಚ್ಚ ಆದರ್ಶಗಳನ್ನು ಬಾಯಲ್ಲಿ ಹೇಳುತ್ತ ಕೃತಿಯಲ್ಲಿ ಮಾತ್ರ ತದ್ವಿರುದ್ಧ ನಡೆದುಕೊಳ್ಳುತ್ತಿದ್ದ ರೀತಿಗಳಿಂದ ಜಿಗುಪ್ಸೆಯುಂಟಾಗಿತ್ತು. ಇಂಥದರಲ್ಲಿ ಇಂದಿರಾಜಿಯ ವಿಜಯ ನಮಗೆಲ್ಲ ನಮ್ಮ ಪ್ರಜಾಪ್ರಭುತ್ವ ಪದ್ಧತಿಯ ಬಗೆಗೆ ಒಂದು ಹೆಮ್ಮೆಯನ್ನು ಹುಟ್ಟಿಸಿತು. ೧೯೮೦ರ ಜನವರಿ ೧೧ರಂದು ನಾನು ಇಂದಿರಾಜಿಗೆ ಅಭಿನಂದನಾಪರ ಪತ್ರ ಬರೆದೆ. ಅಧಿಕಾರ ಸ್ವೀಕರಿಸಿ ಸರಿಯಾಗಿ ಒಂದು ತಿಂಗಳ ನಂತರ ಅವರು ನನ್ನ ಪತ್ರಕ್ಕೆ ಉತ್ತರವನ್ನಿತ್ತರು.

ಹೊಸದಿಲ್ಲಿ,
ಫೆಬ್ರುವರಿ ೧೩, ೧೯೮೦

ಪ್ರಿಯ ಶ್ರೀ ಅಲೆಕ್ಸಾಂಡರ್,

ನಿಮ್ಮ ಅಭಿನಂದನೆಗಳಿಗೆ ಅಭಿವಂದನೆಗಳು. ನಿಮ್ಮ ಬರವಣಿಗೆ ಶ್ಲಾಘನೀಯ.

ಸ್ಥಿತಿ, ಅದರಲ್ಲೂ ವಿಶೇಷವಾಗಿ ಕಾನೂನು-ಸುವ್ಯವಸ್ಥೆ ಮತ್ತು ಆರ್ಥಿಕ ಪರಿಸ್ಥಿತಿ, ತುಂಬ ಚಿಂತಾಜನಕವಾಗಿದೆ. ಸ್ಥಿತಿ ಸುಧಾರಣಾ ಕಾರ್ಯವನ್ನು ಎಲ್ಲಿಂದ ಶುರುಮಾಡಬೇಕೆಂಬುದೇ ನಮ್ಮ ಸರಕಾರಕ್ಕೆ ತಿಳಿಯದಾಗಿದೆ. ಯಾಕೆಂದರೆ, ವಿರೋಧ ಪಕ್ಷದವರು ಸಾಧ್ಯವಿದ್ದ ರೀತಿಯಲ್ಲೆಲ್ಲ ಅಡ್ಡಿಯೊಡ್ಡಲು ಸಿದ್ಧವಾಗಿ ನಿಂತಿದ್ದಾರೆ.

ನಿಮ್ಮ ವಿಶ್ವಾಸಿ,
ಇಂದಿರಾ ಗಾಂಧಿ
ಪ್ರಧಾನ ಮಂತ್ರಿ

# ಪುಸ್ತಕ ವಿಭಾಗ

ಹಿಂದಿನ ಪ್ರಧಾನಿ ಚರಣಸಿಂಗರ ಕಾರ್ಯದರ್ಶಿಯಾಗಿದ್ದ ಕೃಷ್ಣಸ್ವಾಮಿ ರಾವ್‌ಸಾಹಿಬ್‌ರನ್ನು ತಮ್ಮ ಕಾರ್ಯದರ್ಶಿಯಾಗಿ ಮುಂದುವರಿಯುವಂತೆ ಇಂದಿರಾ ಕೇಳಿಕೊಂಡಿದ್ದರು. ತಾವು ಹೊಸ ಕಾರ್ಯದರ್ಶಿಯೊಬ್ಬರನ್ನು ಹುಡುಕುತ್ತಿರುವುದಾಗಿಯೂ, ಅಲ್ಲಿಯವರೆಗೆ ಮಾತ್ರ ಮುಂದುವರಿಯಬೇಕಾದ ಮಧ್ಯಂತರ ವ್ಯವಸ್ಥೆ ಇದೆಂದೂ ಇಂದಿರಾ ಸ್ಪಷ್ಟವಾಗಿ ಕೃಷ್ಣಸ್ವಾಮಿಗಳಿಗೆ ಹೇಳಿದ್ದರು ಕೂಡ. ವಾರಗಳು ಉರುಳಿದಂತೆ ರಾವ್‌ಸಾಹಿಬ್ ನಿಪುಣರು, ನಂಬಿಗಸ್ಥರು ಎಂದು ಅರಿತುಕೊಂಡರು ಇಂದಿರಾ. ಆದರೂ, ಹೊಸ ಕಾರ್ಯದರ್ಶಿಗಾಗಿ ಹುಡುಕಾಟ ಮುಂದುವರಿದೇ ಇತ್ತು.

## ಮೊದಲ ಭೇಟಿ

೧೯೮೦ರ ಮಧ್ಯದ ಹೊತ್ತಿದ ಆ ಸ್ಥಾನಕ್ಕೆ ಸಂಭಾವ್ಯ ವ್ಯಕ್ತಿಗಳ ಹೆಸರಿನ ಪಟ್ಟಿಯಲ್ಲಿ ನನ್ನ ಹೆಸರು ಮೊದಲಿನದಾಗಿತ್ತೆಂಬ ವಿಷಯ ತಿಳಿಯಿತು. ಈಗಾಗಲೇ ಹೇಳಿದಂತೆ ಇಂದಿರಾರೊಂದಿಗೆ ಒಂದೆರಡು ಸಲ ಪತ್ರವ್ಯವಹಾರ ಮಾಡಿದ್ದನ್ನು ಬಿಟ್ಟರೆ ನಾನು ಅವರಿಗೆ ಅಪರಿಚಿತನೆ. ಜಿನಿವಾದಲ್ಲಿನ ಜಾಗತಿಕ ಮಟ್ಟದ ಹಿರಿಯ ಹುದ್ದೆ ಬಿಟ್ಟು ದಿಲ್ಲಿಯಲ್ಲಿನ ಕಾರ್ಯದರ್ಶಿ ಜಾಗಕ್ಕೆ ಬರಲು ನಾನು ಒಪ್ಪುವೆನೆ ಎಂಬ ಕುರಿತು ಅವರಿಗೆ ಭರವಸೆಯೂ ಇದ್ದಂತಿರಲಿಲ್ಲ. ಇಂದಿರಾ ಸಂಪುಟದಲ್ಲಿ ಕಾನೂನು ಮಂತ್ರಿಯೂ, ಅವರಿಗೆ ಅತ್ಯಂತ ಸಮೀಪದವರೂ ಆಗಿದ್ದ ಶಿವಶಂಕರ್ ಜಿನಿವಾದಲ್ಲಿ ನಡೆದ ಸಂ.ರಾ. ಸಭೆಯೊಂದಕ್ಕೆ ಬಂದಾಗ, ನನ್ನನ್ನು ಭೇಟಿಯಾಗಿ ದಿಲ್ಲಿಗೆ ಬರಲು ಒಪ್ಪುವೆನೆ ಇಲ್ಲವೆ ಎಂಬುದನ್ನು, ನೇರವಾಗಿ ಪ್ರಸ್ತಾಪಿಸದೆಯ, ತಿಳಿದುಕೊಳ್ಳುವಂತೆ ಅವರಿಗೆ ಇಂದಿರಾ ಹೇಳಿಕಳಿಸಿದ್ದರಂತೆ. ಶಿವಶಂಕರರನ್ನು ನಾನು ಭೇಟಿಯಾದದ್ದು ಅದೇ ಮೊದಲು. ಆತನ ಸರಳ ನಡವಳಿಕೆ ಮತ್ತು ಇಂದಿರಾಜಿಯ ಬಗೆಗಿನ ಆತನ ನಿಷ್ಠೆಗಳಿಂದ ನಾನು ಪ್ರಭಾವಿತನಾದೆ. ಇಬ್ಬರೂ 'ವಿಷಯ'ವನ್ನು ದೂರವಿಟ್ಟೇ ಮಾತಾಡಿದೆವು. ನಾನು ಸಂ.ರಾ.ದ ಹುದ್ದೆಯನ್ನು ತ್ಯಜಿಸುವುದು ನಿಜಕ್ಕೂ ಭಾರತದ ಮಟ್ಟಿಗೆ ಒಂದು ನಷ್ಟವೆ; ಮತ್ತು ನನ್ನ ಜಾಗದಲ್ಲಿ ಮತ್ತೊಬ್ಬ ಭಾರತೀಯನ ನೇಮಕವಾಗುವುದೂ ಅನಿಶ್ಚಿತ ಎಂಬುದನ್ನೂ ಅರಿತುಕೊಂಡ ಶಿವಶಂಕರ್ ತಮ್ಮದೇ ಆದ ರಾಜಕೀಯ ಗತ್ತಿನಲ್ಲಿ, "ಒಂದು ವೇಳೆ ನೀವು ಭಾರತ ಸರಕಾರದ ಸೇವೆಯನ್ನು ಒಪ್ಪಿ ದಿಲ್ಲಿಗೆ ಬರಲು ನಿರ್ಧರಿಸಿದರೆ ಇಂದಿರಾಜಿಗೆ ತುಂಬ ಸಂತೋಷವಾಗುತ್ತದೆ," ಎಂದು ಹೇಳಲು ಮರೆಯಲಿಲ್ಲ.

ಅದೇ ವರ್ಷ ಅಕ್ಟೋಬರ್ ತಿಂಗಳಲ್ಲಿ, ಜಿನಿವಾಕ್ಕೆ ಬಂದ ಅಧಿಕಾರಿಯೊಬ್ಬರ ಮೂಲಕ ಇಂದಿರಾಜಿ ಸಂದೇಶವೊಂದನ್ನು ಕಳಿಸಿದರು. ನನ್ನ ಮುಂದಿನ ದಿಲ್ಲಿ ಭೇಟಿಯ ಸಂದರ್ಭದಲ್ಲಿ ತಾವು ನನ್ನನ್ನು ಕಾಣಲು ಬಯಸಿದುದಾಗಿ ಇಂದಿರಾಜಿ ಆಶಯ ವ್ಯಕ್ತಪಡಿಸಿದ್ದರು. ಆ ಅಧಿಕಾರಿ, "ಇನ್ನೂ ನಿಮ್ಮ ಹೆಸರು ಸಂಭಾವ್ಯ ವ್ಯಕ್ತಿಗಳ ಪಟ್ಟಿಯಲ್ಲಿ ಮೊದಲಿನದೇ ಆಗಿದೆ. ಒಂದು ವೇಳೆ ನೀವು ಆ ಸ್ಥಾನಕ್ಕೆ ಅಲಭ್ಯ ಎಂದಾದಲ್ಲಿ ಮಾತ್ರ ಇನ್ನುಳಿದ ಹೆಸರುಗಳನ್ನು ಅವರು ಪರಿಗಣಿಸುತ್ತಾರೆ," ಎಂದರು. ಇಂದಿರಾಜಿಯನ್ನು ಕಾಣಲೇಬೇಕೆಂಬ ತವಕ ಹೆಚ್ಚಾಯಿತು. ಮರು ತಿಂಗಳಿನಲ್ಲಿಯೇ ನಾನು ದಿಲ್ಲಿಗೆ ರಜೆಯ ಮೇಲೆ ಹೋಗುವ ನಿರ್ಧಾರ ಮಾಡಿದ್ದೆ. ಇಂದಿರಾ ಗಾಂಧಿಯವರ ಕಚೇರಿಗೆ 'ಭೇಟಿಯ ಅವಕಾಶ' ಕೋರಿ ಬರೆದೆ.

ನನಗೆ ದಿಲ್ಲಿಯ ವ್ಯವಸ್ಥೆಯ ಕುರಿತು ಸ್ಪಷ್ಟ ಕಲ್ಪನೆಯಿತ್ತು. ನನ್ನ ಆಗಮನ ಅಲ್ಲಿಯ ಅನೇಕರಿಗೆ ಅಪಥ್ಯವಾಗುತ್ತದೆಂಬುದೂ ತಿಳಿದಿತ್ತು. ಆದರೂ, ಆ ಹೆಸರುಗಳ ಪಟ್ಟಿಯಲ್ಲಿ ನಾನು ಮೊದಲಿಗನಾಗಿದ್ದೆನೆಂಬ ವಿಷಯ ಹೆಮ್ಮೆ ತಂದರೂ, ಆ ಜಾಗವನ್ನು ಅಲಂಕರಿಸಲು ಅಷ್ಟಾಗಿ ಆಸಕ್ತಿಯಿರಲಿಲ್ಲ. ಅದಕ್ಕೆ ನನ್ನದೇ ಆದ ಹಲವಾರು ಕಾರಣಗಳಿದ್ದವು. ಸದ್ಯದ ಹುದ್ದೆ ಸಾಕಷ್ಟು ಸಮಾಧಾನವನ್ನೂ, ಸವಾಲುಗಳನ್ನು ಎದುರಿಸುವ ಧೈರ್ಯವನ್ನೂ ತರುವಂಥದ್ದು. ಅದನ್ನು ಬಿಟ್ಟು ದಿಲ್ಲಿಗೆ ಹೋದರೆ

# ಪುಸ್ತಕ ವಿಭಾಗ

ಪರಿಣಾಮಕರವಾಗಿ ಕೆಲಸ ಮಾಡಲು ಸಾಧ್ಯವೇ? ಇಂದಿರಾಜಿಯ ಕಾರ್ಯದರ್ಶಿಯಾಗಿ ಕೆಲಸ ಮಾಡುವುದೊಂದು ಸೌಭಾಗ್ಯವೇ ಆದರೂ ಹೊಸ ಪರಿಸ್ಥಿತಿಯನ್ನು ನಾನು ಹೇಗೆ ಎದುರಿಸಿಯೇನು? ಎಂಬ ಇಬ್ಬಂದಿ. ಅಷ್ಟಲ್ಲದೆ, ಆದಾಗಲೇ ಭಾರತದ ಕೆಲವು ಪತ್ರಿಕೆಗಳಲ್ಲಿ, ನಾನು ಮುಕ್ತ ಮತ್ತು ಮಧ್ಯ ಪ್ರವೇಶವಿರದಂಥ ರೀತಿಯಲ್ಲಿ ಕಾರ್ಯ ನಿರ್ವಹಿಸುವ ದಿಶೆಯಲ್ಲಿ ಇಂದಿರಾಜಿಯಿಂದ ಭರವಸೆ ಕೋರಿದ್ದೆನೆಂಬ ವರದಿಗಳೂ ಪ್ರಕಟವಾಗಿದ್ದವು. ಇಂಥ ಶರತ್ತುಗಳಿಗೆ ಒಳಪಡಬೇಕಾದ ವ್ಯಕ್ತಿಯಾಗಿರಲಿಲ್ಲ ಇಂದಿರಾ. ಇಂಥ 'ಆಶ್ವಾಸನೆ'ಗಳ ಕುರಿತು ಅವರೊಂದಿಗೆ ಪ್ರಸ್ತಾಪಿಸುವ ವ್ಯಕ್ತಿಯೂ ನಾನಾಗಿರಲಿಲ್ಲ. ಆದ್ದರಿಂದ ಈ ವಿಷಯದಲ್ಲಿ ನಿರ್ಧಾರಕ್ಕೆ ಬರಲು ಇನ್ನಷ್ಟು ಸಮಯಾವಕಾಶ ಬೇಕೆನಿಸಿ ನಾನು ನವೆಂಬರ್ ತಿಂಗಳಿನ ಒಂದು ದಿನ ಸೌಥ್ ಬ್ಲಾಕಿನ ಅವರ ಕಚೇರಿಗೆ ಹೋದೆ.

ಇಂದಿರಾ ತುಂಬ ಖುಷಿಯಾಗಿದ್ದರು. ನನ್ನ ಆಗಿನ ಹುದ್ದೆಯ ಕಾರ್ಯ ವಿಧಾನ ಮುಂತಾಗಿ ಅನೇಕ ವಿಷಯಗಳನ್ನು ಕೇಳಿ ತಿಳಿದುಕೊಂಡರು. ಕಾಲು ಗಂಟೆಯ ನಂತರ ಕಾರ್ಯದರ್ಶಿಯ ನೇಮಕದ ಮಾತೆತ್ತಿದರು. ನಾನು ತತ್‌ಕ್ಷಣದಲ್ಲಿ, ನನ್ನ ನಿರ್ಧಾರ ತಿಳಿಸಬೇಕೆಂಬ ಅವರ ಬಯಕೆ ಆ ಮಾತಿನಲ್ಲಿ ವ್ಯಕ್ತವಾಯಿತು. ದಿಢೀರನೆ ಹೇಳಿಬಿಡಲು ನಾನು ಹಿಂದೇಟು ಹಾಕಿದೆ. "ಸದ್ಯ ಮೂರು ವಾರಗಳ ರಜೆಯ ಮೇಲೆ ಮನಿಲಾಕ್ಕೆ ಹೊರಟಿದ್ದೇನೆ. ಅಲ್ಲಿ ನನ್ನ ಮಗ ಏಶಿಯನ್ ಡೆವಲಪ್‌ಮೆಂಟ್ ಬ್ಯಾಂಕಿನಲ್ಲಿದ್ದಾನೆ. ಮನಿಲಾದಿಂದ ವಾಪಸ್ಸು ಹೊರಡುವಾಗ ಮತ್ತೆ ನಿಮ್ಮನ್ನು ಕಾಣುತ್ತೇನೆ," ಎಂದೆ.

## ಪಟ್ಟಭದ್ರರ ಪಟ್ಟು

ದಿಲ್ಲಿಯ ಕೆಲವು ಮಿತ್ರರನ್ನೂ-ಹಿತೈಷಿಗಳನ್ನೂ ಕಂಡಾಗ ಒಂದಷ್ಟು ಸಂಗತಿಗಳು ಗೊತ್ತಾದವು: ಇಂದಿರಾಜಿ ಮತ್ತೆ ಅಧಿಕಾರಕ್ಕೆ ಬಂದ ಆ ಸಂದರ್ಭದಲ್ಲಿ ಕೆಲವು ಅಧಿಕಾರಿಗಳು ಎಮರ್ಜೆನ್ಸಿ ಕಾಲದ ನಡವಳಿಕೆಯನ್ನೇ ಮುಂದುವರಿಸಿದ್ದಂತೆ ಪ್ರಧಾನಿಗೆ ಅನ್ನಿಸಿದ್ದು, ಸರಕಾರಿ ಕಾರ್ಯ ನಿರ್ವಹಣಾ ವಿಧಾನದಲ್ಲಿ ಕ್ರಾಂತಿಕಾರಕ ಬದಲಾವಣೆಯನ್ನು ತರುವ ಮೂಲಕ ಆದಾಗಲೇ ಪ್ರಬಲರಾಗಿ ನಿಂತ ಅಂಥ ಅಧಿಕಾರಿಗಳನ್ನು ಮಟ್ಟ ಹಾಕಲು ಅವರು ಬಯಸಿದ್ದು, ತಮ್ಮ ಕಾರ್ಯದರ್ಶಿ ಹುದ್ದೆಗೆ ಅತ್ಯಂತ ಸಮರ್ಥ-ಪ್ರಾಮಾಣಿಕ ಮತ್ತು ಗೌಪ್ಯ ಕಾಪಾಡಬಲ್ಲ ಹೊಸ ವ್ಯಕ್ತಿಯನ್ನು ನನ್ನಲ್ಲಿ ಇಂದಿರಾ ಗುರುತಿಸಿದ್ದು ಮುಂತಾಗಿ.

ಡಿಸೆಂಬರ್ ೧೯೮೦ರ ಮಧ್ಯಾವಧಿ. ನಾನು ಮನಿಲಾದಿಂದ ದಿಲ್ಲಿಗೆ ಬಂದೆ. ತಮ್ಮನ್ನು ಭೇಟಿ ಮಾಡಿದ್ದು ಆ ಹುದ್ದೆಯನ್ನು ನಾನು ಒಪ್ಪಿಕೊಂಡದ್ದರ ಸೂಚನೆಯೆಂದೇ ಭಾವಿಸಿ ಇಂದಿರಾಜಿ ನಾನು ಯಾವಾಗ ಕೆಲಸಕ್ಕೆ ಸೇರಿಕೊಳ್ಳುವೆ, ನಿಯುಕ್ತಿಯ ಕರಾರುಗಳು ಇವೇ ಮುಂತಾದವುಗಳಷ್ಟೆ ಇನ್ನುಳಿದ ಕೆಲಸ ಎಂದುಕೊಂಡಿದ್ದರೆಂದು ಕಾಣುತ್ತದೆ. ಈ ಕುರಿತು ನಾನು ಅವರ ಸಂಪುಟದ ಹಿರಿಯ ಸದಸ್ಯರೊಬ್ಬರನ್ನು ಭೇಟಿಯಾಗುವಂತೆ ಸೂಚನೆ ಬಂತು. ಎರಡೇ ದಿನಗಳ ಆ ವಾಸ್ತವ್ಯದಲ್ಲಿ ನಾನು ಆ ಹಿರಿಯ ಮಂತ್ರಿಯನ್ನು ಅವರ ಕಚೇರಿಯಲ್ಲಿ ಕಂಡೆ. ಅದು ಕೆಲವೇ ನಿಮಿಷಗಳ ಮಾತುಕತೆ. "ವಾರದ ಅವಧಿಗೆ ಕೇರಳ ಪ್ರವಾಸಕ್ಕೆ ಹೋಗುತ್ತಿದ್ದೇನೆ. ಅಲ್ಲಿಂದ ದಿಲ್ಲಿಯ ಮೂಲಕ ಜಿನಿವಾಕ್ಕೆ ಮರಳುವಾಗ ಮತ್ತೊಮ್ಮೆ ಪ್ರಧಾನಿಯವರನ್ನು ಕಾಣುವೆ," ಎಂದೆ. "ಹಾಗಾದರೆ ಮೆಡಂ ಜತೆಗೆ ನಿಮ್ಮ ಭೇಟಿಯ ದಿನಾಂಕ ಮತ್ತು ವೇಳೆಯನ್ನು ನಿಗದಿಪಡಿಸಿ ಟೆಲಿಗ್ರಾಂ ಕೊಡುವೆ" ಎಂದು ಅವರು ಕೇರಳದ ವಿಳಾಸ ಪಡೆದುಕೊಂಡರು.

ಆದರೆ ಟೆಲಿಗ್ರಾಂ ಬರಲೇಯಿಲ್ಲ!

ನನ್ನ ನಂಬಿಕೆಯ ಗೆಳೆಯರ ಮೂಲಕ ತಿಳಿದು ಬಂದ ಪ್ರಕಾರ ಇದರಲ್ಲಿ ಕೆಲವು ಪಟ್ಟಭದ್ರ ಹಿತಾಸಕ್ತಿಗಳ ಕೈವಾಡವಿತ್ತು. ನಾನು ಆ ಹುದ್ದೆಗೆ ಬಾರದಂತೆ ಅವರು ಯತ್ನಿಸುತ್ತಿದ್ದರು. ದಿಲ್ಲಿಗೆ

ಹೋಗದೆ, ಪ್ರಧಾನಿಯವರನ್ನು ಕಾಣದೆ, ನಾನು ಜಿನಿವಾಕ್ಕೆ ಮರಳಿದೆ. ಕೆಲವು ವಾರಗಳ ನಂತರ ಇಂದಿರಾಜಿ ನಾನು ತಮ್ಮನ್ನು ಭೇಟಿ ಮಾಡದೇ ಹೋದುದಕ್ಕಾಗಿ ಅಚ್ಚರಿಪಟ್ಟು, ಸಂದರ್ಶನವನ್ನು ಯಾಕೆ ಏರ್ಪಡಿಸಲಿಲ್ಲ ಎಂದು ಆ ಹಿರಿಯ ಮಂತ್ರಿಯನ್ನು ಕೇಳಿದರಂತೆ. ಟೆಲಿಗ್ರಾಂ ಕಳಿಸಿದಾಗಲೂ ಯಾಕೆ ದಿಲ್ಲಿಗೆ ಬಂದು ಪ್ರಧಾನಿಯವರನ್ನು ನೋಡಲಿಲ್ಲವೆಂದು ನನ್ನನ್ನು (ಜಿನಿವಾಕ್ಕೆ ಫೋನ್ ಮಾಡಿ) ಆ ಹಿರಿಯ ಮಂತ್ರಿ ವಿಚಾರಿಸಿದರು. ಟೆಲಿಗ್ರಾಂ ತಲಪದಿದ್ದುದನ್ನು ಸ್ಪಷ್ಟಪಡಿಸಿ, ಈ ಬಗ್ಗೆ ತಮ್ಮ ಕಚೇರಿಯಲ್ಲಿ ವಿಚಾರಿಸಲು ಅವರಿಗೆ ಹೇಳಿ ಸುಮ್ಮನಾದೆ. ನಾನು ದಿಲ್ಲಿಗೆ ಮರಳಬೇಕೆಂದು ಬಯಸಿದವರಲ್ಲಿ ಪುಪುಲ್ ಜಯಕರ್ ಕೂಡ ಒಬ್ಬರು. ಜಿನಿವಾಕ್ಕೆ ಸಂಪರ್ಕವೇರ್ಪಡಿಸಿಕೊಂಡು, "ಟೆಲಿಗ್ರಾಂ ಧಾಂಧಲೆಯಿಂದ ಇಂದಿರಾಜಿ ಗಲಿಬಿಲಿಗೊಂಡಿದ್ದಾರೆ. ನೀವು ಕೂಡಲೇ ಅವರನ್ನು ನೇರವಾಗಿ ಮಾತನಾಡಿಸಿ, ಒಂದು ವೇಳೆ ದಿಲ್ಲಿಗೆ ಮರಳುವ ಮನಸ್ಸು ಮಾಡಿದ್ದರೆ ಹಾಗೆಯೇ ತಿಳಿಸಿ," ಎಂದರು. ಅವರೊಂದಿಗೆ ಮಾತಾಡಿ ಫೋನಿಡುತ್ತಿದ್ದ ಹಾಗೆಯೇ ಅದು ಮತ್ತೆ ಕರೆಯಿತು. ಈ ಸಲ ಮಾತಾಡಿದವರು ಕೃಷ್ಣಸ್ವಾಮಿ ರಾವ್‌ಸಾಹಿಬ್; ಪ್ರಧಾನಿಯವರ ಕಾರ್ಯದರ್ಶಿ. ನಾನು ದಿಲ್ಲಿಗೆ ಬರಲು ಸಿದ್ಧನೇ ಇಲ್ಲವೆ ಎಂಬುದನ್ನು ತಿಳಿದುಕೊಂಡು, ಒಂದು ವೇಳೆ ಧನಾತ್ಮಕ ಉತ್ತರವಿದ್ದರೆ ನೇಮಕಾತಿಯ ಕರಾರು ಇತ್ಯಾದಿಗಳು ಏನು ಎಂಬುದನ್ನು ಪ್ರಧಾನಿ ತತ್‌ಕ್ಷಣ ತಿಳಿಯಬಯಸಿದ್ದಾರೆ ಎಂದರು. ದಿಲ್ಲಿಗೆ ಮರಳುವ ಇಚ್ಛೆಯಿದೆ ಎಂದು ಹೇಳಿ, ಸಂಬಳ ಸಾರಿಗೆ-ಸೇವೆಯ ಅವಧಿ ಇತ್ಯಾದಿಗಳ ವಿಷಯದಲ್ಲಿ ನಾನು ಹೇಳಬೇಕಾದ್ದೇನೂ ಇಲ್ಲ; ಪ್ರಧಾನಿಯ ನಿರ್ಧಾರದಂತೆಯೇ ಆಗಲಿ ಎಂದೆ. ಮರುದಿನವೇ ದಿಲ್ಲಿಯಿಂದ ಸಂದೇಶ ಬಂತು. 'ಪ್ರಧಾನಿಯವರ ಮುಖ್ಯ ಕಾರ್ಯದರ್ಶಿ ಎಂದು ನಿಮ್ಮನ್ನು ನಿಯುಕ್ತಿಗೊಳಿಸಲಾಗಿದೆ. ಸೇವಾವಧಿ ಇಂತಿಷ್ಟೇ ಕಾಲದ್ದು ಎಂದೇನೂ ಇಲ್ಲ.'

## ಪ್ರಧಾನಿಯೊಂದಿಗೆ ವಿದೇಶ ಪ್ರವಾಸ

ಸಂ.ರಾ. ಅಧಿಕಾರಿಗಳಿಗೆ ನನ್ನ ರಾಜೀನಾಮೆ ಕಳಿಸಿ, ಸರಿಯಾಗಿ ಮೂರು ವರ್ಷಗಳ ಮೇಲೆ ಭಾರತ ಸರಕಾರದ ಸೇವೆಗೆ ಮರಳಿದೆ. ಜನತಾ ಸರಕಾರದ ಅವಧಿಯಲ್ಲಿ ತುಂಬ ನೊಂದುಕೊಂಡು, ಮತ್ತೆಂದೂ ಭಾರತ ಸರಕಾರದ ಸೇವೆಗೆ ಮರಳಲಾರೆನೆಂಬ ನಿರ್ಧಾರದೊಂದಿಗೆ ೧೯೭೮ರಲ್ಲಿ ನನ್ನ ಹುದ್ದೆಯನ್ನು ತ್ಯಜಿಸಿದ್ದೆನಲ್ಲ.

ಶನಿವಾರ, ೧೯೮೧ರ ಮೇ ೨. ನಾನು ಪ್ರಧಾನಿಯವರ ಮುಖ್ಯ ಕಾರ್ಯದರ್ಶಿಯ ಸ್ಥಾನವನ್ನು ವಹಿಸಿಕೊಂಡೆ. ಕೃಷ್ಣಸ್ವಾಮಿ ರಾವ್‌ಸಾಹಿಬ್ ಸಂಪುಟ ಕಾರ್ಯದರ್ಶಿಯಾಗಿ ನೇಮಕಗೊಂಡಿದ್ದರು. ಇಬ್ಬರೂ ಇಂದಿರಾಜಿಯನ್ನು ಅಂದು ಮಧ್ಯಾಹ್ನ ಕೆಲವೇ ನಿಮಿಷ ಕಂಡೆವು. ಅವರಿಗೂ ಸಮಯವಿರಲಿಲ್ಲ. ಸ್ವಿಜರ್‌ಲಂಡ್, ಕುವೈಟ್ ಹಾಗೂ ಅರಬ್ ರಾಷ್ಟ್ರಗಳ ಅಧಿಕೃತ ಪ್ರವಾಸಕ್ಕಾಗಿ ಮೇ ೫ ರಂದು ಪ್ರಧಾನಿ ಹೊರಟು ನಿಂತಿದ್ದರು. ಅವರೊಂದಿಗೆ ನಾನೂ ಹೊರಡಬೇಕಾಗಿತ್ತು.

ಅಧಿಕಾರ ಸ್ವೀಕರಿಸಿ ಮೂರೇ ದಿನಗಳಲ್ಲಿ ಪ್ರಧಾನಿಯವರೊಂದಿಗೆ ವಿದೇಶ ಪ್ರವಾಸ! ಇದು ಒಂದು ರೀತಿಯಲ್ಲಿ ನನಗೆ ನನ್ನ ಹೊಸ ಜವಾಬ್ದಾರಿಗಳನ್ನು ಅರಿತುಕೊಳ್ಳಲು ಸದವಕಾಶ. ಎಂಟು ದಿನಗಳ ಆ ಅವಧಿಯಲ್ಲಿ ಪ್ರಧಾನಿಯೊಂದಿಗೆ ವಿವಿಧ ರಾಷ್ಟ್ರಗಳನ್ನು ಸುತ್ತಿ, ಅಂತಾರಾಷ್ಟ್ರೀಯ ಸಂಸ್ಥೆಗಳ ಮುಖ್ಯಸ್ಥರೊಂದಿಗೆ ಅವರ ಮಾತುಕತೆ-ರಾಷ್ಟ್ರ ಪ್ರಮುಖರೊಂದಿಗಿನ ಭೇಟಿ-ಅಧಿಕೃತ ಸಭೆ, ಕೂಟಗಳಲ್ಲಿ ಭಾಗವಹಿಸುವಿಕೆ-ಆಯಾ ರಾಷ್ಟ್ರಗಳಲ್ಲಿ ವಾಸಿಸಿದ್ದ ಭಾರತೀಯರನ್ನು ಕಾಣುವುದು-ಅಲ್ಲಲ್ಲಿ ಪತ್ರಿಕಾ ಸಭೆ, ಟಿ.ವಿ. ಸಂದರ್ಶನಗಳೇ ಮುಂತಾದ ಬೇರೆ ಬೇರೆ ಸಂದರ್ಭಗಳಲ್ಲಿ ಇಂದಿರಾಜಿಯನ್ನು ಸಮೀಪದಿಂದ ನೋಡಿ, ಕಾರ್ಯ ವಿಧಾನವನ್ನು ಅರಿಯಲು ಅನುಕೂಲವಾಯಿತು. ಜತೆಗೆ ನನ್ನ ಹುದ್ದೆಯ ಕರ್ತವ್ಯಗಳೇನೇನು ಎಂಬುದನ್ನು ಅಲ್ಪಾವಧಿಯಲ್ಲಿಯೇ ತಿಳಿದುಕೊಳ್ಳಲೂ ಸಾಧ್ಯವಾ

ಯಿತು. ದಿಲ್ಲಿಯಲ್ಲಾಗಿದ್ದರೆ ಅದು ಅಷ್ಟು ಮಟ್ಟಿಗೆ ನಿಧಾನವಾಗುತ್ತಿತ್ತೇನೋ. ನನ್ನ ಪಾಲಿಗೆ ಅದೊಂದು ಅಮೂಲ್ಯ ಅನುಭವ.

## ಸಂಕೀರ್ಣ ವ್ಯಕ್ತಿತ್ವ

ಪ್ರಧಾನಿಯೊಂದಿಗಿನ ಈ ನನ್ನ ಮೊದಲ ಪ್ರವಾಸವೇನೂ ಸುಖಪ್ರದವಾಗಿ ಪ್ರಾರಂಭವಾಗಲಿಲ್ಲ. ವ್ಯವಸ್ಥೆಯಾಗಿದ್ದ 'ಮಹಾಲು' ವಿಮಾನ ದೋಷಪೂರ್ಣವೆಂದು ಕಂಡು ಬಂದದ್ದರಿಂದ ಕೊನೆಗಳಿಗೆಯಲ್ಲಿ ಏರ್-ಇಂಡಿಯ ಬದಲಿ ವ್ಯವಸ್ಥೆ ಮಾಡಬೇಕಾಗಿ ಬಂತು. ಅದೊಂದು ಚಿಕ್ಕ ವಿಮಾನ. ದೂರ ಪ್ರಯಾಣಕ್ಕೆ, ಅದೂ ಪ್ರಧಾನಿಯಂಥ ಅತಿ ಮಹತ್ವದ ವ್ಯಕ್ತಿಯ ವಿದೇಶ ಪ್ರವಾಸಕ್ಕೆ ತಕ್ಕುದಾಗಿರಲಿಲ್ಲ. ಆದರೂ ತುರ್ತಾಗಿ ಅದರಲ್ಲೇ ಎಲ್ಲ ಸೌಕರ್ಯಗಳನ್ನೂ ಕಲ್ಪಿಸಲಾಯಿತು.

ದಿಲ್ಲಿಯಿಂದ ಹೊರಟು ಒಂದು ಗಂಟೆಯ ನಂತರ ಇಂದಿರಾಜಿ ತಮ್ಮ ಕ್ಯಾಬಿನ್ನಿಗೆ ನನ್ನನ್ನು ಕರೆಸಿಕೊಂಡರು. ಅರವತ್ತು ನಿಮಿಷಕ್ಕೂ ಹೆಚ್ಚು ಕಾಲದ ಅವಧಿಯಲ್ಲಿ ತಮ್ಮ ಸರಕಾರದ ನೀತಿ, ಕಾರ್ಯಯೋಜನೆ, ಎದುರಿಸಬೇಕಾದ ಮುಖ್ಯ ಸಮಸ್ಯೆಗಳು, ಆರ್ಥಿಕ-ಸುಭದ್ರತೆಯನ್ನು ಕಾಪಾಡಿಕೊಳ್ಳುವಿಕೆ, ಆಡಳಿತ ಯಂತ್ರದ ಕಾರ್ಯಸಾಮರ್ಥ್ಯವನ್ನು ಸುಧಾರಿಸುವಿಕೆ, ಮತ್ತು ಕಾನೂನು-ಸುವ್ಯವಸ್ಥೆಯ ಮಟ್ಟವನ್ನು ಎತ್ತರಿಸುವುದೇ ಮೊದಲಾದ ಹತ್ತು ಹಲವು ಕಾಳಜಿಗಳು ಅವರ ಮಾತಿನಲ್ಲಿ ವ್ಯಕ್ತವಾದುವು. ಅಕಾಲಿ ಸಮಸ್ಯೆ ಹಿಂಸಾತ್ಮಕ ಸ್ವರೂಪ ತಾಳಿರಲಿಲ್ಲವಾದರೂ ಅದನ್ನು ಮೊದಲೇ ಊಹಿಸಿದ್ದ ಇಂದಿರಾಜಿ ಪಂಜಾಬಿನ ಪರಿಸ್ಥಿತಿಯ ಕುರಿತು ತುಂಬ ಚಿಂತಿತರಾಗಿದ್ದೂ ಗೊತ್ತಾಯಿತು.

ತಮ್ಮ ಪಕ್ಷದೊಳಗಿನ ಲೋಪದೋಷಗಳನ್ನೂ ವಿವರಿಸಿದರು ಇಂದಿರಾ. ಚುನಾವಣಾ ಪ್ರಣಾಳಿಕೆಯಲ್ಲಿನ ಆಶ್ವಾಸನೆಗಳ ಈಡೇರಿಸುವಿಕೆಗೆ ಸರಕಾರಕ್ಕೆ ಸೂಕ್ತ ಬೆಂಬಲವನ್ನು ನೀಡುವಲ್ಲಿ ಪಕ್ಷದ ಸಂಘಟನೆ ವಿಫಲವಾಗುತ್ತಿರುವುದನ್ನೂ ಅವರು ಗುರುತಿಸಿದರು. ಪಕ್ಷವನ್ನು ಪುನಃಶ್ಚೇತನಗೊಳಿಸುವುದು ಮತ್ತು ಜನತಾ ಸರಕಾರದ ಅವಧಿಯಲ್ಲಿ ನಿಂತೇ ಹೋದಂತಿದ್ದ ಆಡಳಿತ ಯಂತ್ರವನ್ನು ಸುಚಾಲಿತಗೊಳಿಸುವುದು ತತ್‌ಕ್ಷಣದ ಕೆಲಸವೆಂಬುದೂ ಅವರ ಮಾತಿನಲ್ಲಿ ವ್ಯಕ್ತವಾಯಿತು.

ನಂತರ ಮಾತು ಅವರ ಸ್ವಂತದ ವಿಷಯದೆಡೆ ತಿರುಗಿತು. ತಮ್ಮಿಬ್ಬರು ಪುತ್ರರ ವ್ಯಕ್ತಿತ್ವವನ್ನು ಅವರು ಮುಚ್ಚುಮರೆಯಿಲ್ಲದೆ ವಿಶ್ಲೇಷಿಸಿದರು. ಸಂಜಯ ಗಾಂಧಿಯ ಮರಣದ ಕುರಿತು ಇಂದಿರಾ ಯಾವ ಭಾವಾವೇಶಕ್ಕೂ ಒಳಗಾಗದೇ, ಮೂರನೆಯ ವ್ಯಕ್ತಿಯೊಬ್ಬ ಹೇಳಬಹುದಾದಂತೆ ವಿವರಿಸಿದ್ದು ನನ್ನನ್ನು ಅಚ್ಚರಿಗೀಡು ಮಾಡಿತು. ಕೆಲವೇ ತಿಂಗಳುಗಳ ಹಿಂದೆ ನಡೆದಂಥ ಸ್ವಂತ ಬದುಕಿನ ಆ ದುರಂತವನ್ನು ಸಂಬಂಧರಹಿತವಾಗಿ ಹೇಳಬೇಕಾದರೆ ಗಟ್ಟಿ ಮನಸ್ಸೇ ಬೇಕು. ರಾಜೀವ ಗಾಂಧಿ ಸ್ವಯಂಪ್ರೇರಣೆಯಿಂದ ಪಕ್ಷದ ಜವಾಬ್ದಾರಿಯನ್ನು ತನ್ನ ಹೆಗಲಿಗೇರಿಸಿಕೊಳ್ಳಲು ಮುಂದಾದುದನ್ನು ಪ್ರಶಂಸಿಸಿದರು. ಕೊನೆಗೆ, ತಾವು ಕೈಗೊಳ್ಳುವ ಎಲ್ಲ ಕೆಲಸಗಳಲ್ಲಿಯೂ ಎಲ್ಲ ಹಂತಗಳಲ್ಲೂ ನಾನು ಆಸಕ್ತಿ ವಹಿಸಬೇಕೆಂಬುದನ್ನು ಹೇಳುತ್ತ, ಕೇವಲ ಆಡಳಿತಾತ್ಮಕ ಅಥವಾ ಆರ್ಥಿಕ-ಸಂಬಂಧಕ್ಕೆ ಮಾತ್ರ ನನ್ನ ಕೆಲಸವನ್ನು ಸೀಮಿತಗೊಳಿಸಿಕೊಳ್ಳಬಾರದೆಂಬುದು ತಮ್ಮ ಇಚ್ಛೆ ಎಂದರು. ಪಕ್ಷದ ಬಗ್ಗೆ, ಆಡಳಿತೆಯ ಬಗ್ಗೆ ಕೊನೆಗೆ ವೈಯಕ್ತಿಕ ವಿಷಯದ ಬಗ್ಗೆಯೂ ಇಂದಿರಾ ಹೇಳಿದ್ದರ ಹಿಂದೆ ಅವರ ಮನದ ಇಂಗಿತವೇನಿತ್ತೆಂಬುದು ನನಗೆ ಅರಿವಾಗದೇ ಇರಲಿಲ್ಲ. ತಮಗೆ ಸಂಬಂಧಿಸಿದ 'ಎಲ್ಲ' ಕ್ಷೇತ್ರಗಳಲ್ಲೂ ನನ್ನನ್ನು ತೊಡಗಿಕೊಳ್ಳುವಂತೆ ಆಕೆ ಮಾಡದೇ ಬಿಡಲಾರರು ಎಂಬುದು ವಿದಿತವಾಯಿತು.

ಇಂದಿರಾಜಿಯದು ಅತ್ಯಂತ ಸಂಕೀರ್ಣ ವ್ಯಕ್ತಿತ್ವ. ಬಹು ಆಯಾಮದ ಇಂಥವರು ಜಗತ್ತಿನಲ್ಲಿ ತೀರ ಅಪರೂಪ. ಹೀಗಾಗಿ ಅವರನ್ನು ಹೀಗೆಯೇ ಎಂದು ವ್ಯಾಖ್ಯಿಸಲು ಸಾಧ್ಯವಾಗದಾದರೂ ನನ್ನ

ಅನುಭವದಲ್ಲಿ ಕಂಡಂತೆ ಅವರ ಕಾರ್ಯವಿಧಾನ, ವಿವಿಧ ಸನ್ನಿವೇಶಗಳಲ್ಲಿ ಅವರು ತಳೆಯುತ್ತಿದ್ದ ನಿಲುವುಗಳೇ ಮೊದಲಾದವುಗಳ ಮೂಲಕ ಇಂದಿರಾರ ಭಿನ್ನ ಚಿತ್ರವೊಂದನ್ನು ಇಲ್ಲಿ ಬಿಡಿಸುವ ಪ್ರಯತ್ನ ಮಾಡುತ್ತಿದ್ದೇನೆ.

ಅವರತ್ತ ನನ್ನನ್ನು ಹೆಚ್ಚೆಚ್ಚು ಆಕರ್ಷಣೆಗೊಳಪಡುವಂತೆ ಮಾಡಿದ್ದು ಇಂದಿರಾರಲ್ಲಿದ್ದ ಆಸಕ್ತಿ ಮತ್ತು ಅಭಿರುಚಿ ವೈವಿಧ್ಯ. ಜನಸಾಮಾನ್ಯಕ್ಕೆ ಹಾಗೂ ದೇಶ-ವಿದೇಶಗಳ ರಾಜಕೀಯ ಕ್ಷೇತ್ರದವರಿಗೆ ಇಂದಿರಾ ಕೇವಲ ಒಬ್ಬ ನುರಿತ ಮುತ್ಸದ್ದಿ, ಅನುಭವಿ ರಾಜಕಾರಣಿ, ಅದ್ವಿತೀಯ ಆಡಳಿತಗಾತಿ. ಆದರೆ ಸಮೀಪದಿಂದ ನೋಡಿಬಲ್ಲವರಿಗೆ ಮಾತ್ರ ಆಕೆಯಲ್ಲಿ ರಾಜಕೀಯಕ್ಕೆ ಎಳ್ಳಷ್ಟು ಸಂಬಂಧವಿರ ಬಹುದಾದ ಅನೇಕ ವಿಷಯಗಳಲ್ಲಿ ಅಪರಿಮಿತ ಆಸಕ್ತಿಗಳಿದ್ದವೆಂಬುದು ತಿಳಿದ ವಿಷಯ. ಹೂವು ಗಳು-ಗಿಡಗಳೆಂದರೆ ಇಂದಿರಾಗೆ ಪಂಚಪ್ರಾಣ. ಅರಣ್ಯ ಮತ್ತು ಮೃಗ ಸಂಕುಲಗಳೆಂದರೆ ಜೀವ. ಪರ್ವತಗಳು-ಪರಿಸರದ ವಿಷಯದಲ್ಲಿ ಇಂದಿರಾ ಪರಿಣಿತೆ. ಕಲೆ-ವಾಸ್ತುಶಿಲ್ಪಗಳವರೆಗೂ ಆಕೆಗೆ ರಾಜಕಾರಣದಷ್ಟೇ ಗಾಢವಾದ ತಿಳುವಳಿಕೆ.

ಅಂಗವಿಕಲರ ಬವಣೆಯನ್ನು ಹೋಗಲಾಡಿಸಿ ಅವರ ಬದುಕನ್ನು ಸುಗಮಗೊಳಿಸಲು, ಅದರಲ್ಲೂ ವಿಶೇಷವಾಗಿ ಅಂಧರ ಬಾಳಿಗೆ ಬೆಳಕು ನೀಡಲು, ಕುಷ್ಠರೋಗವನ್ನು ನಿವಾರಿಸಲು ಇಂದಿರಾರಿಗೆ ಅಸೀಮ ಅವಧಾನ. ಮಕ್ಕಳು-ಮಹಿಳೆಯರ ಕಲ್ಯಾಣ, ಬುಡಕಟ್ಟು ಜನರ ಉತ್ಥಾನಗಳತ್ತಲೂ ಅವರಿಗೆ ಮುಖ್ಯ ಗಮನ. ಅವು ಮೇಲ್ತೋರಿಕೆಯ ಲಕ್ಷ್ಯಗಳಲ್ಲ, ಹೃದಯಸ್ಥ ಭಾವನೆಗಳು. ಅವುಗಳ ಬಗ್ಗೆ ಅವರು ಮಾತಾಡುತ್ತಿದ್ದರೆ ಅವು ಹೃದಯದಾಳದಿಂದ ಪುಟಿದು ಬಂದ, ಅನುಕಂಪೆಯಲ್ಲಿ ಮಿಂದ ಪದಗಳೆಂಬುದು ಗೊತ್ತಾಗಿಬಿಡುತ್ತಿತ್ತು. ತಮ್ಮ ಅವಿಶ್ರಾಂತ ಕಾರ್ಯಭಾರದ ನಡುವೆಯೂ ಇಂದಿರಾ ಆಯಾ ಕಾಳಜಿಗಳಿಗೆ ಸಂಬಂಧಿಸಿದ ವ್ಯಕ್ತಿಗಳನ್ನು ಭೇಟಿಯಾಗಿ ಕಾರ್ಯಪ್ರಗತಿಯನ್ನು ಅರಿತುಕೊಳ್ಳಲು ಅವಕಾಶ ಹುಡುಕುವುದರಲ್ಲಿ ಯಶಸ್ವಿಯಾಗುತ್ತಿದ್ದರು.

ಈ ಮುಖವನ್ನು ಮರೆತು ಕೇವಲ ಆಕೆಯನ್ನು ಟೀಕಿಸುವಲ್ಲಿಯೆ ತೊಡಗಿರುತ್ತಿದ್ದ ವಿರೋಧ ಪಕ್ಷಗಳವರತ್ತ ಇಂದಿರಾ ಎಂದೂ ಕಣ್ಣೆತ್ತಿಯೂ ನೋಡಲಿಲ್ಲ. ತೆಗಳಿಕೆಗಳಿಂದ ತಲೆಯನ್ನೂ ಕೆಡಿಸಿಕೊ ಳ್ಳಲಿಲ್ಲ. ಅವರ ಮೇಲಿನ ಅನೇಕ ಆರೋಪಗಳು-ಟೀಕೆಗಳ ವಿಷಯವಾಗಿ ನಾನೊಮ್ಮೆ, "ಇವನ್ನೆಲ್ಲ ಯಾಕೆ ಅಲ್ಲಗಳೆಯದೆ ಉಳಿದಿದ್ದೀರಿ?" ಎಂದು ಕೇಳಿದೆ; ಅದಕ್ಕೆ ಅವರು ನಸುನಕ್ಕು, "ಹಾಗೆ ಮಾಡುತ್ತ ಕುಳಿತರೆ ಇತರ ಕೆಲಸಗಳತ್ತ ಗಮನ ಹರಿಸಲು ಸಮಯವೇ ಉಳಿಯುವುದಿಲ್ಲ," ಎಂದರು.

'ಅಯರ್ನ್ ಲೇಡಿ' ಮತ್ತು 'ತನ್ನ ಸಂಪುಟದ ಏಕೈಕ ಪುರುಷ'ನೆಂದು ವರ್ಣಿಸಲ್ಪಟ್ಟ ಇಂದಿರಾ ಕೊನೆಯವರೆಗೂ ವಿಚಾರ, ಕೃತಿ ಮತ್ತು ಮನೋಭಾವದಲ್ಲಿ ಶುದ್ಧ ಭಾರತೀಯ ಮಹಿಳೆಯಾಗಿಯೇ ಉಳಿದವರು. ಸ್ತ್ರೀವಾದಿ ಚಳವಳಿಯ ಕೆಲವು ಸಂಗತಿಗಳ ಕುರಿತು ಅವರು ಅಸಮ್ಮತಿ ವ್ಯಕ್ತಪಡಿಸಿದ್ದೂ ಉಂಟು. ಅವಕಾಶ ನೀಡಲ್ಪಟ್ಟರೆ ಸ್ತ್ರೀ ಯಾವುದೇ ಕ್ಷೇತ್ರದಲ್ಲೂ ಪುರುಷನಷ್ಟೇ ಸಮರ್ಥಳಾಗಿ ಕಾರ್ಯ ನಿರ್ವಹಿಸಿ ತೋರಿಸಬಲ್ಲಳೆಂಬುದು ಇಂದಿರಾರ ಪ್ರಾಮಾಣಿಕ ನಂಬಿಕೆ. ಭಾರತೀಯ ಸ್ತ್ರೀಯ ದುರ್ದಶೆಗೆ ಕೇವಲ ಗಂಡಸರು ಕಾರಣರಲ್ಲ; ಹೆಂಗಸರೇ ಇನ್ನೊಬ್ಬ ಹೆಂಗಸಿನ ದುರ್ಗತಿಗೆ-ದುಃಖ-ದುಮ್ಮಾನಕ್ಕೆ ಜವಾಬ್ದಾರರೂ ಆಗಿದ್ದಾರೆಂಬುದು ಇಂದಿರಾರ ಪ್ರತಿಪಾದನೆಯಾಗಿತ್ತು.

## ಒಪ್ಪ-ಓರಣಕ್ಕೆ ಆದ್ಯತೆ

ತಮ್ಮ ಸುತ್ತಮುತ್ತಲಿನ ಪ್ರತಿಯೊಂದೂ ಸುವ್ಯವಸ್ಥಿತವಾಗಿ, ಸುಸ್ಥಾನದಲ್ಲಿ, ಸ್ವಚ್ಛವಾಗಿರಬೇಕೆಂ ಬುದು ಅವರ ಬಯಕೆ. ಅದು ಅವರ ನಿವಾಸಸ್ಥಾನವೇ ಆಗಿರಬಹುದು, ಇಲ್ಲವೇ ಕಚೇರಿಯೇ ಇರಬಹುದು; ಅಲ್ಲೆಲ್ಲ ಒಪ್ಪ-ಓರಣಕ್ಕೆ ಇಂದಿರಾ ಆದ್ಯ ಗಮನವೀಯುತ್ತಿದ್ದರು. ಹೊಂದದ

ಜಾಗದಲ್ಲಿನ ಹೂದಾನಿ, ಸಲ್ಲಗ ಸ್ಥಳದಲ್ಲಿನ ಕುರ್ಚಿ, ಗೋಡೆಯ ಮೇಲೆ ಸೊಟ್ಟಗೆ ನೇತುಬಿದ್ದಿರುವ ಫೋಟೋ, ಟೇಬಲ್ಲಿನ ಮೇಲೆ ಹೇಗೆಂದರೆ ಹಾಗೆ ಎಸೆಯಲ್ಪಟ್ಟ ಪೆನ್ನು-ಪೆನ್ಸಿಲುಗಳು, ಫೈಲು-ಪುಸ್ತಕ-ಮೇಜಿನ ಅಂಚುಗಳಿಗೆ ಅಂಟಿದ ಧೂಳು ಅವರ ಕಣ್ಣಿಗೆ ಬೀಳದೇ ಹೋಗುತ್ತಿರಲಿಲ್ಲ. ಅಂಥದೆಲ್ಲ ಕಂಡಕೂಡಲೇ ಯಾರನ್ನೂ ಕೂಗದೇ, ಯಾರಿಗೂ ಬೈಯದೇ ತಾವೇ ಅದನ್ನೆಲ್ಲ ಸರಿಪಡಿಸಲು ಮುಂದಾಗುತ್ತಿದ್ದರು.

ನಾನೊಮ್ಮೆ ಪಾರ್ಲಿಮೆಂಟಿನ ಅವರ ಕಚೇರಿಯನ್ನು ಪ್ರವೇಶಿಸುತ್ತಿದ್ದಂತೆಯೇ ಅವಾಕ್ಕಾದೆ. ಎಂದಿನಂತೆ ಮುಂಚಾನೆಯ ಭೇಟಿಗಾಗಿ ಹೋದವ ನಾನು. ಇಂದಿರಾ ತಮ್ಮ ಕುರ್ಚಿಯಲ್ಲಿರಲಿಲ್ಲ. ಸುತ್ತ ಕಣ್ಣಾಡಿಸಿದರೆ ಒಂದೆಡೆ ಅವರು ಹಸಿ ಟವೆಲ್ಲೊಂದರಿಂದ ಹೂದಾನಿಗಳನ್ನೂ, ಚೆಂದಕ್ಕಿಟ್ಟ ಗಿಡಗಳ ಎಲೆಗಳನ್ನೂ- ಅದು ಹಸುಗೂಸಿನ ಮೈಯೇನೊ ಎಂಬಷ್ಟು ಎಚ್ಚರಿಕೆ-ಪ್ರೀತಿಯಿಂದ ಒರೆಸುತ್ತಲಿದ್ದರು. ಭಾರತದ ಪ್ರಧಾನ ಮಂತ್ರಿ ಒಂದು ಕೈಯಲ್ಲಿ ಒದ್ದೆಯಾದ ಟವೆಲ್ಲು, ಇನ್ನೊಂದು ಕೈಯಲ್ಲಿ ನೀರು ತುಂಬಿದ ಪಾತ್ರ ಹಿಡಿದು ಒಂದಾದ ಮೇಲೊಂದು ಗಿಡದೆಡೆ ಸಾಗುತ್ತಲೇ ಇದ್ದರು ! ಕೆಲವು ನಿಮಿಷಗಳ ಕಾಲ ಅದು ಹಾಗೆಯೇ ಮುಂದುವರಿಯಿತು. ಆದರೆ ಆ ಕೆಲಸವನ್ನು ಪೂರ್ತಿ ಮುಗಿಸುವವರೆಗೆ ನನ್ನನ್ನು ಸುಮ್ಮನಿರಗೊಡದೇ ಆಡಳಿತ ಸಂಬಂಧದ ವಿಷಯದ ಚರ್ಚೆಗಳೆದರು. ಇತ್ತ ಕಿವಿ-ಅತ್ತ ಕಣ್ಣು ನೆಟ್ಟು ಏಕಕಾಲಕ್ಕೆ ಎರಡೆರಡು ಕೆಲಸಗಳನ್ನು ನಿರ್ವಹಿಸುವ ಅವರ ಸಾಮರ್ಥ್ಯಕ್ಕೆ ನಾನು ತಲೆಬಾಗಿದೆ.

## ವಿಶಿಷ್ಟ ಆತಿಥ್ಯ

ಆತಿಥ್ಯದ ವಿಷಯದಲ್ಲೂ ಇಂದಿರಾರಿಗೆ ಅವರದೇ ಆದ ವೈಶಿಷ್ಟ್ಯವಿತ್ತು. ತಾವು ಏರ್ಪಡಿಸುತ್ತಿದ್ದ ಸ್ವಾಗತ ಸಮಾರಂಭ ಮತ್ತು ಭೋಜನ ಕೂಟಗಳಲ್ಲಿ ತಟ್ಟೆಯಲ್ಲಿ ಏನೇನಿರಬೇಕು, ಆಸನ ವ್ಯವಸ್ಥೆ ಹೇಗಿರಬೇಕು ಎಂಬುದನ್ನೆಲ್ಲ ಸ್ವತಃ ಆಕೆಯೇ ನಿರ್ಧರಿಸಬೇಕು. ಆಗಮಿಸಿದ ಗಣ್ಯರೊಂದಿಗೆ ಭೋಜನ ಸಮಯದಲ್ಲಿ ಉಪಯುಕ್ತ ಮಾತುಕತೆಗೆ ತೊಡಗಲು ಅನುವಾಗುವಂತೆ ಒಮ್ಮೊಮ್ಮೆ ಶಿಷ್ಟಾಚಾರಗಳನ್ನೆಲ್ಲ ಬದಿಗೊತ್ತಿ ಆಸನ ವ್ಯವಸ್ಥೆಯನ್ನೂ ಮಾಡಬೇಕಾಗುತ್ತಿತ್ತು. ಇಂಥ ಭೋಜನಕೂಟಗಳಲ್ಲಿ ಸಹಜವಾಗಿ ಕೆಲವು ಸಂಪುಟ ಸದಸ್ಯರು ಮತ್ತು ಉಚ್ಚ ಅಧಿಕಾರಿಗಳು ಇರುತ್ತಿದ್ದರು. ಆದರೆ ಅವರಲ್ಲಿ ಬಹುತೇಕರಿಗೆ ಕೇವಲ ಭಾರತೀಯರೊಂದಿಗೆ ಮಾತ್ರ, ಅಂದರೆ ತಮ್ಮ ತಮ್ಮೊಳಗೇ ಮಾತಾಡಿಕೊಳ್ಳುವ ಚಟವಿತ್ತು. ಪಕ್ಕದಲ್ಲೇ ವಿದೇಶೀ ಅಧಿಕಾರಿ ಕೂತಿದ್ದರೂ ತಪ್ಪಿಯೂ ಅವರೊಂದಿಗೆ ಸಂಭಾಷಿಸುವ ಗೋಜಿಗೆ ಹೋಗದವರೂ ಅಲ್ಲಿರುತ್ತಿದ್ದರು. ಇನ್ನು ಕೆಲವು ಭಾರತೀಯ ಮಂತ್ರಿ- ಅಧಿಕಾರಿಗಳಂತೂ ಮೌನವೇ ಒಳಿತೆಂದು ಕೈಗೂ-ಬಾಯಿಗೂ ಕೆಲಸ ಕೊಟ್ಟುಕೊಂಡಿರುತ್ತಿದ್ದುದುಂಟು. ಇಂದಿರಾ ಇಂಥವರನ್ನೆಲ್ಲ ಸೂಕ್ಷ್ಮವಾಗಿ ಗಮನಿಸಿರುತ್ತಿದ್ದರಷ್ಟೇ ಅಲ್ಲ, ಅವರಿಗೆ ಇಂಥ ಭೋಜನಕೂಟಗಳ ಮಹತ್ವ ಅರಿವಾಗುವಂತೆ ಮಾಡಿ ಮುಂದಿನ ಸಲ ಅವರು ತಮ್ಮನ್ನು ತಿದ್ದಿಕೊಳ್ಳುವಂತೆ ಮಾಡಲು ಹಿಂದೆ ಮುಂದೆ ನೋಡುತ್ತಿರಲಿಲ್ಲ. ಇಂದಿರಾ ಭೋಜನಕೂಟಗಳಲ್ಲಿ ಸಂಭಾಷಣೆಗೆ ತೊಡಗುತ್ತಿದ್ದ ರೀತಿ ಅನನ್ಯವಾದದ್ದು. ಸಮಯಕ್ಕೆ ತಕ್ಕ ಮಾತುಕತೆ, ಅದರಲ್ಲಿ ಒಂದಷ್ಟು ಹಳೆಯ ನೆನಪುಗಳು, ಜತೆಗೆ ಆಯಾ ವಿದೇಶೀ ಗಣ್ಯರ ಭೇಟಿಯ ಉದ್ದೇಶಕ್ಕೆ ಸಂಬಂಧಿಸಿದ ವಿಷಯ ಹೀಗೆ ಆತ್ಮೀಯತೆಯ ಸುಗಂಧವನ್ನು ಅಲ್ಲೆಲ್ಲ ಇಡುಗಿಸಿಬಿಡುತ್ತಿದ್ದರು. ಆಗಮಿಸಿದ ಅತಿಥಿ ಖಂಡಿತಕ್ಕೂ ಖುಷಿಗೊಳ್ಳುತ್ತಿದ್ದ. ಹೀಗೆ ಮಾತು ಮುಂದುವರಿಸುತ್ತಲೇ ಇಂದಿರಾ ಯಾರ ತಟ್ಟೆಗೆ ಏನು ಬೇಕು ಎಂಬುದರತ್ತಲೂ ಕಣ್ಣು ನೆಟ್ಟಿರುತ್ತಿದ್ದರು. ಎಲ್ಲೂ ಯಾವುದೂ ಕೊರತೆಯೆನಿಸಿರಬಾರದೆಂಬುದೇ ಅವರ ಮುಖ್ಯ ಕಾಳಜಿ. ಹಾಗೇನಾದರೂ ಕೊರತೆಯೆನಿಸುತ್ತಿದೆ ಎಂಬುದು ತಮ್ಮ ಗಮನಕ್ಕೆ ಬಂದಿತೋ-ವ್ಯವಸ್ಥೆಗೆ ನಿಂತವನ ಅವಸ್ಥೆ ಬೇಡವೇ ಬೇಡ.

ಯಾವುದಾದರೂ ಪದಾರ್ಥವನ್ನು ವಿದೇಶಿ ಗಣ್ಯ ಬಾಯಿ ಚಪ್ಪರಿಸಿ ತಿನ್ನುತ್ತ ಅದು ಏನು ಎಂಬ ಜಿಜ್ಞಾಸೆಗೆ ಒಳಗಾಗಿದ್ದು ಇಂದಿರಾಗೆ ಗೊತ್ತಾದರಂತೂ ಮುಗಿದೇ ಹೋಯಿತು. ಅದು ಏನು, ಭಾರತದ ಯಾವ ಭಾಗದಲ್ಲಿ ಅದು ಪ್ರಸಿದ್ಧ, ಆಯಾ ಪ್ರದೇಶಗಳಲ್ಲಿ ಅದನ್ನು ಹೇಗೆ ಭಿನ್ನ ರುಚಿಯಿಂದೊಡಗೂಡುವಂತೆ ತಯಾರಿಸಲಾಗುತ್ತದೆ ಎಂಬ ವಿಷಯವಾಗಿ ಒಂದು ಸಣ್ಣ ಉಪನ್ಯಾಸವನ್ನೇ ನೀಡಿಬಿಡುತ್ತಿದ್ದರು. ಇಷ್ಟೆಲ್ಲ ಆದರೂ ಸ್ವತಃ ಇಂದಿರಾ ಮಿತಾಹಾರಿ. ಏನಿದ್ದರೂ ಆಕೆಗೆ ಒಂದು ಗ್ಲಾಸು ಹಣ್ಣಿನ ರಸ ಬೇಕು. ವಿದೇಶ ಪ್ರವಾಸ ಸಂದರ್ಭಗಳಲ್ಲಿ ಹಣ್ಣಿನ ರಸವೇ ಅಪರೂಪ. ಅಲ್ಲಿ ಮದ್ಯದ ಗ್ಲಾಸುಗಳೇ ರಾರಾಜಿಸುತ್ತಿದ್ದವು. ಇಂದಿರಾ ಕೂಟದ ಸಭ್ಯತೆಯನ್ನನುಲಕ್ಷಿಸಿ, ತಮ್ಮೆದುರಿನ ಮದ್ಯದ ಗ್ಲಾಸನ್ನೆತ್ತಿ ಸುಮ್ಮನೇ ತುಟಿಗೆ ತಗುಲಿಸಿದಂತೆ ಮಾಡಿ ಕೆಳಗಿಟ್ಟು ಬಿಡುತ್ತಿದ್ದರು. ತಮ್ಮೊಂದಿಗೆ ಬರುವ ಭಾರತೀಯ ಅಧಿಕಾರಿಗಳು ಮದ್ಯ ಸೇವಿಸುವುದರ ಬಗ್ಗೆ ಎಂದೂ ಆಕ್ಷೇಪಿಸಿದವರಲ್ಲ ಇಂದಿರಾ. ಆದರೆ ಅತಿ ಕುಡಿತದ ಚಟವಿದ್ದವರನ್ನು ಮಾತ್ರ ಅವರು ಸಹಿಸುತ್ತಿರಲಿಲ್ಲ. ಖಾರದ ಪದಾರ್ಥಗಳು, ಉಪ್ಪಿನಕಾಯಿಗಳು ಅವರಿಗೆ ಇಷ್ಟದವಲ್ಲ. ಆದರೆ ನಾನು ಅವನ್ನು ತುಂಬ ಇಷ್ಟಪಡುತ್ತೇನೆಂಬುದನ್ನು ಅದಾವಾಗಲೋ ಗುರುತಿಸಿದ್ದ ಇಂದಿರಾ ತಾವು ಏರ್ಪಡಿಸುವ ಭೋಜನಕೂಟಗಳಲ್ಲಿ ನನ್ನ ಟೇಬಲ್ಲಿಗೆ ಒಂದು ಉಪ್ಪಿನಕಾಯಿಯ ಬಾಟಲಿಯನ್ನೋ, ಖಾರದ ಸಾಸ್ ಬಾಟಲಿಯನ್ನೋ ಇಡಲೇಬೇಕೆಂದು ಬಡಿಸುವಾತನಿಗೆ ತಾಕೀತು ಮಾಡಿರುತ್ತಿದ್ದರು. ದಕ್ಷಿಣ ಭಾರತದವರಿಗೆ ಅವೆರಡೂ ತುಂಬ ಪ್ರೀತಿಯವೆಂದು ಅರಿತಿದ್ದ ಅವರು, ಪಿ.ವಿ.ನರಸಿಂಹರಾಯರು ಮತ್ತು ಆರ್.ವೆಂಕಟರಾಮನ್ನರು ಕೂಟದಲ್ಲಿ ಇರಬೇಕಾದಾಗಲೆಲ್ಲ ಅವರ ಟೇಬಲ್ಲುಗಳ ಮೇಲೂ ಉಪ್ಪಿನಕಾಯಿ ಬಾಟಲಿಯಿರುವಂತೆ ನೋಡಿಕೊಳ್ಳುತ್ತಿದ್ದರು.

ತಮ್ಮೊಂದಿಗೆ ವಿದೇಶ ಪ್ರವಾಸಕ್ಕೆ ಹೊರಟ ಪ್ರತಿಯೊಬ್ಬನ ಬೇಕು-ಬೇಡಗಳೂ ಅವರಿಗೆ ಗೊತ್ತು. ಕೊಲ್ಲಿ ರಾಷ್ಟ್ರವೊಂದಕ್ಕೆ ಹೋಗಿದ್ದಾಗ ಭೋಜನಕೂಟದಲ್ಲಿ ಇಂದಿರಾ, ಸಮೀಪವೇ ಕೂತಿದ್ದ ನನಗೆ ಹಿಂದಿಯಲ್ಲಿ ಹೇಳಿದರು- "ಪಾಪ, ಶಾರದಾ ಪ್ರಸಾದಜೀಗೆ ತಿನ್ನಲು ಏನಾದರೂ ಸಿಗುವುದೋ ಇಲ್ಲವೋ..." ಎಂದು. ನಾನು ಶಾರದಾ ಪ್ರಸಾದರತ್ತ ನೋಡಿದೆ. ಅವರ ಮುಖ ಹೊಟ್ಟೆ ತುಂಬಿದವರಂತಿತ್ತು. ಕೇವಲ ಮಾಂಸಾಹಾರಿ ಭೋಜನ ಅಲ್ಲಿತ್ತು. ಶಾರದಾ ಪ್ರಸಾದರೋ ಪಕ್ಕಾ ಸಸ್ಯಾಹಾರಿ. ಅವರಿಗೆ ಹೊಟ್ಟೆ ತುಂಬುವಷ್ಟು ಅನ್ನ-ಮೊಸರು ಇದ್ದದ್ದಾಯಿತು. ಬೇರೇನೂ ಬೇಡ. ತಮಗೆ ಅದು ಸಿಗಲಿಲ್ಲವೆಂದು ಗೊಣಗುವ ವ್ಯಕ್ತಿಯೂ ಅಲ್ಲ ಶಾರದಾ ಪ್ರಸಾದ್.

## ಹೊತ್ತು-ಗೊತ್ತಿಲ್ಲದ ದುಡಿಮೆ

ಇಂದಿರಾಜೀಗೆ ಕಚೇರಿಯ ಕೆಲಸಕ್ಕೆ ಇಂತಿಷ್ಟೇ ಸಮಯವೆಂಬ ಮಿತಿಯೇ ಇರಲಿಲ್ಲ. ದಿಲ್ಲಿಯಲ್ಲಿದ್ದಾಗಲೆಲ್ಲ ಸೌಥ್ ಬ್ಲಾಕ್‌ನ ತಮ್ಮ ಕಚೇರಿಗೆ ಮುಂಜಾನೆ ೧೦ ರಿಂದ ೧೦.೩೦ರೊಳಗೆ ಬಂದು ಬಿಡುತ್ತಿದ್ದರು. ಮಧ್ಯಾಹ್ನ ೧.೩೦ ರಿಂದ ೨ರ ಹೊತ್ತಿಗೆ ಮನೆಗೆ ಊಟಕ್ಕೆ ತೆರಳಿ ಪುನಃ ೩ ಇಲ್ಲವೆ ೩.೩೦ಕ್ಕೆ ಕಚೇರಿಗೆ ಹಿಂತಿರುಗುತ್ತಿದ್ದರು. ಆಮೇಲೆ ಸಂಜೆ ಏಳಾದರೂ ಆದೀತು, ರಾತ್ರಿ ಒಂಭತ್ತೂ ಹೊಡೆದೀತು. ಕೆಲಸ ಮುಗಿಸಿಯೇ ಮನೆಗೆ ಹೋಗುವ ಹಟ ಅವರಿಗೆ. ಸಂಸತ್ ಸಭೆಗಳು ನಡೆಯುವ ದಿನಗಳಲ್ಲಿ ಸೌಥ್ ಬ್ಲಾಕ್‌ನಿಂದ ಪಾರ್ಲಿಮೆಂಟ್ ಹೌಸಿಗೆ ಅವರ ಕಚೇರಿ ಸ್ಥಳಾಂತರಗೊಳ್ಳುತ್ತಿತ್ತು. ದಿನದ ಕಲಾಪದ ನಂತರ ಸಚಿವ ಸಂಪುಟದ, ಸಂಪುಟ ಸಮಿತಿಗಳ ಸಭೆಗಳು. ಅತ್ಯಂತ ತುರ್ತು ಸಭೆಗಳು ಅವಶ್ಯವೆನಿಸಿದರೆ ಅಲ್ಪಾವಧಿಯಲ್ಲೇ ಅದರ ವ್ಯವಸ್ಥೆಯಾಗಬೇಕಾಗುತ್ತಿತ್ತು. ಇಂಥ ಸಂದರ್ಭಗಳಲ್ಲಿ ರಾತ್ರಿ ಮೀರುತ್ತಿತ್ತು.

ಅತಿ ಜರೂರು ಸಂದರ್ಭಗಳಲ್ಲಿ ರಾತ್ರಿ ಎಷ್ಟೇ ವೇಳೆಯಾಗಿದ್ದರೂ ಅವರು ನನ್ನ ಮನೆಗೆ ಫೋನು

ಮಾಡಿ ವಿಷಯ ಪ್ರಸ್ತಾಪಿಸುವುದೂ ಇತ್ತು. ಕೆಲವೊಮ್ಮೆ ಅಪರಾತ್ರಿಯಲ್ಲೂ ಅವರ ಮನೆಗೆ ನಾನು ಹೋಗಬೇಕಾಗುತ್ತಿತ್ತು. ಆದರೆ, ರವಿವಾರಗಳಂದು ಹಾಗೇನಾದರೂ ನಾನು ಅವರ ಮನಗೆ ಹೋಗುವುದು ಅವಶ್ಯವೆಂದಾದರೆ ತಮ್ಮ ಆಪ್ತ ಕಾರ್ಯದರ್ಶಿಗೆ ನಾನು ಚರ್ಚ್‌ಗೆ ಹೋಗಬೇಕಾಗಿದೆಯೋ ಹೇಗೆಂಬುದನ್ನು ಮೊದಲು ವಿಚಾರಿಸಿ ನಂತರ ವಿಷಯ ತಿಳಿಸುವಂತೆ ಹೇಳಿರುತ್ತಿದ್ದರು. ಯಾವುದೇ ವಿಷಯವಾಗಿರಲಿ, ಆ ಕುರಿತ ತಮ್ಮ ದೃಷ್ಟಿಕೋನವೇನೇ ಇರಲಿ, ನನಗೆ ಮಾತ್ರ ಅನಿಸಿದ್ದನ್ನು ಅನಿಸಿದ ಹಾಗೆಯೇ ಹೇಳುವ ಸ್ವಾತಂತ್ರ್ಯವನ್ನಿತ್ತಿದ್ದರು ಇಂದಿರಾ. ಕೆಲವೊಮ್ಮೆ ಅವರೊಂದಿಗೆ ನಾನು ವಾದಿಸುತ್ತಿದ್ದೆ ಕೂಡ. ವಾದಿಸಿದೆನೆಂದಾಗಲಿ, ನನಗನ್ನಿಸಿದ್ದನ್ನು ಅನ್ನಿಸಿದ ಹಾಗೆ ಹೇಳಿಬಿಟ್ಟೆನೆಂದಾಗಲಿ ಅವರೆಂದೂ ನನ್ನನ್ನು ತಪ್ಪಾಗಿ ಭಾವಿಸಲಿಲ್ಲ. ಮೊದಮೊದಲು ಏನೇ ಹೇಳಬೇಕಾದರೂ, "ಕ್ಷಮಿಸಿ ಮೆಡಂ.." ಎಂದು ಶುರುಮಾಡಿ ನಾನು ಹೇಳಬೇಕಾದುದೇನು ಎಂದು ಸ್ಪಷ್ಟಪಡಿಸಲು ಯತ್ನಿಸುತ್ತಿದ್ದೆ. ಆದರೆ ಅವರು, "ಕ್ಷಮಿಸುವುದೇನು ಬಂತು ? ನಿಮಗೆ ಏನು ಹೇಳಬೇಕೆನಿಸಿದೆಯೋ ಅದನ್ನೆಲ್ಲ ಹೇಳಿಬಿಡಿ," ಎಂದುಬಿಡುತ್ತಿದ್ದರು. ಹೀಗೆ ಹತ್ತಾರು ಬಾರಿ ಹೇಳಿಸಿಕೊಂಡಾದ ಮೇಲೆ ನಾನು "ಕ್ಷಮಿಸಿ ಮೆಡಂ" ಎಂದು ಪ್ರಾರಂಭಿಸುವುದನ್ನು ಕೈ ಬಿಟ್ಟೆ. ನನ್ನ ಅಭಿಪ್ರಾಯಗಳನ್ನು ಕೆಲವೊಮ್ಮೆ ಒಪ್ಪುತ್ತಿದ್ದರು; ಕೆಲವೊಮ್ಮೆ "ಆಂಶಿಕವಾಗಿ ಸರಿ," ಎನ್ನುತ್ತಿದ್ದರು; ಇನ್ನು ಕೆಲವೊಮ್ಮೆ ತಮ್ಮ ಅಭಿಪ್ರಾಯವೇ ಸರಿ ಎಂದು ಬಿಂಬಿಸಿ ತೋರಿಸುತ್ತಿದ್ದರು.

ಸಭೆಗಳಲ್ಲಿದ್ದಾಗ ಇಂದಿರಾಜಿ ಒಂದು ಸಣ್ಣ ಚೀಟಿಯಲ್ಲಿ ನಿಶ್ಚಿತ ವಿಷಯ ಸಂಬಂಧದಲ್ಲಿ ನೆನಪಾದ ನಿರ್ದೇಶನಗಳನ್ನು ಬರೆದು ನನಗೆ ರವಾನಿಸುತ್ತಿದ್ದರು. ಇನ್ನು ಕೆಲವೊಮ್ಮೆ ಕೆಲ ಮಾಹಿತಿಗಳನ್ನು ಬಯಸಿ ಅಂಥ ಚೀಟಿಗಳೂ ಅವರಿಂದ ಬರುತ್ತಿದ್ದವು. ನಾನು ನನ್ನ ಕಚೇರಿಯಲ್ಲಿದ್ದಾಗ ಕೂಡ ಅತ್ಯಂತ ಗೌಪ್ಯ ಹಾಗೂ ಸೂಕ್ಷ್ಮ ಸಂಗತಿಗಳ ಕುರಿತಾದ ಆದೇಶಗಳು, ಮಾರ್ಗದರ್ಶಿ ಸೂತ್ರಗಳು ಲಕೋಟೆಯಲ್ಲಿಡಲ್ಪಟ್ಟು ಅವರ ಸಮಕ್ಷಮದಲ್ಲಿ ಮೊಹರುಬಂದಾಗಿ ನನಗೆ ಕಳಿಸಲ್ಪಡುತ್ತಿದ್ದವು. ಆ ಚೀಟಿಗಳಲ್ಲಿ "ಓದಿದ ಮೇಲೆ ಹರಿದು ಹಾಕಿ" ಎಂಬುದಾಗಿಯೂ ಆಕೆ ಬರೆಯುತ್ತಿದ್ದುದುಂಟು. ಗಮನಿಸಿಯಾದ ಮೇಲೆ ಅಂಥ ಚೀಟಿಗಳು ಚೂರು ಚೂರಾಗಿ ನನ್ನ ಕುರ್ಚಿಯ ಹಿಂದಿನ ಕಸದ ಬುಟ್ಟಿಯಲ್ಲಿ ಬಿದ್ದುಕೊಳ್ಳುತ್ತಿದ್ದವು. ಕೆಲವು ಮಹತ್ವದ ಸಭೆಗಳಲ್ಲಿ ಅವರು ಹೇಳಲು ಮರೆತ, ಉಲ್ಲೇಖಿಸಲೇಬೇಕಾದ ಮಹತ್ವದ ವಿಷಯಗಳನ್ನು ಸಂಕ್ಷಿಪ್ತವಾಗಿ ಗೀಚಿದ ಚೀಟಿಗಳನ್ನು ಪ್ರಧಾನಿಗೆ ತಲಪಿಸುತ್ತಿದ್ದೆ. ಅವರೊಟ್ಟಿಗೆ ಕೆಲಸ ಮಾಡುತ್ತ ನಾನು ಒಂದು ವಿಶಿಷ್ಟ ಸಂಪರ್ಕ ತಂತ್ರವನ್ನೇ ರೂಢಿಸಿಕೊಂಡು ಬಿಟ್ಟೆ. ಅವರ ಮುಖಭಾವ, ಕಣ್ಸನ್ನೆಗಳ ಮೂಲಕವೇ ಅವರಿಗೇನು ಮಾಹಿತಿ ಬೇಕು ಎಂಬುದನ್ನು ಅರಿಯುವ ಸೂಕ್ಷ್ಮತೆಯನ್ನೂ ಬೆಳೆಸಿಕೊಂಡೆ.

## ಮಿತವಾದ ಪದ ಬಳಕೆ

ಇಂದಿರಾಜಿ ಮಾಡಬೇಕಾದ ಭಾಷಣಗಳ ಹಾಗೂ ನೀಡಬೇಕಾದ ಹೇಳಿಕೆಗಳ ಕರಡು ಪ್ರತಿಗಳಿಗೆ ಅವರಿಂದ ಒಪ್ಪಿಗೆ ಪಡೆಯುವುದೆಂದರೆ ಪ್ರಧಾನಿ ಕಚೇರಿಯ ಹಿರಿಯ ಅಧಿಕಾರಿಗಳ ಪಾಲಿಗೆ ಕಷ್ಟಸಾಧ್ಯದ ಕೆಲಸ. ಶಾರದಾ ಪ್ರಸಾದರ ಜವಾಬ್ದಾರಿ ಅದು. ಇಂಗ್ಲೀಷ್ ಭಾಷೆಯ ಮಟ್ಟಿಗೆ ಹೇಳಬೇಕೆಂದರೆ ಇಂದಿರಾಜಿಗೆ ಅದರಲ್ಲಿ ಪರಿಪೂರ್ಣತೆಯಿತ್ತಷ್ಟೇ ಅಲ್ಲ, ಪದಬಳಕೆಯಲ್ಲಿ ಅತಿ ಮಿತವಾಗಿರಬೇಕಾದ್ದು ಮುಖ್ಯವೆಂಬ ನಂಬಿಕೆಯೂ ಇತ್ತು. ಅಲಂಕಾರಿಕ ಪದಪುಂಜಗಳಾಗಲಿ, ಭಾವೋತ್ತೇಜಕ ವಾಕ್ಯಸರಣಿಗಳಾಗಲಿ ಆ ಕರಡು ಪ್ರತಿಗಳಲ್ಲಿದ್ದರೆ ಇಂದಿರಾ ಅವನ್ನೆಲ್ಲ ನಿರ್ದಯವಾಗಿ ಹೊಡೆದುಹಾಕಿ, ನೇರವಾದ-ಸರಳವಾದ-ಸಣ್ಣ ಸಣ್ಣ ವಾಕ್ಯಗಳಲ್ಲಿ ಹೇಳಬೇಕಾದುದನ್ನು ಪುನರ್ಲೇಖಿಸಿಬಿಡುತ್ತಿದ್ದರು. ಇದರಿಂದ ಭಾಷಣದ ಪರಿಣಾಮ ನಷ್ಟವಾಗುತ್ತದೆಂಬ ಅಂಜಿಕೆ, ಸಂಶಯ

ನಮಗಿದ್ದರೂ ಇಂದಿರಾಜಿ ತಾವು ತಮ್ಮದೇ ಶೈಲಿ-ಭಾಷೆಗೆ ಪ್ರಾಮುಖ್ಯವೀಯುವುದು ಮುಖ್ಯ ಎನ್ನುತ್ತಿದ್ದರು. ಶಾರದಾ ಪ್ರಸಾದ್ ಒಮ್ಮೊಮ್ಮೆ ಇಂಥ ಕರಡು ರೂಪಿಸುವಲ್ಲಿ ನನ್ನ ನೆರವು ಪಡೆಯುತ್ತಿದ್ದರು. ಇನ್ನು ಕೆಲವೊಮ್ಮೆ ನಮ್ಮಿಬ್ಬರನ್ನೂ ಪ್ರಧಾನಿಯೇ ಈ ಕೆಲಸಕ್ಕಾಗಿ ಕರೆಯುತ್ತಿದ್ದರು. ಪುನರ್ಲೇಖನ, ಪರಿಷ್ಕರಣ ಕಾರ್ಯಗಳು ತುಂಬ ಶ್ರಮದಾಯಕ. ಅಷ್ಟೇ ಸಮಯಾವಕಾಶವನ್ನೂ ಬಯಸುವಂಥವು. ಒಮ್ಮೊಮ್ಮೆ ಪ್ರಧಾನಿ ಇಂಥದಕ್ಕೆಲ್ಲ ಸುಮ್ಮನೇ ಕಾಲಹರಣ ಮಾಡುತ್ತಾರಲ್ಲ ಎಂದುಕೊಳ್ಳುತ್ತಿದ್ದೆ. ಅವರು ಅಷ್ಟು ತೊಂದರೆ ತೆಗೆದುಕೊಳ್ಳಬೇಕಾದ ಅವಶ್ಯಕತೆಯೂ ಇಲ್ಲವೆಂದು ಭಾವಿಸುತ್ತಿದ್ದೆ. ಶಾರದಾಪ್ರಸಾದ್ ಪ್ರಧಾನಿಯ ಭಾಷಣದ ಶೈಲಿ, ಜಾಡು ಅರಿತವರು. ತುಂಬ ಎಚ್ಚರಿಕೆಯಿಂದಲೇ ಕರಡುಗಳನ್ನು ರೂಪಿಸಿರುತ್ತಿದ್ದರು. ಆದರೂ ಇಂದಿರಾಜಿ ಅವನ್ನು ತಿದ್ದಿ ಒಪ್ಪಕೊಟ್ಟು ತಮ್ಮ ಛಾಪು ಒತ್ತದೇ ಬಿಡುತ್ತಿರಲಿಲ್ಲ. ಅತಿ ಮಹತ್ವದ ವಿಷಯಗಳ ಕರಡು ಪ್ರತಿಗಳಿದ್ದರೆ ಈ ಪರಿಷ್ಕರಣೆ ಒಂದೇ ಸಲಕ್ಕೆ ಮುಗಿಯುತ್ತಿರಲಿಲ್ಲ. ಕನಿಷ್ಠ ಎರಡು-ಮೂರು ಸಲವಾದರೂ ಪ್ರಧಾನಿ ಅವುಗಳನ್ನು ತಿದ್ದಿ ತೀಡಿರುತ್ತಿದ್ದರು. ಅಷ್ಟಾದ ಮೇಲೆಯೇ ಅದು ಒಪ್ಪಿತವಾಗಿದೆ ಎಂದರ್ಥ. ಒಂದೊಂದು ಕರಡು ಪ್ರತಿಯ ಬಗೆಗೂ ಅವರಿಗೆ ಅದೆಂಥಾ ಎಚ್ಚರಿಕೆ ಅನ್ನುತ್ತೀರಿ. ಪ್ರತಿ ವಾಕ್ಯವನ್ನೂ ಗಮನವಿಟ್ಟು ಓದಿ, ಮತ್ತೆ ಮತ್ತೆ ವಿಚಾರಮಾಡಿ, ಬಳಸಿದ ಪದದ ಔಚಿತ್ಯದ ಕುರಿತು, ಉದಾಹರಿಸಲ್ಪಟ್ಟ ವಿಷಯದ ಕುರಿತು, ತೂಗಿ ತೂಗಿ ಹಾಕಿದ ನುಡಿಗಟ್ಟಿನ ಕುರಿತು, ಅದರ ಬದಲು ಅದಕ್ಕಿಂತ ಉತ್ತಮವೆನ್ನಬಹುದಾದ ನುಡಿಗಟ್ಟು ಯಾವುದಿದ್ದೀತೆಂದು ಚರ್ಚಿಸಿ, ಅಂಥದು ದೊರೆತರೆ ಅದನ್ನು ಹೇಗೆ ಇಲ್ಲಿ ಅಳವಡಿಸಬೇಕೆಂಬುದರ ಕುರಿತು, ಪುನರಾವರ್ತನೆಯಾಗಿದೆ ಎಂದು ಕಂಡು ಬಂದರೆ ಅಂಥ ವಿಚಾರ-ವಾಕ್ಯವನ್ನು ಕತ್ತರಿಸಿ ಅಲ್ಲಿ ಬೇರೊಂದು ಸೂಕ್ತ ವಿಚಾರವನ್ನು ಸೇರಿಸುವುದರ ಕುರಿತು ಹೇಳುತ್ತಲೇ ಹೋಗುತ್ತಿದ್ದರು ಇಂದಿರಾ. ಇಷ್ಟೆಲ್ಲ ಸಂಸ್ಕರಣೆಯ ನಂತರ ಆ ಭಾಷಣ ಇಲ್ಲವೆ ಹೇಳಿಕೆ 'ಇಂದಿರಾತನ'ವನ್ನು ಪಡೆಯುತ್ತಿತ್ತು. ಅದೆಂಥ ಒತ್ತಡವೇ ಇದ್ದರೂ ಈ 'ಇಂದಿರಾತನ'ವನ್ನು ತಂದುಕೊಡಲು ಎಷ್ಟು ಹೊತ್ತಾದರೂ ಸರಿ ಬೇಸರವರಿಯದೇ ಕುಳಿತುಬಿಡುವುದು ಅವರ ಜಾಯಮಾನ. ಅದು ಒಂದು ರೀತಿಯಲ್ಲಿ ಆಕೆಗೆ ಪ್ರಿಯವಾದ ಸಂಗತಿ ಎಂಬುದು ನಮಗೆ ಗೊತ್ತಾಯಿತು. ಇಂಥ ಕೆಲಸದಲ್ಲಿಯೇ ಇಂದಿರಾ ಉಳಿದ ತಲೆಚಿಟ್ಟು ಹಿಡಿಸುವ ಕೆಲಸಗಳಿಂದ ವಿರಾಮ ಕಂಡುಕೊಳ್ಳುತ್ತಿದ್ದರೇನೋ. ಆದರೆ ಇಂಗ್ಲೀಷಿನಲ್ಲಿ ರೂಪಿಸಲ್ಪಟ್ಟ ಕರಡುಗಳನ್ನು ಹಿಂದಿಗೆ ಇಳಿಸುವುದು ಅವರಿಗೆ ನಿಜಕ್ಕೂ ಶ್ರಮದಾಯಕವೆನಿಸುತ್ತಿತ್ತು. ವೇದಿಕೆಯ ಮೇಲೆ ಅಯತ್ನವಾಗಿ ಆಕೆ ಸಿದ್ಧ ಹಸ್ತ ಹಿಂದಿ ಭಾಷಣಗಾತಿ. ಆದರೆ ಲಿಪಿಬದ್ಧ ಹಿಂದಿಯೆಂದರೇನೇ ಬರುತ್ತಿತ್ತು ಪೀಕಲಾಟ. ಅದರಲ್ಲೂ ಸಂಸ್ಕೃತಭೂಯಿಷ್ಠವಾದ ಪದಗಳಿಂದೊಡಗೂಡಿದ, ಅಧಿಕೃತ ಅನುವಾದಕರು ಸಿದ್ಧಪಡಿಸಿದ ಹಿಂದಿ ಅವತರಣಿಕೆಯೆಂದರಂತೂ ಮುಗಿದೇಹೋಯಿತು. ಅವುಗಳನ್ನು ಉಚ್ಚರಿಸುವಲ್ಲಿ, ಪರಿಣಾಮಕಾರಿ ಯಾಗಿ ಒತ್ತುಕೊಟ್ಟು ಹೇಳುವಲ್ಲಿ ಆಕೆ ಎಂಥ ಪಾಡು ಪಡುತ್ತಿದ್ದರೆಂಬುದು ನೋಡಿದ ನಮಗೇ ಗೊತ್ತು.

ಮಹತ್ವದ ಪತ್ರಗಳು, ಸಂದೇಶಗಳನ್ನೂ ಅವರು ತಮ್ಮ ಸಾಣೆಗೆ ಹಿಡಿಯದೇ ಬಿಡುತ್ತಿರಲಿಲ್ಲ. ಆದರೆ ಶಾರದಾ ಪ್ರಸಾದರೇ ಆಗಲಿ, ನಾನು ಸೇರಿದಂತೆ ಇನ್ನುಳಿದ ಯಾರೇ ಅಧಿಕಾರಿಯಾಗಲಿ ಆ ಕರಡು ಪ್ರತಿಗಳೆಲ್ಲ ಸಾಣೆ ಹಿಡಿಯಲ್ಪಟ್ಟು ಹೊರಬಂದ ಮೇಲೆ ನಿಜಕ್ಕೂ ಮೌಲಿಕವೆನಿಸುವಂಥವಾ ಗುತ್ತಿದ್ದವು ಎಂಬುದನ್ನು ಹೃತ್ಪೂರ್ವಕವಾಗಿ ಒಪ್ಪುತ್ತಿದ್ದೆವು.

ಸಿದ್ಧ ಭಾಷಣದ ಪ್ರತಿ ಇಲ್ಲದೆಯೇ ಮಾತನಾಡಲು ನಿಂತಾಗಲೆಲ್ಲ ಜನ ತಲೆದೂಗುವಂತೆ, ಮೋಡಿಗೊಳಗಾಗುವಂತೆ ಮಾಡಬಲ್ಲ ಚಾಕಚಕ್ಯ ಪ್ರಧಾನಿಯದು. ರಾಜಕೀಯ ಭಾಷಣಗಳ ಸಂದರ್ಭದಲ್ಲಿ ಇಂದಿರಾ ನೇರವಾಗಿ ಜನರನ್ನು ತಟ್ಟುತ್ತಿದ್ದರು. ಬಹುಶಃ ಇಂಥ ಭಾಷಣಗಳೇ ಅವರ

'ಅತ್ಯುತ್ತಮ'ವೆನ್ನಬಹುದಾದ ಪ್ರಭಾವಶಾಲಿ ಮಾತುಗಾರಿಕೆಗೆ ಸಾಕ್ಷಿ. ಹಿಂದಿಯಲ್ಲಿ ಮಾತನಾಡಬೇಕಾಗಿ ಬಂದರೆ ಅವರು ಉತ್ತರ ಪ್ರದೇಶದ ಹಿಂದುಸ್ತಾನಿಯನ್ನು ಬಳಸುತ್ತಿದ್ದರು. ಅದರಲ್ಲಿ ಆಕೆಗೆ ಆಕೆಯೇ ಸಾಟಿ. ಜನರೊಂದಿಗೆ ಹೃತ್ಪೂರ್ವಕ ಸಂವಾದ ನಡೆಸುತ್ತಿರುವಂಥ ಭಾವನೆಯನ್ನು ಇಂಥ ಭಾಷಣಗಳು ನಮ್ಮಲ್ಲಿ ಉಂಟುಮಾಡುತ್ತಿದ್ದವು. ಆದರೆ ಸಿದ್ಧ ಭಾಷಣವನ್ನು ಓದುವಾಗ ಅಷ್ಟು ಮಟ್ಟಿಗೆ ಅದು ಸತ್ವಹೀನ ಎನಿಸುತ್ತಿತ್ತು. ಟೆಲಿವಿಜನ್ ಮೂಲಕ ಅವರು ಮಾತಾಡುವಾಗಲೂ ಅಷ್ಟೇ. ಮುಖದಲ್ಲಿ ಇರಬೇಕಾದ 'ಇಂದಿರಾತನ' ಇರುತ್ತಿರಲಿಲ್ಲ. ಪಾರ್ಲಿಮೆಂಟಿನಲ್ಲಿ ವಿರೋಧ ಪಕ್ಷದವರಿಂದ ಕೆಣಕಲ್ಪಟ್ಟಾಗ 'ಇಂದಿರಾತನ' ಇದ್ದಕ್ಕಿದ್ದಂತೆಯೇ ಜಾಗೃತವಾಗುತ್ತಿತ್ತು. ಸಿದ್ಧ ಪ್ರತಿಯನ್ನು ಬಿಟ್ಟುಕೊಟ್ಟು, ತೀಕ್ಷ್ಣವಾದ-ಪರಿಣಾಮಕರವಾದ ಬಾಣಗಳನ್ನವರು ಹದವರಿತು ಹಾರಿಸುತ್ತಲೇ ಇರುತ್ತಿದ್ದರು. ಭಾಷಣಗಳ ಕರಡುಗಳನ್ನು ತಿದ್ದುತ್ತಲೇ ಹೋಗುವ ಅವರ 'ಚಟ'ದ ಬಗ್ಗೆ ಈಗಾಗಲೇ ಹೇಳಿದ್ದೇನೆ. ಇಂಥದಕ್ಕೆ ಶಾರದಾ ಪ್ರಸಾದರು ಕಂಡುಕೊಂಡಿದ್ದ ಏಕಮಾತ್ರ ರಕ್ಷಣಾತ್ಮಕ ಕ್ರಮವೆಂದರೆ ಅವುಗಳನ್ನು ಮುಂಚಿತವಾಗಿ ಮುದ್ರಿಸಿಬಿಡುವುದು. ಮೆಕ್ಸಿಕೋದ ಕ್ಯಾಂಕನ್‌ನಲ್ಲಿ ನಡೆದ ಸರಕಾರಗಳ ಮುಖ್ಯಸ್ಥರ ಸಭೆಯಲ್ಲಿ ಓದಬೇಕಾದ ಭಾಷಣದ ಪ್ರತಿ ಹಲವಾರು ಸಲ ಪರಿಷ್ಕರಿಸಲ್ಪಟ್ಟು ಮುದ್ರಿಸಲ್ಪಟ್ಟಿದ್ದರೂ ಅಲ್ಲಿ ಹೋದ ಮೇಲೆ ತಮ್ಮ ಸರದಿ ಬರುವುದರೊಳಗಾಗಿ ಇಂದಿರಾಜಿ ಕೂತಲ್ಲಿಯೇ ತಮ್ಮ ಪ್ರತಿಯಲ್ಲಿ ಕೈ ಆಡಿಸಿ ಅದನ್ನು ಇನ್ನಷ್ಟು 'ಉತ್ತಮ'ಗೊಳಿಸಿಬಿಟ್ಟಿದ್ದರು !

## ಎಂಥಾ ಹಾಸ್ಯ ಪ್ರಜ್ಞೆ!

ಅವರ ಸಮೀಪವರ್ತಿಗಳಿಗೆ ಮಾತ್ರ ಇಂದಿರಾರಲ್ಲಿ ಅಡಗಿದ್ದ ಹಾಸ್ಯ ಪ್ರಜ್ಞೆಯ ಅರಿವಿತ್ತು. ಒಳ್ಳೆಯ ಹಾಸ್ಯೋಕ್ತಿಗಳೆಂದರೆ ಆಕೆಗೆ ಪ್ರೀತಿ. ಹಾಸ್ಯ ಪ್ರಸಂಗಗಳನ್ನು ಹೇಳುವಾಗ ಅವರನ್ನು ನೋಡಬೇಕು. ಆಗ ಅವರು ತುಂಬ ಸ್ನೇಹಮಯಿಯಾಗಿ ತೋರುತ್ತಿದ್ದರು. ಜೋಕುಗಳನ್ನು ನೆನೆದು ನಕ್ಕು, ಅವುಗಳನ್ನು ಹೇಳಿ ನಮ್ಮನ್ನೆಲ್ಲ ನಗಿಸುತ್ತಿದ್ದರು. ಕೆಲವು ಸಭೆ-ಮಾತುಕತೆಗಳ ಸಂದರ್ಭಗಳಲ್ಲೂ ಅವರ ಹಾಸ್ಯಪ್ರಜ್ಞೆ ನನಗೆ ಕಂಡು ಬಂದದ್ದಿದೆ. ಒಮ್ಮೆ ಇಬ್ಬರು ಪ್ರಸಿದ್ಧ ಭಾರತೀಯ ವಿಜ್ಞಾನಿಗಳು ಶಾಂತಿಗೆ ಸಂಬಂಧಿಸಿದ ಮಾತುಕತೆಗಾಗಿ ಪ್ರಧಾನಿಯೆದುರು ಕುಳಿತಿದ್ದರು. ಅವರಿಬ್ಬರಲ್ಲೂ ಭಿನ್ನಾಭಿಪ್ರಾಯ-ವೈಯಕ್ತಿಕ ದ್ವೇಷವಿತ್ತೆಂಬುದು ತಿಳಿದ ಸಂಗತಿಯೇ ಆಗಿತ್ತು. ತಮ್ಮೆದುರಿನಲ್ಲೇ ಅವರಿಬ್ಬರೂ ದುಸುಮುಸು ಮಾಡುತ್ತಿರುವುದನ್ನು ಗಮನಿಸಿದ ಇಂದಿರಾಜಿ ಯಾರಿಗೂ ಗೊತ್ತಾಗದ ರೀತಿಯಲ್ಲಿ-ಮುಖದಲ್ಲಿ ಯಾವ ಬದಲಾವಣೆಯನ್ನೂ ತೋರಿಸದೆಯೆ- ಒಂದು ಚೀಟಿ ಬರೆದು ನನಗೆ ರವಾನಿಸಿದರು. ನಾನದನ್ನು ಬಿಚ್ಚಿ ನೋಡಿದೆ- " ಇವರಿಬ್ಬರೂ ಮೊದಲು ಪರಸ್ಪರರಲ್ಲಿ ಶಾಂತಿಯಿಂದಿರುವುದನ್ನು ಕಲಿತುಕೊಳ್ಳಬೇಕು," ಎಂದಿತ್ತು. ನಾನು ಇಂದಿರಾಜಿಯೆಡೆ ನೋಡಿದೆ. ಅವರು ವಿಜ್ಞಾನಿಗಳ ಮಾತನ್ನು ತುಂಬ 'ಗಂಭಿರ'ವಾಗಿ ಆಲಿಸುತ್ತಲೇ ನನ್ನೆಡೆ ದೃಷ್ಟಿ ಹೊರಳಿಸಿ ಕಣ್ಣಲ್ಲೇ ನಕ್ಕರು.

೧೯೮೪ರ ಜುಲೈ ತಿಂಗಳು. ಅವರೊಂದಿಗೆ ಹೈದರಾಬಾದ್ ಮತ್ತು ತ್ರಿವೆಂದ್ರಮ್ ಪ್ರವಾಸದಲ್ಲಿದ್ದೆ. ನನ್ನಾಕೆಯನ್ನೂ ತಮ್ಮ ವಿಮಾನದಲ್ಲೇ ಬರುವಂತೆ ಇಂದಿರಾ ಈ ಪ್ರವಾಸಕ್ಕೆ ಆಮಂತ್ರಿಸಿದ್ದರು. ಹೈದರಾಬಾದಿನಲ್ಲಿ ಆಗಿನ ರಕ್ಷಣಾ ಮಂತ್ರಿ ಆರ್. ವೆಂಕಟರಾಮನ್ ತಮ್ಮ ವಿಮಾನದಲ್ಲೇ ತ್ರಿವೆಂದ್ರಮ್‌ಗೆ ನಡೆಯಿರೆಂದು ನನ್ನನ್ನು ಒತ್ತಾಯಿಸಿದರು. ಅದು ಒಂದು ಗಂಟೆ ಮೊದಲೇ ಹೊರಡುವ ವಿಮಾನ. "ನನ್ನಾಕೆ ರಾಜಭವನದಲ್ಲಿ ವಿಶ್ರಾಂತಿಯಲ್ಲಿದ್ದಾರೆ. ನಂತರ ಆಕೆಯೊಂದಿಗೆ ಪ್ರಧಾನಿಯ ವಿಮಾನದಲ್ಲೇ ಬರುತ್ತೇನೆ ಬಿಡಿ," ಎಂದುಬಿಟ್ಟೆ. ಅಲ್ಲಿಯೇ ಇದ್ದ ಇಂದಿರಾಜಿ ಜೋರಾಗಿ ನಕ್ಕರು. "ವೆಂಕಟ್‌ಜಿ, ಅವರಿಗ್ಯಾಕೆ ಗಂಟು ಬೀಳ್ತೀರಿ ? ಪಾಪ, ಒಂದು ಗಂಟೆಯಷ್ಟು ಕೂಡ

ಹೆಂಡತಿಯನ್ನು ಬಿಟ್ಟು ಇರೋರಲ್ಲ ಅಲೆಕ್ಝಾಂಡರ್," ಎಂದು ನನ್ನತ್ತ ನೋಡಿದರು. ನಾವೆಲ್ಲ ಅವರ ನಗೆಗೆ ನಗೆ ಜೋಡಿಸಿದೆವು. ತ್ರಿವೆಂದ್ರಮ್‌ನಲ್ಲಿ ಸ್ವಾಗತ ಕಮಾನಿನಲ್ಲಿ ಪ್ರವೇಶಿಸುತ್ತಿದ್ದ ಹಾಗೆಯೇ ನನ್ನಾಕೆಯನ್ನು ಎರಡೂ ಕೈಗಳಿಂದ ಗಟ್ಟಿಯಾಗಿ ಹಿಡಿದ ಇಂದಿರಾ, "ನಿಮಗ್ಗೊತ್ತಾ? ಒಂದರ್ಧತ್ತು ನಿಮಿಷಾನೂ ನಿಮ್ಮಿಂದ ದೂರ ಇರೋದಕ್ಕೆ ಅಲೆಕ್ಝಾಂಡರ್ ಕೈಲಿ ಆಗ್ಲಿಲ್ಲಾ..." ಎಂದು ಮತ್ತೆ ಜೋರಾಗಿ ನಕ್ಕು ಬಿಟ್ಟರು.

## 'ಬಜ್ಜಿ'ಯ ಕಥೆ....

ಸವಿನೆನಪುಗಳನ್ನು ಸವಿಸವಿಯಾಗಿಯೇ, ಅದು ಕೇಳಿದವರ ಕಣ್ಣ ಮುಂದೆ ನಿಲ್ಲುವಂತೆಯೇ, ನಿರೂಪಿಸುವಂಥವರು ಅವರು. ತಾವು ಮಾಂಸಾಹಾರಿಯಾದ ಸ್ವಾರಸ್ಯಕರ ಪ್ರಸಂಗವನ್ನೊಮ್ಮೆ ಹೇಳಿದರು. ಅವರಜ್ಜಿ ಸ್ವರೂಪರಾಣಿ'ಗೆ ಪ್ರೀತಿಯ ಮೊಮ್ಮಗಳು ಸಸ್ಯಾಹಾರಿಯಾಗೇ ಬೆಳೆಯಬೇಕೆಂಬ ಇಚ್ಛೆಯಂತೆ. ಕಾಶ್ಮೀರಿ ಪಂಡಿತ ಕುಲಜರಲ್ಲಿ ಸಾಮಾನ್ಯವಾಗಿ ಗಂಡಸರೆಲ್ಲ ಮಾಂಸಾಹಾರಿಗಳು. ನೆಹರೂ ಮನೆತನದ ಪುರುಷರಿಗಂತೂ ಮಾಂಸವೆಂದರೆ ಎರಡು ಬಾಯಿಗಳು. ಹೆಂಗಸರು ಪೂಜೆ-ಪುನಸ್ಕಾರಗಳ ಕಾರಣದಿಂದ ಸಸ್ಯಾಹಾರವನ್ನೇ ರೂಢಿಸಿಕೊಂಡವರು. ಒಮ್ಮೆ ಪುಟ್ಟ ಇಂದಿರಾ ಶಾಲೆಯಿಂದ ಬರುವಾಗ ಗೆಳತಿಯ ಮನೆಯಲ್ಲೇ ಊಟ ಮುಗಿಸಿ ಬಂದರಂತೆ. ಅಜ್ಜಿಗೋ ಈಕೆ ಅದೇನು ತಿಂದು ಬಂದಿದ್ದಾಳೋ ಏನೋ ಎಂಬ ಆತಂಕ. "ಏನು ತಿಂದೆಯಮ್ಮಾ ಅಲ್ಲಿ?" ಅಂತ ಅಜ್ಜಿ ಕೇಳಿದ್ದಕ್ಕೆ "ಬಜ್ಜಿ" ಎಂದುಬಿಟ್ಟರಂತೆ ಇಂದಿರಾ. ಆನಂದಭವನದ ಅಡಿಗೆಯಾಳುಗಳು ಊಟ ಬಡಿಸಲು ಬಂದರೆ, "ಇದ್ಯಾವ್ದೂ ಬೇಡಾ. ನಮ್ಮ ಗೆಳತಿ ಮನೇಲಿ ಮಾಡಿದಂತಾ ಬಜ್ಜಿ ಮಾಡೀದ್ರೇನೇ ನಾನೂಟಾ ಮಾಡೋದು," ಎಂದು ಹಟ ಹಿಡಿದರಂತೆ. ಅಜ್ಜಿಗೆ ವರದಿ ಮಾಡಿದ ಅಡಿಗೆಯವರು ಅವರ ಆದೇಶದಂತೆ ಇಂದಿರಾರ ಗೆಳತಿಯ ಮನೆಗೆ ಹೋಗಿ ಅದೆಂಥಾ ಬಜ್ಜಿ ಮಾಡಿದ್ದರೆಂಬುದನ್ನರಿತು ಬರಲೇಬೇಕಾಯಿತು. ಅದೆಂಥ ಬಜ್ಜಿ ಎಂಬುದು ಗೊತ್ತಾದಾಗ ಅಜ್ಜಿ ಹಣೆ ಹಣೆ ಜಜ್ಜಿಕೊಂಡರು. ಅದು ಮಟನ್ನಿನಿಂದ ಮಾಡಿದ್ದಂತೆ. ಅದೇನೋ ಕಟ್ಟೆಟ್ಟಂತೆ. ಹುಡುಗಿ ಕೆಟ್ಹೋದ್ಳು ಅಂತ ಮನೆಯಿಡೀ ಪ್ರತಿಧ್ವನಿಸುವಂತೆ ಸ್ವರೂಪರಾಣಿ' ಕೂಗಾಡುತ್ತಿದ್ದಾಗ ಮೋತಿಲಾಲರು ತಣ್ಣಗೆ ಹೇಳಿದರಂತೆ, "ಹೋಗ್ಲಿ ಬಿಡೆ. ಒಮ್ಮೆ ರುಚಿ ನೋಡಿಬಿಟ್ಟಿದ್ದಾಳೆ. ಅವಳ ಪಾಲ್ಗೆ ಬಯಸೋದನ್ನೇ ಮಾಡ್ಸಿ ಹಾಕಬಾರ್ದಾ? ಅವಳನ್ಯಾಕೆ ಸಪ್ಪನ್ನ ಸಸ್ಯಾಹಾರಾನೇ ತಿನ್ನು ಅಂತ ಒತ್ತಾಯಿಸ್ತಿ?" ಅಂದಿನಿಂದ ಆನಂದಭವನದ ಗಂಡಸರ ಜೊತೆಗೆ ಕೂತು ಮಾಂಸದಡುಗೆಯನ್ನೇ ಉಣ್ಣಲಾರಂಭಿಸಿದರಂತೆ ಇಂದಿರಾ.

ಪ್ರಶ್ನೋತ್ತರ ವೇಳೆಯಲ್ಲಿ, ವಿಶ್ವಾಸ ಮಂಡನೆಯ ವಿಶೇಷ ಚರ್ಚೆಗಳ ಸಂದರ್ಭದಲ್ಲಿ ಪಾರ್ಲಿಮೆಂಟಿನಲ್ಲಿ ಹಾಜರಿರುತ್ತಿದ್ದ ಇಂದಿರಾ ಉಳಿದ ವೇಳೆಯಲ್ಲಿ ಪಾರ್ಲಿಮೆಂಟ್ ಹೌಸಿನ ತಮ್ಮ ಕಚೇರಿಯಲ್ಲೇ ಇರಬಯಸುತ್ತಿದ್ದರು. ತಮ್ಮ ಉಪಸ್ಥಿತಿ ಅವಶ್ಯವೆನಿಸಿದ ಕೂಡಲೇ ಆ ಕಚೇರಿಯಿಂದ ರಾಜ್ಯಸಭೆಗೋ ಲೋಕಸಭೆಗೋ ಅವಸರದ ಹೆಜ್ಜೆಗಳನ್ನಿಟ್ಟು ಹೋಗುವುದು ಸಾಮಾನ್ಯವೆನಿಸಿತ್ತು. ಒಂದೊಮ್ಮೆ ನಾನವರ ಕಚೇರಿಯಲ್ಲಿ ಯಾವುದೋ ವಿಷಯವಾಗಿ ಮಾತಿನಲ್ಲಿ ತೊಡಗಿದ್ದಂತೆಯೇ ಸದನದಲ್ಲಿ ಕೂಡಲೇ ಇರಬೇಕಾದ್ದು ಅತ್ಯವಶ್ಯವೆಂಬ ಸೂಚನೆ ಬಂತು. ಬೇಕಾದ ಕಾಗದ ಪತ್ರ-ಫೈಲುಗಳನ್ನು ಅಮುಕಿ ಹಿಡಿದು ಅವರು ಅದೆಷ್ಟು ರಭಸದ ಹೆಜ್ಜೆ ಹಾಕತೊಡಗಿದರೆಂದರೆ ನಾನು ಅಕ್ಷರಶಃ ಅವರ ಹಿಂದೆ ಹಿಂದೆಯೇ ಓಡಬೇಕಾಯಿತು. ಸದನದಿಂದ ಕಚೇರಿಗೆ ಮರಳುವಾಗ, "ನೀವು ಓಟದಲ್ಲಿ ಪಿ.ಟಿ.ಉಷಾ ಅವರನ್ನು ಸುಲಭವಾಗಿ ಹಿಂದೆ ಹಾಕಬಲ್ಲಿರಿ," ಎಂದು ನಕ್ಕೆ. "ಓಹೋ! ಯಾಕಿಲ್ಲ? ೬೫ರ ನಂತರದ ವಯೋಮಾನದವರಿಗಾಗಿ ಓಟದ ಸ್ಪರ್ಧೆಯಿಟ್ಟರೆ, ಗಂಡಸರೂ ಸೇರಿದಂತೆ, ಅವರೆಲ್ಲರನ್ನೂ ಹಿಂದೆ ಹಾಕಬಲ್ಲೆ," ಎಂದು ನಕ್ಕರು. ಆ ಮಾತಿನಲ್ಲಿ ಆತ್ಮವಿಶ್ವಾಸ

ತುಂಬಿತುಳುಕುತ್ತಿತ್ತು.

ಅವರಿಗೆ ತಮ್ಮ ಸಂಪುಟದ ಸದಸ್ಯರ ಇತಿಮಿತಿಗಳ ಪೂರ್ಣ ಅರಿವಿತ್ತು. ಹೀಗಾಗಿ ಸಚಿವರ ಕಾರ್ಯನಿರ್ವಹಣೆಯ ಮೇಲೊಂದು ಕಣ್ಣಿಟ್ಟುಕೊಂಡೇ ಇರುತ್ತಿದ್ದರು. ಅಂಥವರ ಕಾರ್ಯ ಚ್ಯುತಿಗಳ ಬಗ್ಗೆ, ಕಾರ್ಯವಿಧಾನದಲ್ಲಿಯ ನಿಧಾನದ ಬಗ್ಗೆ ವರದಿಗಳೂ ಬರುತ್ತಿದ್ದವು. ಆದರೆ ತಮ್ಮ ಕಷ್ಟಕಾಲದಲ್ಲಿ ಹೆಗಲೆಣೆಯಾಗಿ ನಿಂತವರ ಕುರಿತು ಇಂದಿರಾಗೆ ಅದೇನೋ ಅನುಕಂಪ. ಮಂತ್ರಿಯಾಗಿ ಒಬ್ಬ ವ್ಯಕ್ತಿಯ ಸಾಮರ್ಥ್ಯವೇನೇ ಇರಲಿ, ಆದರೆ ಪಕ್ಷದ ದೃಷ್ಟಿಯಿಂದ ಉಪಯುಕ್ತನೆನಿಸಿದರಾಯಿತು, ಅಂಥವರನ್ನು ಇಂದಿರಾ ಪರಿಗಣಿಸುತ್ತಿದ್ದುದೇ ಬೇರೆ ರೀತಿಯಲ್ಲಿ. ಚುನಾವಣೆಯಲ್ಲಿ ಯಾರು ಎಲ್ಲಿ ಸೂಕ್ತ ಎಂಬುದರಲ್ಲಿ ಅವರ ಲೆಕ್ಕಾಚಾರವೇ ಸರಿಯಾಗಿರುತ್ತಿತ್ತು. ಜಾತಿ-ಉಪಜಾತಿ-ಮತ-ಪಂಥಗಳು ರಾಜ್ಯಮಟ್ಟದಲ್ಲಿ ಎಂಥ ಪ್ರಭಾವ ಬೀರುತ್ತವೆ ಎಂಬುದನ್ನು ಅರಿತಿದ್ದ ಇಂದಿರಾ ಒಬ್ಬ ಮಂತ್ರಿಯನ್ನು ನಿರ್ವಹಣಾ ಸಾಮರ್ಥ್ಯವಿಲ್ಲದವನೆಂಬ ಕಾರಣಕ್ಕಾಗಿ ಸುಲಭದಲ್ಲಿ ಕೈ ಬಿಡುವ ಹುಚ್ಚಿಗಿಳಿಯುತ್ತಿರಲಿಲ್ಲ. ಇತರರು ಒಪ್ಪಲಿ-ಬಿಡಲಿ. ಆಕೆಗೆ ಪಕ್ಷದ ದೃಷ್ಟಿಯಿಂದ ಒಬ್ಬ ವ್ಯಕ್ತಿ ಕಾರ್ಯಕರ್ತನಾಗಿ ಮುಖ್ಯನೆ ಹೊರತು ಮಂತ್ರಿಯಾಗಿ ಅಲ್ಲ. ಕೆಲವು ಅಸಮರ್ಥ ಮಂತ್ರಿಗಳು ಅವರ ಸಂಪುಟದಲ್ಲಿದ್ದುದೇನೂ ಸುಳ್ಳಲ್ಲ. ಆದರೆ ಅವರನ್ನು ಉಳಿಸಿಕೊಂಡೇ ಆಡಳಿತ ರಥದ ಸಾರಥ್ಯವನ್ನು ಮುಂದುವರಿಸುವುದು ಅವಶ್ಯವೆಂದುಕೊಂಡಿದ್ದರು ಇಂದಿರಾ.

## ಸಹೋದ್ಯೋಗಿಗಳ ಸಲುವಾಗಿ

ಹೀಗಾಗಿ 'ಕೊರಡು ಕಟ್ಟಿಗೆ'ಯನ್ನು ಕಡಿದು ಹಾಕುವುದನ್ನು ವಿರೋಧಿಸುತ್ತಿದ್ದ ಇಂದಿರಾ ಹಾಗೆ ಮಾಡುವ ಮೂಲಕ ತನ್ನ ಸಂಪುಟದ ಯಾವೊಬ್ಬ ಸಹೋದ್ಯೋಗಿಯನ್ನೂ ಮಾನಸಿಕ ಕ್ಷೋಭೆಗೆ ಈಡು ಮಾಡಿ, ಪಕ್ಷದ ಕಾರ್ಯಕರ್ತನಾಗಿ ಆತನ ಪ್ರಭಾವ ಹಾಗೂ ಪರಿಣಾಮಕಾರಿ ಕೆಲಸವನ್ನು ಕಳೆಗೆಡಿಸುವ ಪ್ರಯತ್ನಕ್ಕಿಳಿಯಲಿಲ್ಲ. ಇಲ್ಲಿ ಅವರು ಅನುಸರಿಸುತ್ತಿದ್ದ ವಿಧಾನವೇ ಬೇರೆ ತೆರನಾದದ್ದು. ಮಂತ್ರಿಯೊಬ್ಬ ಆ ಸ್ಥಾನದಲ್ಲಿ ಕಾರ್ಯಕ್ಷಮನಲ್ಲ ಎಂದು ಕಂಡುಬಂದರೆ ಆತನ ಇಲಾಖೆಯನ್ನು ಬದಲಿಸುವ ಮೂಲಕವೋ ಇಲ್ಲವೆ ಪಕ್ಷದ ಒಂದು ಗೌರವನೀಯ ಪದಾಧಿಕಾರಿಯನ್ನಾಗಿ ಮಾಡುವ ಮೂಲಕವೋ ಆತ ತಮ್ಮೊಂದಿಗೇ ಮುಂದುವರಿಯುವಂತೆ ನೋಡಿಕೊಳ್ಳುತ್ತಿದ್ದರು.

ಸಂಪುಟ ಮತ್ತು ಸಂಪುಟ ಸಮಿತಿಗಳ ಸಭೆಗಳಿಗೆ ಪೂರ್ವ ತಯಾರಿ ಇಲ್ಲದೆ ಬರುವ ಮಂತ್ರಿಗಳೆಂದರೆ ಇಂದಿರಾಜೀಗೇನೋ ಕಿರಿಕಿರಿ. ಅದು ಅವರ ಮುಖದ ಮೇಲೆ ಪ್ರಕಟವಾಗಿ ತೋರುತ್ತಿತ್ತು. ಯಾವೊಂದು ಇಲಾಖೆಗೆ ಸಂಬಂಧಿಸಿದ ಪ್ರಸ್ತಾವಗಳನ್ನು ಇಂಥ ಸಭೆಗಳಲ್ಲಿ ಅದರ ಕಾರ್ಯದರ್ಶಿಗಳು ಮಂಡಿಸುವುದನ್ನು ಇಂದಿರಾ ಸಹಿಸುತ್ತಿರಲಿಲ್ಲ. ಅಂತೆಯೇ ಸಂಪುಟದ ಸಭೆಗಳ ಚರ್ಚೆಗಳಲ್ಲಿ ಕಾರ್ಯದರ್ಶಿಗಳು ಭಾಗವಹಿಸುವ ಪದ್ಧತಿಯನ್ನೆ ಅವರು ನಿಲ್ಲಿಸಿಬಿಟ್ಟರು. ಕೇವಲ ಸಂಪುಟ ಕಾರ್ಯದರ್ಶಿ ಹಾಗೂ ಪ್ರಧಾನಿಗಳ ಮುಖ್ಯ ಕಾರ್ಯದರ್ಶಿ ಮಾತ್ರ ಇಂಥ ಸಭೆಗಳಲ್ಲಿ ಭಾಗವಹಿಸಬಲ್ಲವರಾಗಿದ್ದರು. ಸಂಪುಟದ ಸಭೆಯೊಂದಕ್ಕೆ ಕಾರ್ಯದರ್ಶಿಗಳಿಬ್ಬರು ವಾಗ್ಯುದ್ಧ ನಡೆಸುತ್ತಲೇ ಪ್ರವೇಶಿಸಿ, ಅದು ಸಂಪುಟದ ಸಭೆಯೆಂಬುದನ್ನೂ ಮರೆತು ಎಷ್ಟೋ ಹೊತ್ತು ಜೋರು ಜೋರಾಗಿ ವಾದಿಸುತ್ತಲೇ ಇದ್ದ ಘಟನೆಯೇ ಇಂದಿರಾ ಆ ನಿರ್ಧಾರ ತಳೆಯಲು ಕಾರಣ. ಸಂಪುಟ ಸಭಾಂಗಣದ ಪಕ್ಕದ ಕೋಣೆಯಲ್ಲಿ ಅವರು ಕೂತುಕೊಂಡಿರಲಿ, ಅವಶ್ಯವೆನಿಸಿದಾಗ ಮಾತ್ರ ಬಂದು, ಬೇಕಾದ ಮಾಹಿತಿ-ಕಾಗದಪತ್ರ-ವಿವರ ನೀಡಿ ಹೋಗಲಿ ಎಂದು ಕಾರ್ಯದರ್ಶಿಗಳಿಗೊಂದು ಹೊಸ ನೀತಿಸಂಹಿತೆಯನ್ನೇ ಹಾಕಿಕೊಟ್ಟರು.

ಇಂದಿರಾಜಿಯ ಕಾರ್ಯನಿರ್ವಹಣೆಯ ಕುರಿತಂತೆ ಟೀಕೆಯೊಂದು ಸಾಮಾನ್ಯವಾಗಿ ಕೇಳಿಬರು

ತ್ತಿತ್ತು- "ಆಕೆ ಯಾವುದೇ ಮಂತ್ರಿ ಇಲ್ಲವೆ ಪಕ್ಷದ ಹಿರಿಯ ಕಾರ್ಯಕರ್ತರ ಅಭಿಪ್ರಾಯಗಳಿಗೆ ಎಂದೂ ಕಿವಿಗೊಡಲಿಲ್ಲ" ಎಂದು. ಆದರೆ ಇದು ನಿರಾಧಾರಿತ ಟೀಕೆ. ನಿಜವಿದ್ದ ಮಾತೆಂದರೆ ಕೆಲವು ಮಂತ್ರಿಗಳು ಮತ್ತು ಪಕ್ಷದ ಕಾರ್ಯಕರ್ತರು ಮೆಡಂ ಎದುರು ಸ್ಪಷ್ಟವಾಗಿ ತಮ್ಮ ಅನಿಸಿಕೆಗಳನ್ನು ಹೇಳಲು ಹಿಂಜರಿಯುತ್ತಿದ್ದರು. ಬದಲಾಗಿ ನಿರ್ದಿಷ್ಟ ಸಂಗತಿಯ ಕುರಿತು ಪ್ರಧಾನಿಯ 'ಸಲಹೆ' 'ಮಾರ್ಗದರ್ಶನ' ಬಯಸುತ್ತಿದ್ದರು.

ರಾಜ್ಯಗಳಿಗೆ ಸಂಬಂಧಿಸಿದ ಪಕ್ಷದ ನೀತಿಯನ್ನು ಕುರಿತಂತೆ ಇಂದಿರಾಜಿ ತಮ್ಮ ಸಂಪುಟದ ಹಿರಿಯರ ಅಭಿಪ್ರಾಯವನ್ನು ಆಗಾಗ ಪಡೆಯುತ್ತಿದ್ದುದುಂಟು. ಅದು ಪ್ರದೇಶ ಕಾಂಗ್ರೆಸ್ ಮುಖ್ಯಸ್ಥನ ಆಯ್ಕೆಯೇ ಆಗಿರಬಹುದು, ಅಥವಾ ಕಾಂಗ್ರೆಸ್ ಶಾಸಕಾಂಗದ ವಿಷಯವೇ ಇರಬಹುದು; ಇಂದಿರಾ ಖಂಡಿತವಾಗಿ ತಮ್ಮ ಸಂಪುಟದ ಹಿರಿಯ ಸದಸ್ಯರ ಅಭಿಪ್ರಾಯಗಳಿಗೆ ಮನ್ನಣೆ ಕೊಡುತ್ತಿದ್ದರು. ಒಂದು ವೇಳೆ ಇಂಥ ಸ್ಥಾನಗಳ ಆಯ್ಕೆಯ ಕುರಿತಂತೆ ಅಸಮಾಧಾನ ವ್ಯಕ್ತಪಟ್ಟರೆ ಆ ಆಯ್ಕೆಯ ಜವಾಬ್ದಾರಿಯನ್ನು ತಮ್ಮ ಮೇಲೆ ತೆಗೆದುಕೊಂಡು ಸ್ಥಿತಿ ಎದುರಿಸಲು ಸಿದ್ಧರಾಗುತ್ತಿದ್ದರು.

ಸಂಪುಟದ ಪುನಾರಚನೆಯ ವಿಷಯದಲ್ಲಿ ಇಂದಿರಾ ಅನುಸರಿಸುತ್ತಿದ್ದ ಕ್ರಮವೂ ವಿಶಿಷ್ಟವೆ. ಹಳೆಯದನ್ನೆಲ್ಲ ಗುಡಿಸಿ ಹಾಕಿ ಹೊಸದನ್ನು ತಂದು ಸ್ಥಾಪಿಸುವುದರಲ್ಲಿ ಅವರಿಗೆ ನಂಬಿಕೆ ಇರಲಿಲ್ಲ. ತಕ್ಕ ಮಟ್ಟಗಿನ ಬದಲಾವಣೆ ಮಾಡುವುದರ ಮೂಲಕ ಸಂಪುಟ ಪುನಾರಚನೆಯ ಪ್ರಕ್ರಿಯೆ ಪೂರ್ಣಗೊಳ್ಳುತ್ತಿತ್ತಾದ್ದರಿಂದ ಅವರ 'ಪುನಾರಚನೆ'ಗಳೆಂದೂ ಮಹತ್ವದ ಘಟನೆಗಳೆನಿಸಲೇ ಇಲ್ಲ. ಮಹತ್ತರ ಬದಲಾವಣೆ ಮಾಡುವ ಮೂಲಕ ಸಂಪುಟ ಸದಸ್ಯರಲ್ಲಿ ಮಾನಸಿಕ ಗೊಂದಲವುಂಟು ಮಾಡಲು ಇಂದಿರಾ ಮುಂದಾಗುತ್ತಿರಲಿಲ್ಲ.

ಆದರೆ ತಾವು ಮಾಡಬಯಸುವ ಬದಲಾವಣೆಗಳ ಕುರಿತಂತೆ ಅವರು ತುಂಬ ಗೌಪ್ಯವನ್ನು ಕಾಪಾಡಿಕೊಳ್ಳುತ್ತಿದ್ದರೆಂಬುದನ್ನಿಲ್ಲಿ ಹೇಳಲೇಬೇಕು. ಸಂಪುಟ ದರ್ಜೆಯ ಮಂತ್ರಿಯೇ ಇರಲಿ, ರಾಜ್ಯ ಸಚಿವನೇ ಆಗಿರಲಿ ಅವರಿಗೆಲ್ಲ ತಮ್ಮ ಬದಲಾದ ಖಾತೆಯ ಬಗ್ಗೆ, 'ಹೊಸ ಮುಖ'ಗಳೇನಾದರೂ ಸಂಪುಟದಲ್ಲಿ ಕಾಣಿಸಿಕೊಳ್ಳಲಿದ್ದರೆ ಅವುಗಳ ಕುರಿತು, ಗೊತ್ತಾಗುತ್ತಿದ್ದುದು ಪ್ರಮಾಣವಚನ ಸ್ವೀಕಾರಕ್ಕೆ ಸ್ವಲ್ಪವೇ ಸಮಯ ಉಳಿದಿದೆ ಎನ್ನುವಂಥ ಕ್ಷಣದಲ್ಲಿ ಮಾತ್ರ.

## ಸಂಪುಟ ಪುನಾರಚನೆ, ಇತ್ಯಾದಿ.....

ಪುನಾರಚನೆಗೆ ಮೊದಲು ಇಂದಿರಾ ಕೆಲವರ ವಿಷಯದಲ್ಲಿ ನಿರ್ಧಾರ ತೆಗೆದುಕೊಳ್ಳುವಾಗ ತೀವ್ರ ಮಾನಸಿಕ ಹಿಂಸೆಯನ್ನು ಅನುಭವಿಸುತ್ತಿದ್ದರು. ಆರ್. ವೆಂಕಟರಾಮನ್ನರನ್ನು ಹಣಕಾಸು ಇಲಾಖೆಯಿಂದ ರಕ್ಷಣಾ ಖಾತೆಗೆ ವರ್ಗಾಯಿಸುವಾಗ (೧೯೮೨, ಜನವರಿ) ಆ ಹಿರಿಯ ಎಲ್ಲಿ ಬೇಜಾರು ಮಾಡಿಕೊಳ್ಳುವರೋ, ತಮ್ಮನ್ನು ಹಿಂಬಡ್ತಿ ಮಾಡಿದಂತಾಗಿದೆ ಎಂದಲ್ಲಿ ತಿಳಿದುಕೊಳ್ಳುವರೋ ಎಂಬ ತಳ್ಳಂಕ ಇಂದಿರಾಜಿಗೆ. ಹೀಗಾಗಿ ಆರ್.ವಿ.ಯೊಂದಿಗೆ ಈ ವಿಷಯ ಮಾತಾಡಿಬಿಡಲೆ ಎಂದು ಕೊಂಡರೂ ಹಿಂದೇಟು ಹಾಕಿದ್ದೇ ಹೆಚ್ಚು. ವೆಂಕಟರಾಮನ್ನರ ಪ್ರತಿಕ್ರಿಯೆ ಏನಾಗಿರಬಹುದೆಂದು ಊಹಿಸಿ ಹೇಳಲು ಇಂದಿರಾಜಿ ನನಗೆ ಹಲವು ಸಲ ಹೇಳಿದರು. ಒಂದು ವರ್ಷದಿಂದ ರಕ್ಷಣಾ ಖಾತೆಯ ಹೆಚ್ಚುವರಿ ಹೊಣೆಯನ್ನೂ ತಮ್ಮ ಹೆಗಲಿಗೇರಿಸಿಕೊಂಡಿದ್ದ ಪ್ರಧಾನಿ ಆ ಭಾರವನ್ನು ಇಳಿಸಿಕೊಳ್ಳಬೇಕಿತ್ತು. ಪ್ರಣಬ್ ಮುಖರ್ಜಿಯನ್ನು ವಿತ್ತ ಮಂತ್ರಿಯನ್ನಾಗಿ ಮಾಡಿ ರಕ್ಷಣಾ ಇಲಾಖೆಯನ್ನು ಆರ್.ವಿ.ಯ ಕೈಗೊಪ್ಪಿಸುವ ಇಚ್ಛೆ ಅವರದು. ಕೊನೆಗಳಿಗೆಯವರೆಗೂ ಅವರು ತಮ್ಮ ಇಂಗಿತವನ್ನು ಹೇಳದೇ ಹೋದರೂ ಪ್ರಮಾಣವಚನಕ್ಕೆ ಮೊದಲು ವಿಷಯ ತಿಳಿದ ವೆಂಕಟರಾಮನ್ ಅತ್ಯುತ್ಸಾಹದಿಂದ ಆ ಖಾತೆಯನ್ನು ಒಪ್ಪಿಕೊಂಡಾಗ ಇಂದಿರಾ ದೊಡ್ಡದೊಂದು ಕುತ್ತಿನಿಂದ

ಪಾರಾದವರಂತೆ ನಲಿದಾಡಿದರು.

ಆರ್.ವಿ. ಅದೇ ಉತ್ಸಾಹವನ್ನು ತಮ್ಮನ್ನು ಉಪರಾಷ್ಟ್ರಪತಿ ಸ್ಥಾನಕ್ಕೆ ಅಭ್ಯರ್ಥಿಯಾಗಲು ಇಂದಿರಾ ಕೇಳಿಕೊಂಡಾಗ ವ್ಯಕ್ತಪಡಿಸಲಿಲ್ಲ. ೧೯೮೪ರ ಜುಲೈ ೧೯. ಅಂದು ಹೈದರಾಬಾದಿನ ರಕ್ಷಣಾ ಸಂಶೋಧನಾ ಪ್ರಯೋಗಾಲಯದ ಕಾರ್ಯಕ್ರಮವೊಂದರಲ್ಲಿ ಭಾಗವಹಿಸಲು ಆ ಇಬ್ಬರೊಂದಿಗೆ ನಾನೂ ಹೋಗಿದ್ದೆ. ಇಂದಿರಾ ಉಪರಾಷ್ಟ್ರಪತಿ ಸ್ಥಾನಕ್ಕೆ ಆರ್.ವಿ.ಯವರನ್ನು ಸೂಚಿಸಲು ನಿರ್ಧರಿಸಿ ಬಿಟ್ಟಿದ್ದರು. ಕಾರ್ಯಕ್ರಮದಲ್ಲಿ ನಾವು ಚಹ ಕುಡಿಯುತ್ತಿದ್ದಾಗ ಉಪರಾಷ್ಟ್ರಪತಿ ಸ್ಥಾನಕ್ಕೆ ನಾಮಪತ್ರ ಸಲ್ಲಿಸಲು ಕೆಲವೇ ದಿನಗಳು ಉಳಿದಿವೆಯೆಂಬುದನ್ನು ಇಂದಿರಾಜಿಯ ಗಮನಕ್ಕೆ ತಂದೆ. ವೆಂಕಟ್‌ಜಿ ದೂರದಲ್ಲಿ ಬೇರಾರೊಂದಿಗೋ ಮಾತಾಡುತ್ತಿದ್ದರು. ಕೂಡಲೇ ಇಂದಿರಾ ಅವರತ್ತ ನಡೆದು, ಗುಂಪಿನಿಂದ ಆರ್.ವಿ.ಯವರನ್ನು ದೂರ ಕರೆದೊಯ್ದು ತಮ್ಮ ಉದ್ದೇಶವನ್ನು ತಿಳಿಯಪಡಿಸಿದರು. ಕೆಲ ನಿಮಿಷಗಳಲ್ಲೇ ಮತ್ತೆ ನಾನು ನಿಂತಿದ್ದಲ್ಲಿಗೆ ಮರಳಿದ ಪ್ರಧಾನಿ, ಅವರು ರಕ್ಷಣಾ ಖಾತೆಯ ಕೆಲಸದಲ್ಲೇ ಸಂತೋಷದಿಂದಿದ್ದಾರಂತೆ; ಉಪರಾಷ್ಟ್ರಪತಿ ಸ್ಥಾನದ ಬಗ್ಗೆ ಅಷ್ಟು ಉತ್ಸುಕತೆ ತೋರಿಸಲಿಲ್ಲ ಎಂದರು. ಇಲ್ಲಿಲ್ಲ, ಅದು ನಿಮ್ಮ ಮನಃಪೂರ್ವಕ ಇಚ್ಛೆಯೇ ಆಗಿದ್ದರೆ ಆರ್.ವಿ. ಖಂಡಿತಕ್ಕೂ ಒಪ್ಪುತ್ತಾರೆ ಎಂದೆ ನಾನು.

## ನಾನು ಗುರುತಿಸಿದ ನಾಲ್ಕು ಅಂಶಗಳು

ಕಾರ್ಯವಿಧಾನಕ್ಕೆ ಸಂಬಂಧಿಸಿದಂತೆ ಇಂದಿರಾ ಗಾಂಧಿಯವರಲ್ಲಿದ್ದ ಎರಡು ಪ್ರಬಲ ಅಂಶಗಳು ಮತ್ತು ಎರಡು ನ್ಯೂನ ಅಂಶಗಳನ್ನು ಗುರುತಿಸಿ ಹೇಳಲು ನನ್ನನ್ನು ಯಾರಾದರೂ ಕೇಳಿದರೆ ಥಟ್ಟನೆ ನನ್ನ ಗಮನ ಈ ಕೆಳಗಿನವುಗಳತ್ತ ಹರಿಯುತ್ತದೆ; ಭಾರತದ ವಿದೇಶ ನೀತಿಯ ಕುರಿತು ಅವರ ನಿಷ್ಣಾತತನ ಮತ್ತು ಕರಾರುವಾಕ್ಕಾದ ಪಕ್ವವಾದ ರಾಜಕೀಯ ಚಾತುರ್ಯಗಳು ಪ್ರಬಲ ಅಂಶಗಳೆನಿಸಿದರೆ, ಸಹೋದ್ಯೋಗಿಗಳನ್ನು ನಂಬದಿರುವಿಕೆ ಹಾಗೂ ಏಕಾಕಿತನ ಅನುಭವಿಸುವಿಕೆಗಳು ಅವರಲ್ಲಿದ್ದ ನ್ಯೂನ ಅಂಶಗಳು.

ಭಾರತದ ವಿದೇಶ ನೀತಿಯ ದ್ರಷ್ಟಾರರೆನಿಸಿಕೊಳ್ಳುವ ಜವಾಹರರ ಮಗಳಲ್ಲವೆ ಅವರು? ಅಪ್ಪನನ್ನು ತೀರ ಸಮೀಪದಿಂದ ನೋಡಿದವರು. ವಿದೇಶ ನೀತಿಯ ಸಂಬಂಧದ 'ತರಬೇತಿ'ಯನ್ನು ತಂದೆಯಿಂದ ತೀರ ಸುಲಭದಲ್ಲೇ ಪಡೆದವರು. ಆದರೆ ಅದರಲ್ಲೂ ತಮ್ಮದೇ ಆದ ಶೈಲಿ ಬೆಳೆಸಿಕೊಂಡವರು ಇಂದಿರಾ. ವಿದೇಶೀ ಗಣ್ಯರೊಂದಿಗಿನ ಮಾತುಕತೆಯ ಸಂದರ್ಭದಲ್ಲಿ ಅವರು ಮಿತ್ರರೇ ಆಗಿರಲಿ, ಶತ್ರುಗಳೇ ಆಗಿರಲಿ, ಏನನ್ನು ಹೇಳಬೇಕು, ಎಷ್ಟನ್ನು ಹೇಳಬೇಕು, ಯಾವುದಕ್ಕೆ ಒತ್ತುಕೊಡಬೇಕು, ಯಾವುದನ್ನು ತೇಲಿಸಿಬಿಡಬೇಕು ಎಂಬುದನ್ನು ಇಂದಿರಾ ಬಲ್ಲವರಾಗಿದ್ದರು. ಅವರಾಡುವ ಪ್ರತಿ ವಾಕ್ಯವೂ ಪ್ರಗಾಢ ಪರಿಣಾಮವನ್ನು ಬೀರುವಂತಿರುತ್ತಿತ್ತು. ಭಾರತದ ಸಂಬಂಧ ಅಷ್ಟು ಮಧುರವಾಗಿಲ್ಲದಿದ್ದ ದೇಶದ ಮುಖಂಡರೊಂದಿಗೆ ಯಾವೊಂದು ಎಡವಟ್ಟು ವಿಷಯದಲ್ಲಿ ಮಾತನಾಡುವಾಗ ಕೂಡ ಭಾವಾವೇಶಕ್ಕೆ ಒಳಗಾಗದೆ, ನುಡಿಗಳಲ್ಲಿ ನಂಜು ಕಾರದೆ ಅವರು ಮಾತುಕತೆ ನಡೆಸುತ್ತಿದ್ದರು. ವಾಕ್ಯಗಳ ನಡುವಣ ತಡೆ ಮೌನ, ಉದ್ದೇಶಪೂರ್ವಕ ಮಾಡಲಾಗುವ ಉಲ್ಲೇಖ, ಬದ್ಧವಾಗಿಲ್ಲವೆಂದು ಸೂಚಿಸುವ ಉತ್ತರಗಳು- ಪ್ರತಿ ಪ್ರಶ್ನೆಗಳು ಇಂದಿರಾ ಅವರು ಅದೆಂಥ ಚಾಣಾಕ್ಷ ರಾಜನೀತಿಜ್ಞರೆಂಬುದಕ್ಕೆ ಉದಾಹರಣೆಗಳು.

ಕೋಟ್ಯಂತರ ಭಾರತೀಯರ ಅಭಿಮಾನಿಯಾಗಿದ್ದರೂ, ಪಕ್ಷ ಹಾಗೂ ಸಂಪುಟದ ಸಹೋದ್ಯೋಗಿಗಳ ಪ್ರಾಮಾಣಿಕ ನಿಷ್ಠೆ-ಗೌರವಗಳಿಗೆ ಪಾತ್ರರಾಗಿದ್ದರೂ ಇಂದಿರಾಗೆ ಒಂಟಿತನ ಕಾಡುತ್ತಿತ್ತು. ಅವರು ಯಾರೊಬ್ಬನನ್ನೂ ಪೂರ್ತಿಯಾಗಿ ನಂಬುತ್ತಿರಲಿಲ್ಲವೆಂದು ನನಗೆ ಅನ್ನಿಸಿದ್ದಿದೆ. ಮತ್ತೆ ಮತ್ತೆ ಅವರು

ಏಕಾಕಿಯಾಗಿ ಕುಳಿತು ಅಂತರ್ಮುಖಿಯಾಗುತ್ತಿದ್ದುದಕ್ಕೆ ಕಾರಣವನ್ನು ತಿಳಿಯಲು ನಾವು ಇಂದಿರಾರ ಬಾಲ್ಯದ ಅವಧಿಯನ್ನೇ ಕೆದಕಬೇಕು. ಜತೆಗೆ ೧೯೭೭-೭೯ರ ನಡುವಣ ಅವಧಿಯ ಕಟು ಅನುಭವಗಳೂ ಇದಕ್ಕೆ ಇನ್ನಷ್ಟು ಆಜ್ಯ ಸುರಿದಿರಬೇಕು. ಇಂದಿರಾಜಿಯನ್ನು ದೀರ್ಘಕಾಲದಿಂದ ಬಲ್ಲ ಕೆಲವರು ಹೇಳುವಂತೆ 'ಉಳಿದವರನ್ನು ನಂಬದಿರುವಿಕೆ' ಅವರಲ್ಲಿ ಬೆಳೆದದ್ದು ೧೯೭೭ರ ನಂತರವೇ.

## ಸದಾ ಕಾಡಿದ ಏಕಾಕಿತನ

ಆಕೆಯ ಬಾಲ್ಯದ ದಿನಗಳು ವಿಚಿತ್ರವೆಂಬಂಥ ಏಕಾಕಿತನದಲ್ಲಿ ಕಳೆದವು. ಆನಂದಭವನದಲ್ಲಿ, ಆ ಬೃಹತ್ ಕುಟುಂಬದಲ್ಲಿ, ಅಜ್ಜ-ಅಜ್ಜಿಯರ ಅಪಾರ ಮಮತೆಯ ಸುರಿಮಳೆಯಾಗುತ್ತಿದ್ದರೂ ಅದೇನೋ ಒಂದು ರೀತಿಯ ಅನಾಥ ಪ್ರಜ್ಞೆ ಬಾಲಕಿಗೆ. ಅಪ್ಪ ಯಾವಾಗಲೂ ಚಳವಳಿ-ಜೇಲುವಾಸ ವೆಂದು ಮನೆಯಿಂದ ದೂರವೇ ಇರುವವರು. ತಾಯಿ ಕಮಲಾ ಸದಾಕಾಲವೂ ಅಸ್ವಸ್ಥತೆಯಿಂದ ಹಾಸಿಗೆಯಲ್ಲೇ ಮಲಗಿಕೊಂಡಿರುವವರು. ಜತೆಗೆ ತನ್ನ ಓರಗೆಯವರಾರೂ ಇಲ್ಲದೆ ಬಾಲ್ಯದ ಮೊದಲಿನ ಅವಧಿಯನ್ನು ಇಂದಿರಾ ಒಂಟಿಯಾಗಿಯೇ ಕಳೆಯಬೇಕಾಯಿತು. ಮನೆಯಲ್ಲಿ ತನ್ನ ಸೋದರತ್ತೆಯರದೇ ಮೇಲುಗೈ ಎಂಬುದು ಆಗಿನಿಂದಲೇ ಇಂದಿರಾರ ಗಮನಕ್ಕೆ ಬಂದಂತಿತ್ತು. ಈ ಕಾರಣದಿಂದ ಅವರ ಸಮೀಪವೂ ಹೋಗದಂಥ ಭಯ ಬೆಳೆಯಿತು ಬಾಲಕಿಯಲ್ಲಿ. ಅಮ್ಮನನ್ನು ಸೋದರತ್ತೆ ವಿಜಯಲಕ್ಷ್ಮಿ ಒಂದು ರೀತಿಯ ಅಸಡ್ಡೆಯಿಂದ ನಡೆಸಿಕೊಳ್ಳುತ್ತಿದ್ದುದನ್ನು ಕಂಡು ಇಂದಿರಾರಲ್ಲಿ ಮನೆಯ ಹಿರಿಯ ಹೆಂಗಸರ ವಿಷಯದಲ್ಲಿ ಅನಾದರ- ಅಸಂತೃಪ್ತಿಗಳು ಬಲಗೊಂಡವು. ಹೀಗಾಗಿ ಅಂದಿನಿಂದಲೇ ಆಕೆ ಅನಾಥ ಕೂಸಿನಂತೆ ತನ್ನ ಪಾಡಿಗೆ ತಾನು ಇದ್ದುಬಿಡುವುದರಲ್ಲೇ ದಿನಗಳೆಯತೊಡಗಿದಳೇನೋ.

ಬೆಳೆದು ದೊಡ್ಡವಳಾಗುತ್ತಿದ್ದ ಕಾಲದಲ್ಲಿ, ಅಪ್ಪನ ಆಚ್ಚೆ-ಅನುಕೂಲಗಳ ಕೊರತೆಯೇನೂ ಇರದಿದ್ದರೂ, ಭಾರತದ ಹಾಗೂ ಜಗತ್ತಿನ ಮುಖಂಡರ ಪರಿಚಯ-ಆತ್ಮೀಯತೆಗಳ ಲಾಭ ಲಭಿಸಿದ್ದರೂ ಇಂದಿರಾಗೆ ಜನರಿಂದ ದೂರವಾಗಿ ತನ್ನಷ್ಟಕ್ಕೆ ತಾನು ಉಳಿಯುವಿಕೆಯಿಂದ ಹೊರಬರಲು ಆಗಲೇ ಇಲ್ಲ. ಪತಿ ಫಿರೋಜ್ ಗಾಂಧಿಯ ಅಕಾಲ ಮೃತ್ಯು- ಮತ್ತು ತನ್ನ ಪಾಲಿಗೆ ತಂದೆ-ತಾಯಿ- ಗುರು-ಗೆಳೆಯ- ಗುರಿತೋರುವ ಬೆಳಕು ಹೀಗೆ ಏನೆಲ್ಲಾ ಆಗಿದ್ದ ಅಪ್ಪ ಜವಾಹರರ ಸಾವು ಆಕೆಯನ್ನು ಇನ್ನಷ್ಟು ಏಕಾಂತಪ್ರಿಯೆಯನ್ನಾಗಿಸಿಬಿಟ್ಟಿದ್ದವು. ಮುಪ್ಪಿನಲ್ಲಿ ತನ್ನ ಆಧಾರಸ್ತಂಭವಾಗಬೇಕಿದ್ದ ತರುಣ ಮಗ ಸಂಜಯ ಗಾಂಧಿ ದುರಂತದಲ್ಲಿ ಮಡಿದದ್ದು ಇಂದಿರಾಜಿಯನ್ನು ಸಂಪೂರ್ಣವಾಗಿ ಕೋಶದ ಲ್ಲಡಗಿ ಕೂಡುವ ಸ್ಥಿತಿಗೆ ತಳ್ಳಿತು. ಸೊಸೆ ಮನೇಕಾ ಮನೆಬಿಟ್ಟು ಬೇರೆಯಾಗುವ ನಿರ್ಧಾರ ತಳೆದದ್ದು ಇಂದಿರಾಜಿಯ ಪಾಲಿಗೆ ಗಾಯದ ಮೇಲೆಳೆದ ಮತ್ತೊಂದು ಬರೆ. ಜತೆಗೆ ಪ್ರೀತಿಯ ಮೊಮ್ಮಗ ವರುಣನನ್ನು ಅಗಲಿರಬೇಕಾದ ದುಃಖ. ತಿಂಗಳದಲ್ಲೊಮ್ಮೆಯಾದರೂ ಆ ಮುದ್ದು ಮುಖವನ್ನು ನೋಡುವ ಅವಕಾಶವೂ ಸೊಸೆಯಿಂದ ನಿರಾಕರಿಸಲ್ಪಟ್ಟಿತೆಂದರೆ ಹೇಗಾಗಬೇಡ ? ಆಗಲಿ, ಇಷ್ಟೆಲ್ಲ ಅನುಭವಿಸಿದ್ದೇನೆಂದ ಮೇಲೆ ಇದು ಹತ್ತರೊಂದಿಗೆ ಹನ್ನೊಂದನೆಯದು ಎಂದು ಸುಮ್ಮನುಳಿದು ಬಿಟ್ಟರು ಇಂದಿರಾ. ಆದರೆ ಸದಸದ್ವಿವೇಕಿ ಸೋನಿಯಾ ಅತ್ತೆಯನ್ನು ಅಕ್ಷರಶಃ ಮಗುವಿನಂತೆ ನೋಡಿಕೊಂಡರು. ಈ ಇಟಾಲಿಯನ್ ಹುಡುಗಿ ಅಪ್ಪಟ ಭಾರತೀಯ ಮಗಳಂತೆ ಅತ್ತೆಯನ್ನು ಮಾತ್ರ ಸಮಾನಳೆಂದು ಮನಃಪೂರ್ವಕವಾಗಿ ಪರಿಭಾವಿಸಿಬಿಟ್ಟಳು. ಇಂದಿರಾರ ಮಾನಸಿಕ ಸ್ಥಿತಿಯನ್ನು ಅರಿತುಕೊಂಡು ಆದಷ್ಟು ಮಟ್ಟಿಗೆ ಆಕೆ ಗೆಲುವಾಗಿರುವ ವಾತಾವರಣವನ್ನು ಮನೆಯಲ್ಲಿ ಮೂಡಿಸಿ ದಳು.

೧೯೭೭ ರಿಂದ ೭೯ರ ನಡುವಿನ ವಿದ್ಯಮಾನಗಳು ಇಂದಿರಾಜಿಯಂಥದೇ ಮನಸತ್ತ್ವದ

ಬೇರಾವುದೇ ವ್ಯಕ್ತಿಯನ್ನು ಯಾವ ದುಸ್ಥಿತಿಗೆ ದೂಡುತ್ತಿದ್ದವೋ... ವಿಚಾರಣಾ ಆಯೋಗಗಳು, ಬಂಧನ-ಜೇಲುವಾಸ, ಸಂಪತ್ತಿನಿಂದ ಉಚ್ಚಾಟನೆಗಳೇ ಮೊದಲಾದ ಘಟನೆಗಳು ಈ ಸೂಕ್ಷ್ಮ ಮನಸ್ಸಿನ ಮಹಿಳೆಯನ್ನು ಅದೆಷ್ಟು ಘಾಸಿಗೊಳಿಸಿದುವೋ... ಅಷ್ಟೆ ಅಲ್ಲ, ಆ ಪತನಾ ನಂತರ ತೀರ ನಂಬಿಗಸ್ಥರೆಂಬಂಥವರು ಕೂಡ, ಬೆಳಗಾದ ಕೂಡಲೇ ಜಯಕಾರ ಮೊಳಗಿಸುತ್ತ ೧, ಸಫ್ದರ್‌ಜಂಗ್ ರಸ್ತೆಯ ನಿವಾಸಕ್ಕೆ ಬರುತ್ತಿದ್ದವರು ಕೂಡ ಹಠಾತ್ತನೇ ಹಿಂತೆಗೆದುಬಿಟ್ಟರೆಂದರೆ.... ಇಂದಿರಾ ವಾಸ್ತವ್ಯವನ್ನು ಬದಲಿಸಿ ವಿಲಿಂಗ್ಡನ್ ಕ್ರೆಸೆಂಟ್‌ನ ಮನೆಯಲ್ಲಿ ನೆಲೆನಿಂತ ಮೇಲೆ ಆಕೆ ತಮಗೆ ಅಪರಿಚಿತಳೇನೋ ಎಂಬಂತೆ ನಡೆದುಕೊಂಡವರೂ ಬಹಳ ಜನ. ಇಂದಿರಾಜಿಯನ್ನು ಭೇಟಿ ಮಾಡುವವರ ಬೆನ್ನ ಹಿಂದೆ 'ಹೊಸ ಪ್ರಭುಗಳ ಹಸ್ತಕರು' ಕಣ್ಣು ನೆಟ್ಟುಕೊಂಡಿದ್ದರೆಂಬ ಸುದ್ದಿಯೂ ಇತ್ತು. ಇನ್ನು ಕೆಲವರು ನಿಷ್ಠೆಯನ್ನು ಮುಂದುವರಿಸಿಕೊಂಡೇ ಹೋದರು- ಆದರೆ ಅಲ್ಲಿ ಮುಖ ಮಾತ್ರ ಬದಲಾಗಿತ್ತು. ಅಂಥವರ ಕಣ್ಣಲ್ಲಿ ಕಾಣುತ್ತಿದ್ದವರು ಇಂದಿರಾ ಅಲ್ಲ, ಜನತಾ ಧುರೀಣರು. ಹಿಂದೊಮ್ಮೆ 'ಜೀ ಜೀ' ಅಂದ ಬಾಯಿಗಳಿಂದ ಈಗ 'ಥೂ ಥೂ'ಕಾರ ಕೇಳಿಬರತೊಡಗಿತು.... ಇಂದಿರಾಜಿಗೆ ನಿಂತ ನೆಲದ ಬಗ್ಗೆಯೂ ನಂಬಿಕೆ ಕಳಕೊಳ್ಳುವ ಸ್ಥಿತಿ.... ಅಂದ ಮೇಲೆ ಆಕೆ ಮೌನಿಯಾಗಿ ಖಾಸಾಕೋಣೆಯ ನಾಲ್ಕು ಗೋಡೆಗಳ ನಡುವೆ ಗಲ್ಲಕ್ಕೆ ಕೈ ಹಚ್ಚಿ ಕೂಡುವಂತಾಗದೇ ಇನ್ನೇನಾಗ ಬೇಕು....

ಇಂದಿರಾಜಿ ಗದ್ದುಗೆಗೆ ಮರಳಿದ ಮೇಲೆ ತಮ್ಮನ್ನು ಕಷ್ಟ ಕಾಲದಲ್ಲಿ ಕಡೆಗಣಿಸಿದವರನ್ನೂ ತಮ್ಮ ಮೇಲೆ ವೃಥಾ ಅಪವಾದ ಹೊರಿಸಿದಂಥವರನ್ನೂ ಸಂಪುಟದಲ್ಲಿ ಸೇರಿಸಿಕೊಂಡರು. ಆದರೆ 'ಕ್ಷಮಿಸು'ವಷ್ಟು ಸುಲಭವೇ 'ಮರೆಯು'ವುದು? ಕೆಲ ಸಂದರ್ಭಗಳಲ್ಲಿ ಒಬ್ಬೊಬ್ಬ ವ್ಯಕ್ತಿ ಒಂದೊಂದು ಸಂಗತಿಯ ಸಂಬಂಧದಲ್ಲಿನ ತಮ್ಮ ಭಯ-ಸಂಶಯಗಳನ್ನು ನನ್ನೆದುರು ಮುಚ್ಚುಮರೆಯಿಲ್ಲದೆ ಬಿಚ್ಚಿಡುತ್ತಿದ್ದರು.

## 'ಆಘಾತ ಚಿಕಿತ್ಸೆ'

೧೯೮೨ರ ಮೆ ತಿಂಗಳು. ಹರ್ಯಾಣಾ, ಹಿಮಾಚಲ ಪ್ರದೇಶ, ಕೇರಳ ಮತ್ತು ಪ.ಬಂಗಾಲಗಳಲ್ಲಿ ನಡೆದ ವಿಧಾನಸಭಾ ಚುನಾವಣೆ ಹಾಗೂ ಏಳು ಲೋಕಸಭಾ ಕ್ಷೇತ್ರಗಳ ಉಪ-ಚುನಾವಣೆಗಳಲ್ಲಿ ಕಾಂಗ್ರೆಸ್ಸು ಹೀನಾಯ ಸೋಲು ಅನುಭವಿಸಿದ್ದು ಇಂದಿರಾಗೆ ತೀವ್ರ ಅಸಮಾಧಾನ ಹಾಗೂ ಜಿಗುಪ್ಸೆಯನ್ನು ಉಂಟುಮಾಡಿತು. ಆ ಅಭ್ಯರ್ಥಿಗಳೆಲ್ಲರ ಗೆಲುವಿಗಾಗಿ ಹಗಲಿರುಳೆನ್ನದೆ ಪ್ರಚಾರಗೈದು ಬಂದಿದ್ದರು ಇಂದಿರಾ. ಆದರೆ ಪರಿಣಾಮ? ಪಕ್ಷದ ಅಧ್ಯಕ್ಷೆಯಾಗಿ ಹೀಗೇಕಾಯಿತೆಂದು ಪೃಥಃಕರಿಸಿ ನೋಡಿದಾಗ ಸತ್ಯ ಬಯಲಿಗೆ ಬಿತ್ತು. ಎಲ್ಲೆಲ್ಲೂ ಕಾಂಗ್ರೆಸ್ಸಿಗರಲ್ಲಿ ಒಳಜಗಳ-ಭಿನ್ನಮತಗಳೇ ಕಂಡುಬಂದುವು. ಇಷ್ಟಲ್ಲದೆ ಕೆಲವು 'ಕಾಂಗ್ರೆಸ್ಸಿಗರು' ತಮ್ಮ ಪಕ್ಷದ ಉಮೇದುವಾರರ ವಿರುದ್ಧವೇ ಕೆಲಸ ಮಾಡಿದರೆಂಬ ವರದಿಗಳು ಇಂದಿರಾರನ್ನು ಕಂಗೆಡಿಸಿದವು. ಇನ್ನು ಕೆಲವೆಡೆಯಂತೂ ಗೆಲುವನ್ನು ತಮ್ಮ ತಲೆಗೇರಿಸಿಕೊಂಡು, ಸೋಲನ್ನು ಕಾಂಗ್ರೆಸ್ ಅಧ್ಯಕ್ಷೆ ಇಂದಿರಾರ ತಲೆಗೆ ಕಟ್ಟಿಬಿಟ್ಟರು.

ಇಂಥ ಪರಿಸ್ಥಿತಿಯಲ್ಲಿ ಯಾರಿಗೆ ತಾನೇ ಇದೆಲ್ಲದರಿಂದ ಮುಕ್ತವಾಗಿ ದೂರವುಳಿಯಬೇಕೆನ್ನಿಸುವುದಿಲ್ಲ? ಇಂದಿರಾ ಕೂಡ ಅಂಥ ಸ್ಥಿತಿಯಿಂದ ಹೊರತಾಗಿರಲಿಲ್ಲ. ಪಕ್ಷದ ಅಧ್ಯಕ್ಷ ಪದ ಮತ್ತು ಪ್ರಧಾನಿ ಪಟ್ಟವನ್ನು ತೊರೆದು ಮುಂದೆರಡು ತಿಂಗಳಲ್ಲಿಯೇ ಜರುಗಲಿದ್ದ ರಾಷ್ಟ್ರಾಧ್ಯಕ್ಷ ಪದಕ್ಕೆ ಸ್ಪರ್ಧಿಸಲು ಬಯಸಿದರು ಇಂದಿರಾ. ಎಷ್ಟೋ ಸಲ ಈ ಕುರಿತು ನನ್ನೆದುರು ಪ್ರಸ್ತಾಪಿಸಿಯೂ ಇದ್ದರು. "ಪಕ್ಷಕ್ಕೆ ನಾನು ಸಾಕಷ್ಟು ದುಡಿದಿಲ್ಲವೇನು? ಈಗ ಅದರ ಹೊಣೆಯನ್ನು ಬೇರೊಬ್ಬರಿಗೆ ವಹಿಸಿ ಕೊಡಬಾರದೇನು?" ಎಂದೊಮ್ಮೆ ಅವರು ನನ್ನನ್ನು ಕೇಳಿದಾಗ, ಆ ಪ್ರಶ್ನೆಯ ಹಿಂದಿನ ನೋವು-ಮಾನಸಿಕ

ಹಿಂಸೆಗಳ ಅರಿವಾಗದೆ ಇರಲಿಲ್ಲ. ಪಕ್ಷದಲ್ಲಿ ಒಂದು ರೀತಿಯ ಅತಿ ಆತ್ಮವಿಶ್ವಾಸದ ಪರಿಣಾಮವಾಗಿ ಜಡತೆ ತಲೆದೋರಿದ್ದನ್ನು ಗಮನಿಸಿ ಇಂದಿರಾ 'ಆಘಾತ-ಚಿಕಿತ್ಸೆ'ಯಿಂದ ಮಾತ್ರ ತಮ್ಮವರನ್ನು ಬಡಿದೆಚ್ಚರಿಸಲು ಸಾಧ್ಯ ಎಂದುಕೊಂಡರು. ಇದಕ್ಕೆ ತಾವು ಪಕ್ಷದ ಅಧ್ಯಕ್ಷ ಪದವಿ ಮತ್ತು ಪ್ರಧಾನಿ ಹುದ್ದೆಯಿಂದ ಕೆಳಗಿಳಿಯುವುದಕ್ಕಿಂತ ಹೆಚ್ಚಿನ ಪರಿಣಾಮಕರ ಕ್ರಮ ಬೇರೊಂದಿರಲಾರದು ಎಂಬುದವರ ಭಾವನೆ. "ಕೆಲವು ಅವಧಿಯವರೆಗೆ ನಾನು ವಿಶ್ರಮಿಸಬೇಕಿದೆ. ಜತೆಗೆ ಗ್ರಂಥ ರಚನೆಯಲ್ಲೂ ತೊಡಗಬೇಕಿದೆ. ರಾಷ್ಟ್ರಪತಿ ಭವನವೇ ಇವೆರಡಕ್ಕೂ ಪ್ರಶಸ್ತ ಸ್ಥಳ. ರಾಷ್ಟ್ರಾಧ್ಯಕ್ಷೆಯಾಗಿದ್ದುಕೊಂಡು ಹೊಸ ಸರಕಾರಕ್ಕೆ ನನ್ನ ಸಲಹೆ-ಮಾರ್ಗದರ್ಶನಗಳನ್ನೂ ನೀಡಬಹುದಲ್ಲವೆ ?" ಎಂದು ನನ್ನನ್ನವರು ಮತ್ತೆ ಮತ್ತೆ ಕೇಳಿದರು. ಇಂದಿರಾ ಆ ದಿಶೆಯಲ್ಲಿ ನಿಜಕ್ಕೂ ಗಂಭೀರವಾಗಿ ಯೋಚಿಸುತ್ತಿದ್ದಾರೆ, ಕೇವಲ 'ಆಘಾತ-ಚಿಕಿತ್ಸೆ'ಯ ಉದ್ದೇಶದಿಂದ ಕೂಡಿದ ಮಾತುಗಳಲ್ಲ ಅವು ಎಂಬುದು ನನ್ನನ್ನು ಆತಂಕಕ್ಕಿಡು ಮಾಡಿತು. "ದೇಶಕ್ಕೆ ನಿಮ್ಮ ನೇತೃತ್ವದ ಆವಶ್ಯಕತೆ ಅತ್ಯಂತ ಜರೂರಾಗಿದೆ. ಕನಿಷ್ಠ ಇನ್ನೊಂದು ಅವಧಿಯವರೆಗಾದರೂ ಈ ಹುದ್ದೆಯಿಂದ ಹಿಂದೆ ಸರಿಯುವ ಮಾತನಾಡಬೇಡಿ. ಹಾಗೇನಾದರೂ ಮಾಡಿದರೆ ಈ ದೇಶ ದಿಗ್ಮೂಢ ಸ್ಥಿತಿಯಲ್ಲಿ ಇಲ್ಲವೆ ಅರಾಜಕ ಸ್ಥಿತಿಯಲ್ಲಿ ನರಳಬೇಕಾಗುತ್ತದೆ. ಅದನ್ನು ಮತ್ತೆ ಸರಿಪಡಿಸುವುದು ಅಷ್ಟು ಸುಲಭದ ಮಾತಾಗಲಾರದು," ಎಂದು ವಾದಿಸಿಬಿಟ್ಟೆ. ಅಷ್ಟೇ ಅಲ್ಲ, "ದೇಶದ ಸಂಕಷ್ಟ ಸಮಯದಲ್ಲಿ ಅದರ ಚುಕ್ಕಾಣಿ' ಹಿಡಿದು ಮುನ್ನಡೆಸಲು ವಿಧಿ ನಿಮಗೆ ಆದೇಶಿಸಿದೆ. ಇಂಥದರಲ್ಲಿ ನೀವೇನಾದರೂ 'ಆಘಾತ-ಚಿಕಿತ್ಸೆ'ಗೆ ಮುಂದಾದರೆ ಖಂಡಿತಕ್ಕೂ ನಿಮ್ಮ ಪಕ್ಷ ಹಾಗೂ ಸರಕಾರಗಳು ಮೇಲೇಳಲಾರದ ಸ್ಥಿತಿ ತಲಪುವ ಸಾಧ್ಯತೆಯೂ ಇದೆ," ಎಂದೆ. ನನಗೆ ಅವರಲ್ಲಿ ಮತ್ತೆ ಆಶಾವಾದ-ಉತ್ಸಾಹಗಳು ಚಿಗುರಬೇಕು ಎಂಬ ಬಲವತ್ತರ ಇಚ್ಛೆ. ಅದು ನೆರವೇರಿತು.

ಅವರಿಗೆ ಇನ್ನೊಂದು ಬಗೆಯ ಮಾನಸಿಕ ಆಘಾತವುಂಟು ಮಾಡಿದ ಘಟನೆಗಳೆಂದರೆ ಪಂಜಾಬಿನಲ್ಲಿ ಸಿಖ್ ಉಗ್ರಗಾಮಿಗಳು ಅಮಾಯಕರನ್ನು ಕೊಲ್ಲತೊಡಗಿದ್ದು ಮತ್ತು ಅಸ್ಸಾಂನಲ್ಲಿನ ನರಮೇಧ. ಇಂದಿರಾ ಇನ್ನಷ್ಟು ಗಟ್ಟಿಯಾಗಿ ನಿಂತು ಪರಿಸ್ಥಿತಿಯನ್ನು ಎದುರಿಸಿದರಲ್ಲದೆ ದೇಶದ ಏಕತೆ ಮತ್ತು ಅಖಂಡತೆಗೆ ಹೊಸ ಕ್ರಮಗಳನ್ನು ಯೋಜಿಸಿದರು.

## ಓದುವದರಲ್ಲೂ ಮುಂದು

ಸಮಯದ ಪರಿಪೂರ್ಣ ಪ್ರಯೋಜನವನ್ನು ಹೇಗೆ ಪಡೆದುಕೊಳ್ಳಬೇಕು ಎಂಬುದಕ್ಕೆ ಇಂದಿರಾರಿಗಿಂತ ಬೇರೆ ಉದಾಹರಣೆ ನನಗೆಲ್ಲೂ ಸಿಕ್ಕಲಾರದು. ಅವರ ಸಮೀಪವರ್ತಿಗಳಿಗೆ, ಇಂದಿರಾ ಏಕಕಾಲಕ್ಕೆ ಎರಡು-ಮೂರು ವಿಷಯಗಳನ್ನು ಅದು ಹೇಗೆ ನಿಭಾಯಿಸುತ್ತಿದ್ದರು, ಅದೆಷ್ಟು ಜಾಗೃತೆಯಿಂದ-ಚಾಕಚಕ್ಯದಿಂದ ಸಮಸ್ಯೆಗಳನ್ನು ಪರಿಹರಿಸುತ್ತಿದ್ದರು ಎಂಬುದು ಗೊತ್ತು. ರಾಜಕೀಯ ವ್ಯವಹಾರಗಳಿಗೆ ಸಂಬಂಧಿಸಿದ ಸಂಪುಟ ಸಭೆಯ ಅಧ್ಯಕ್ಷತೆ ವಹಿಸಿರುವ ಹೊತ್ತಿನಲ್ಲೇ ಮತ್ತೊಂದು ಸಭೆಯಲ್ಲಿ ತಾವು ಮಾಡಬೇಕಾದ ಭಾಷಣದ ಕರಡು ಪ್ರತಿಗೆ ಕೊನೆಗಳಿಗೆಯ ಮಾರ್ಪಾಡುಗಳಲ್ಲಿ ತೊಡಗಬೇಕು. ಗಂಭೀರ ವಿಷಯವೊಂದರ ಚರ್ಚೆಯಲ್ಲಿದ್ದಾಗ ತೀರ ಭಿನ್ನವಾದ ಸಂಗತಿಗೆ ಸಂಬಂಧಿಸಿದಂತೆ ಫೋನಿನಲ್ಲಿ ಮಾತಾಡಬೇಕು. ಆದರೆ ಹೀಗೆ ಮಾಡುವಾಗ ಅವರು ತತ್ಕಾಲದ ಕಲಾಪಗಳಿಂದ ವಿಮುಖರಾಗುತ್ತಿದ್ದರೆಂದು ಅರ್ಥವಲ್ಲ. ಮನೆಯಿಂದ ಕಾರಿನಲ್ಲಿ ಕಚೇರಿ ತಲಪುವುದರೊಳಗಾಗಿ (ಅದೇನೂ ದೀರ್ಘ ದಾರಿಯಲ್ಲ) ಅವರು ಕೆಲವು ಪತ್ರಗಳನ್ನೋ, ಪುಸ್ತಕಗಳನ್ನೋ, ಪುಸ್ತಕವೊಂದರ ಕೆಲವು ಪುಟಗಳನ್ನೋ ಓದಿ ಮುಗಿಸಿರುತ್ತಿದ್ದರು.

ಅಷ್ಟು ಕಾರ್ಯಬಾಹುಲ್ಯದ ನಡುವೆಯೂ ಇಂದಿರಾ ಓದುವುದಕ್ಕೆ ಅವಕಾಶ ಕಲ್ಪಿಸಿಕೊಳ್ಳುತ್ತಿದ್ದರು. ಒಮ್ಮೊಮ್ಮೆ ತಾವು ಹಿಂದಿನ ರಾತ್ರಿ ಓದಿದ ಪುಸ್ತಕದ ಕೆಲವು ಆಸಕ್ತಿಕರ ವಿಷಯಗಳನ್ನು ನನಗೆ

ಹೇಳುತ್ತಿದ್ದರು. "ಯಾವುದಾದರೂ ಕೆಲಸದಲ್ಲಿ ನಿಮಗೆ ನಿಜವಾಗಿಯೂ ಆಸಕ್ತಿಯಿದ್ದರೆ, ಎಷ್ಟೆ ಗುರುತರ ಜವಾಬ್ದಾರಿಯ ನಡುವೆಯೂ ನೀವು ಅದನ್ನು ಮಾಡಿ ಮುಗಿಸಲು ಅವಕಾಶ ಹುಡು ಕೊಳ್ಳುತ್ತೀರಿ," ಎಂಬುದು ಇಂದಿರಾಜಿ ಆಗೀಗ ಹೇಳುತ್ತಿದ್ದ ಮಾತು. ನಮ್ಮೆಲ್ಲರಿಗಿಂತ ಹೆಚ ವ್ಯಸ್ತರಾಗಿದ್ದ ಅವರು ನಮ್ಮೆಲ್ಲರಿಗಿಂತ ಹೆಚ್ಚು ಪುಸ್ತಕಗಳನ್ನು ಓದುತ್ತಿದ್ದರೆಂಬುದು ಹೇಳಲೇಬೇಕಾ ಅಂಶ. ದಿನಕ್ಕೆ ಕೇವಲ ನಾಲ್ಕು ಗಂಟೆಗಳ ನಿದ್ರೆ ಆರೋಗ್ಯಕ್ಕೆ ಒಳ್ಳೆಯದು; ಐದು ಗಂಟೆ ಕಾ ನಿದ್ರಿಸುವುದು ಐಷಾರಾಮದ ಲಕ್ಷಣ ಎಂದು ಅವರು ಅನೇಕ ಬಾರಿ ಅಂದದ್ದಿದೆ. ಆ ವಯಸ್ಸಿನ ಬೇಗ ನಿದ್ರೆಯಲ್ಲಿ ಮುಳುಗುವುದು ಬಹುತೇಕರಿಗೆ ಒಂದು ದೊಡ್ಡ ಸಮಸ್ಯೆ. ಆದರೆ ಇಂದಿ ಹಾಸಿಗೆಗೆ ಬೆನ್ನು ಹಚ್ಚಿದ್ದೇ ತಡ ಗೊರಕೆ ಹೊಡೆಯಲಾರಂಭಿಸುತ್ತಿದ್ದರು. ೬೭ರ ಆ ವಯಸ್ಸಿನಲ್ಲ ದಿನಕ್ಕೆ ೧೮ ಗಂಟೆಗಳ ಕಾಲ ಕೆಲಸ ಮಾಡಿಯೂ ಅವರು ದಣ'ವರಿಯದಂತೆ ಇರುತ್ತಿದ್ದುದ ಗುಟ್ಟೇನು ಗೊತ್ತೆ? ಮಿತಾಹಾರ ಮತ್ತು ಮಿತ ವಿರಾಮ. ಸೋಮವಾರ ಒಪ್ಪೊತ್ತೂಟದ ಕ್ರಮವನ - ಯಾವುದೇ ಧಾರ್ಮಿಕ ಕಾರಣಕ್ಕಾಗಿ ಅಲ್ಲ- ಅನುಸರಿಸುತ್ತಿದ್ದ ಇಂದಿರಾ ಅನಿವಾರ್ಯ ಸಂದರ್ಭಗಳ ಅದು ತಪ್ಪಿದರೆ ಮುಂದೊಂದು ದಿನ ಒಂದು ಊಟವನ್ನು ತ್ಯಜಿಸುತ್ತಿದ್ದರು. ಈ ಒಪ್ಪೊತ್ತೂ ಪಚನಾಂಗಕ್ಕೆ ವಿಶ್ರಾಂತಿ ಕೊಡುವುದಕ್ಕಾಗಿ ಎಂಬುದು ಇಂದಿರಾ ನೀಡುತ್ತಿದ್ದ ಕಾರಣ.

ಸರಳವಾದ ಓರಣದ ಉಡುಗೆ-ತೊಡುಗೆಯ ಇಂದಿರಾ ಚಿನ್ನದ ಉಂಗುರವನ್ನಾಗಲಿ, ಚೇನನ್ನಾಗ ಧರಿಸುತ್ತಿರಲಿಲ್ಲ. ನಿರಾಭರಣೆಯಾಗಿ, ನಿರಾಡಂಬರದಿಂದ ಬಿಳಿ ಖಾದಿ ಸೀರೆ ಇಲ್ಲವೇ ಕಾಂಚೀಪುರ ರೇಶ್ಮೆ ಸೀರೆಯಲ್ಲಿ ಪ್ರಿಯದರ್ಶಿನಿ ಕಂಗೊಳಿಸುತ್ತಿದ್ದರು.

## 'ಅಜ್ಜಿಯ ಹೃದಯ'

ಅವಮಾನ-ಅಜ್ಞಾತವಾಸಾನಂತರ ಅಧಿಕಾರವನ್ನು ಮತ್ತೆ ಪಡೆದ ಇಂದಿರಾ ಮುಂದೆ ಒಂದೂವ ವರ್ಷದವರೆಗೆ ಪಕ್ಷ ಮತ್ತು ಸರಕಾರದ ಸಮಸ್ಯೆಗಳನ್ನು ಬಗೆಹರಿಸುವುದರಲ್ಲಿ, ಜನತಾ ಸರಕಾರ ದೆಶೆಯಿಂದಾಗಿ ದೇಶ ಕಂಡಿದ್ದ ದುಃಸ್ವಪ್ನದ ಆಘಾತದಿಂದ ಅದನ್ನು ಪಾರು ಮಾಡಿ ಸುಸ್ಥಿ ತರುವಲ್ಲಿಯೇ ಹೆಚ್ಚು ಕಾಲ ಶ್ರಮಿಸಿದರು. ಈ ನಡುವೆ ಅನೇಕ ದೇಶಗಳಿಂದ, ಅಲ್ಲಿಯ ಗಣ್ಯರಿಂ ತಮ್ಮ ದೇಶಕ್ಕೆ ಭೇಟಿ ನೀಡಲು ಆಮಂತ್ರಣಗಳು ಬಂದೇ ಬಂದವು. ಇಂದಿರಾಜಿ ೧೯೮೧ರ ಮ ತಿಂಗಳಿಂದ ವಿದೇಶ ಪ್ರವಾಸ ಪ್ರಾರಂಭಿಸಿದರು. ಸ್ವಿಜರ್‌ಲ್ಯಾಂಡ್, ಕುವೈಟ್, ಅರಬ್ ದೇಶಗಳ ಕೀನ್ಯಾ, ಜಕಾರ್ತಾ, ಫಿಜಿ, ಟೋಂಗಾ, ಆಸ್ಟ್ರೇಲಿಯಾ, ಫಿಲಿಪ್ಪೈನ್ಸ್, ರೊಮೇನಿಯ, ಮೆಕ್ಸಿಕೋ ಯುನೈಟೆಡ್ ಕಿಂಗ್‌ಡಮ್, ಅಮೆರಿಕ, ಆಗಿನ ಸೋವಿಯತ್ ಒಕ್ಕೂಟ, ಯುಗೋಸ್ಲಾವಿಯ ಫಿನ್ಲೆಂಡ್, ಡೆನ್ಮಾರ್ಕ್, ನಾರ್ವೆ, ಆಸ್ಟ್ರಿಯಾ, ಸೈಪ್ರಸ್, ಗ್ರೀಸ್, ಫ್ರಾನ್ಸ್, ಲಿಬಿಯ ಮತ್ತು ಟುನಿಸ ರಾಷ್ಟ್ರಗಳಿಗೆ ೧೯೮೧ ರಿಂದ ೧೯೮೪ರ ಅವಧಿಯಲ್ಲಿ ಭೇಟಿ ಇತ್ತರು. ನಾನು ಅಲ್ಲೆಲ್ಲ ಅವರೊಂದಿ ಹೋಗಿ ಪಡೆದ ಅನುಭವಗಳು ಅಸಂಖ್ಯ.

ಕೀನ್ಯಾ ಪ್ರವಾಸದಲ್ಲಿ ಇಂದಿರಾಜಿಯಲ್ಲಿದ್ದ 'ಅಜ್ಜಿಯ ಹೃದಯ'ದ ಪರಿಚಯ ನನಗಾಯಿತು ಸೊಸೆ ಮನೇಕಾ ಮತ್ತು ಮೊಮ್ಮಕ್ಕಳಾದ ರಾಹುಲ್-ಪ್ರಿಯಾಂಕಾ ಕೂಡ ಪ್ರಧಾನಿಯೊಂದಿಗೆ ಕೀನ್ಯಾ ಬಂದಿದ್ದರು. ನನಗೇಕೊ ಮನೇಕಾಳ ವರ್ತನ ವಿಚಿತ್ರವೆಂದು ಕಂಡು ಬಂತು. ಇಂದಿರಾಜಿ ಅಧಿಕ ಕಾರ್ಯಗಳಲ್ಲಿ ತೊಡಗಿದ್ದಾಗಲೆಲ್ಲ ರಾಹುಲ-ಪ್ರಿಯಾಂಕರನ್ನು ನೋಡಿಕೊಳ್ಳುವ ಜವಾಬ್ದಾರಿ ಮನ ಕಾಳದು. ಆದರೆ ಅದೇಕೋ ವಿಷಣ್ಣವದನಳಾಗೇ ಕೂತುಕೊಳ್ಳುತ್ತಿದ್ದ ಮನೇಕಾ ತಾನು ಮಕ್ಕಳನ ನೋಡಿಕೊಳ್ಳುವುದಿರಲಿ, ತನ್ನನ್ನೇ ಬೇರೊಬ್ಬರು ನೋಡಿಕೊಳ್ಳಬೇಕು ಎಂದು ಬಯಸುವಂ ತೋರುತ್ತಿತ್ತು. ಭಾರತದ ಹೈಕಮಿಶನ್ ಕಚೇರಿಯವರು ಮಾಡಿದ್ದ ವ್ಯವಸ್ಥೆಯೋ ದೇವರಿಗೇ ಪ್ರೀ

ಇಂದಿರಾಜಿಗೆ ತಮ್ಮ ಅನುಕೂಲ ಸೌಕರ್ಯಗಳ ಕೊರತೆಯದಲ್ಲ ಚಿಂತೆಯಿದ್ದದ್ದು. ಮೊಮ್ಮಕ್ಕಳು ಇದರಿಂದ ತೊಂದರೆಗೀಡಾಗಬಾಗದೆಂಬುದು ಅವರ ಕಾಳಜಿ. ರಾಹುಲ್ ಮತ್ತು ಪ್ರಿಯಾಂಕಾ ಏನೇನು ನೋಡಬೇಕು, ಅವರಿಬ್ಬರಿಗೆ ಎಂಥ ಆಹಾರದ ಸರಬರಾಜಾಗಬೇಕು ಎಂಬುದನ್ನೆಲ್ಲ ತಾವೇ ನಿಂತು ವ್ಯವಸ್ಥೆಯಾಗುವ ಹಾಗೆ ನೋಡಿಕೊಂಡರು.

ಮಕ್ಕಳಿಗೆ ಬಟ್ಟೆ ತೊಡಿಸುವಲ್ಲಿಂದ ಅವರ ಊಟ-ವಿಶ್ರಾಂತಿ ಮತ್ತು ಸ್ಥಳ ವೀಕ್ಷಣಾ ಕಾರ್ಯಕ್ರಮದವರೆಗೆ ಎಲ್ಲವೂ ಅಜ್ಜಿಯ ನಜರಿನಲ್ಲಿಯೇ ನಡೆಯಬೇಕು. ಅಭಯಾರಣ್ಯದಲ್ಲಿ ಪ್ರತಿಯೊಂದು ಪ್ರಾಣಿ'ಯನ್ನೂ ತೋರಿಸಿ, ಅದರ ಕುರಿತ ಎಲ್ಲ ವಿವರಗಳನ್ನೂ ಮೊಮ್ಮಕ್ಕಳಿಗೆ ನೀಡುವಾಗಿನ ಅವರ ಸಂಭ್ರಮ ನೋಡಬೇಕು. ಆಯಾ ಪ್ರಾಣಿ'ಯ ಆಹಾರ-ವಿಹಾರ, ಜೀವನ ಕ್ರಮ, ಬದುಕಿನ ಅವಧಿ, ಅವುಗಳ ಪ್ರಜಾತಿಗಳು ಒಂದೇ ಎರಡೇ... ಜತೆಗಿದ್ದ ಗೈಡ್‌ಗಳೂ ನಾಚುವಂತಿತ್ತು ಇಂದಿರಾರ ಪ್ರಾಣಿ' ಜ್ಞಾನ.

## ಮುನ್ನೂರು ಗಂಡಸರ ನಡುವೆ

ತಾವು ಭೇಟಿ ನೀಡುವ ದೇಶದ ಸಭ್ಯತೆಗೆ-ರೀತಿ ರಿವಾಜುಗಳಿಗೆ ಭಂಗಬಾರದ ಹಾಗೆ ಇಂದಿರಾ ನಡೆದುಕೊಳ್ಳುತ್ತಿದ್ದರೆಂಬುದನ್ನಿಲ್ಲಿ ಹೇಳಲೇಬೇಕು. ಅದಕ್ಕಾಗಿ ಅವರು ವಹಿಸುತ್ತಿದ್ದ ಮುನ್ನೆಚ್ಚರಿಕೆಗಳು ನನ್ನನ್ನು ಅಚ್ಚರಿಗೀಡು ಮಾಡಿದ್ದಿದೆ.

ಸೌದಿ ಅರೇಬಿಯದ ಭೇಟಿ (೧೯೮೨ರ ಎಪ್ರಿಲ್ ೧೭ ರಿಂದ ೨೦) ಇದಕ್ಕೊಂದು ಶ್ರೇಷ್ಠ ಉದಾಹರಣೆ. ಅದು ಇಸ್ಲಾಂ ಸಂಪ್ರದಾಯವನ್ನು ಅತ್ಯಂತ ನಿಷ್ಠೆಯಿಂದ ಪಾಲಿಸುವ ದೇಶ. ಅಲ್ಲದೆ ಪುರುಷ ಪ್ರಧಾನ ರಾಷ್ಟ್ರವೆಂದು ಹೆಸರಾದದ್ದು. ಪಾಕಿಸ್ತಾನ ಆದಾಗಲೇ 'ಭಾರತ ಇಸ್ಲಾಂ ವಿರೋಧಿ; ಮುಸ್ಲಿಮರಿಗೆ ಇಲ್ಲಿ ತುಂಬ ತೊಂದರೆ ಕೊಡಲಾಗುತ್ತಿದೆ,' ಎಂಬ ಸಲ್ಲದ ಸೊಲ್ಲೆತ್ತಿ ಮುಸ್ಲಿಂ ರಾಷ್ಟ್ರಗಳವರಿಗೆ ಒಂದು ತಪ್ಪು ಕಲ್ಪನೆಯನ್ನುಂಟು ಮಾಡುವ ಯತ್ನದಲ್ಲಿ ತೊಡಗಿತ್ತು. ಅರಬ್ ರಾಷ್ಟ್ರಗಳವರ ಮೇಲೆ ಈ ಅಭಿಪ್ರಾಯ ತುಂಬ ಪರಿಣಾಮ ಬೀರಿದ್ದಂತೆ ಇಂದಿರಾಜಿಗೆ ವರದಿಗಳು ಬಂದಿದ್ದವು. ಸೌದಿ ಅರೇಬಿಯಕ್ಕೆ ಪ್ರವಾಸ ನಡೆಸಿ ಭಾರತದ ಕುರಿತು ನೈಜ ಅಭಿಪ್ರಾಯ ಅಲ್ಲಿ ಮೂಡುವಂತೆ ಮಾಡುವುದು ಈ ಭೇಟಿಯ ಪ್ರಮುಖ ಉದ್ದೇಶಗಳಲ್ಲೊಂದಾಯಿತು. ಅಸ್ವಸ್ಥರಾಗಿದ್ದ ದೊರೆ ಖಲೀದರನ್ನು ಭೇಟಿಯಾಗಿ ಮಾತನಾಡುವ ಕಾರ್ಯಕ್ರಮವು ಈ ದಿಶೆಯಲ್ಲಿನ ಮುಖ್ಯ ಹೆಜ್ಜೆ. ಭಾರತ ಮೆಲ್ಲ ಮೆಲ್ಲನೆ ರಶಿಯದತ್ತ ವಾಲುತ್ತಿದೆ, ಕಮ್ಯುನಿಸಮ್ಮನ್ನು ಅಪ್ಪಿಕೊಳ್ಳುತ್ತಿದೆ ಎಂಬುದು ಪಾಕಿಸ್ತಾನ ಮಾಡುತ್ತಿದ್ದ ಮತ್ತೊಂದು ಮಿಥ್ಯಾರೋಪ. ಇದರಿಂದ ಇಸ್ಲಾಂವಾದಿ ರಾಷ್ಟ್ರಗಳಲ್ಲಿ ನಿಜವಾಗಿಯೂ ಆತಂಕದ ಅಲೆಗಳೆದ್ದಿದ್ದವು. ನಿಜಕ್ಕೂ ಭಾರತವೊಂದು ಜಾತ್ಯತೀತ ರಾಷ್ಟ್ರವೆಂಬುದನ್ನು ಸೌದಿ ಅರೇಬಿಯದಂಥ ಸಂಪ್ರದಾಯವಾದಿ ರಾಷ್ಟ್ರಕ್ಕೆ ಬಿಂಬಿಸುವುದು ಆಗಿನ ಅಗತ್ಯವಾಗಿತ್ತು.

ಬೇರೆ ರಾಷ್ಟ್ರಗಳ ಧುರೀಣೆಯರು ಸೌದಿ ಅರೇಬಿಯಕ್ಕೆ ಭೇಟಿ ಇತ್ತಾಗ ಅನುಸರಿಸಿದ ಕ್ರಮಗಳ ಕುರಿತು ಇಂದಿರಾ ಪೂರ್ಣ ಮಾಹಿತಿಯನ್ನು ಪ್ರಯಾಣ ಹೊರಡುವ ಎಷ್ಟೋ ದಿನ ಮುಂಚೆಯೆ ಪಡೆದುಕೊಂಡರು. ಕೆಲವೇ ವಾರಗಳ ಮೊದಲು ಮಾರ್ಗರೆಟ್ ಥ್ಯಾಚರ್ ಸೌದಿಗೆ ಬಂದು ಹೋಗಿದ್ದರು. ಅಲ್ಲಿರುವಷ್ಟು ಕಾಲವೂ ಆಕೆ ಮುಂಗೈ ಮುಚ್ಚುವಂಥ ಬಟ್ಟೆ ತೊಟ್ಟಿದ್ದರೆಂಬುದನ್ನು ಇಂದಿರಾ ಗಮನಿಸಿದರು. ಪೂರ್ಣ ತೋಳಿನ ರವಿಕೆ, ಮತ್ತು ತಲೆ ಮೇಲೆ ಸೆರಗು ಹೊದ್ದ ಸೀರೆ ಇಂದಿರಾ ಈ ಪ್ರವಾಸದ ತಮ್ಮ ಉಡಿಗೆ ಎಂದು ನಿರ್ಧರಿಸಿದರು.

ಆ ಶ್ರೀಮಂತ ರಾಷ್ಟ್ರದಲ್ಲಿನ ಸ್ವಾಗತ- ಆತಿಥ್ಯಗಳೂ ಶ್ರೀಮಂತವೆ. ಇಂದಿರಾಜಿ ಅಲ್ಲಿಯ ಮಂತ್ರಿಗಳನ್ನು ಪ್ರತ್ಯೇಕವಾಗಿ ಕಂಡು ಮಾತುಕತೆ ನಡೆಸಿದರು. ಪ್ರತಿಯೊಂದು ಭೇಟಿಯಲ್ಲೂ

ಪಾಕಿಸ್ತಾನದ ಅಪಪ್ರಚಾರ ಮಿಥ್ಯಾರೋಪವೆಂಬುದನ್ನು ಸ್ಪಷ್ಟಪಡಿಸುತ್ತಿದ್ದರು. ಪ್ರಣಬ್ ಮುಖರ್ಜಿ ಮತ್ತು ನಾನು ಈ ಮಾತುಕತೆಗಳುದ್ದಕ್ಕೂ ಸಹಾಯಕರಾಗಿದ್ದೆವು. ಬಹುತೇಕ ಮಂತ್ರಿಗಳು ಮಹಿಳೆಯೊಂದಿಗೆ ಮಾತನಾಡಲು ನಾಚುತ್ತಿದ್ದುದು ಗಮನಾರ್ಹವಾಗಿತ್ತು. ಆದರೆ ಒಂದೆರಡು ನಿಮಿಷಗಳಲ್ಲಿಯೇ ಅವರ ಸಂಕೋಚ-ನಾಚಿಕೆಯನ್ನು ತಮ್ಮ ಆತ್ಮೀಯ-ಗೌರವನೀಯ ನಡೆ-ನುಡಿಗಳಿಂದ ಇಂದಿರಾ ಇಲ್ಲವಾಗಿಸಿಬಿಡುವಲ್ಲಿ ಸಫಲರಾಗುತ್ತಿದ್ದರು.

ದೊರೆ ಖಲೀದ್ ಇಂದಿರಾರ ಗೌರವಾರ್ಥ ನೀಡಿದ ಔತಣಕೂಟ ಆ ದೇಶದ ಮಟ್ಟಿಗಷ್ಟೇ ಅಲ್ಲ ನಮ್ಮ ಮಟ್ಟಿಗೂ ಅಭೂತಪೂರ್ವ: ಅಲ್ಲಿ ಹಾಜರಿದ್ದವರು ಸೌದಿಯ ದೊರೆ ಹಾಗೂ ರಾಜಕುಮಾರರಾದ ಫಹ್ದ್ ಅಬ್ದುಲ್ಲಾ, ಸುಲ್ತಾನ್, ಸೌದ್ ಅಲ್ಲದೆ ಮಂತ್ರಿಗಳು ಹಾಗೂ ಪ್ರಧಾನಿ ಇಂದಿರಾ ಮತ್ತವರ ಪರಿವಾರ. ಒಟ್ಟು ಮುನ್ನೂರು ಜನಕ್ಕೂ ಹೆಚ್ಚು ಜನರಿದ್ದ ಆ ಔತಣಕೂಟದಲ್ಲಿ ಏಕಮಾತ್ರ ಮಹಿಳೆ ಇಂದಿರಾ. ಅಲ್ಲಿ ದೊರೆ ಏರ್ಪಡಿಸುವ ಔತಣಕೂಟಗಳಲ್ಲಿ ಸಾಮಾನ್ಯವಾಗಿ ಮಹಿಳೆಯರಿಗೆ ಆಮಂತ್ರಣವಿರುವುದಿಲ್ಲವೆಂದು ಯಾರೋ ನನಗೆ ಹೇಳಿದರು.

ಸೌದಿ ಅರೇಬಿಯದ ಭೇಟಿಯಲ್ಲಿ ಇಂದಿರಾ ಸದ್ಭಾವವನ್ನು ಬೆಳೆಸುವಲ್ಲಿ-ಸಂಬಂಧವನ್ನು ಬೆಸೆಯುವಲ್ಲಿ ಯಶಸ್ವಿಯಾಗಿದ್ದರು. "ತೀರ ಹಳೆಯ ಗೆಳೆಯರಿಬ್ಬರು ಬಹು ವರ್ಷಗಳ ನಂತರ ಭೇಟಿಯಾದರೆ ಹೇಗಿರುತ್ತದೋ ಹಾಗಿತ್ತು" ಎಂದು ಈ ಪ್ರವಾಸದ ಕುರಿತು ಸ್ವತಃ ರಾಜಕುಮಾರ ಫಹ್ದ್ ಹೇಳಿದ್ದು ಇಲ್ಲಿ ಪುನರುಚ್ಚಾರಕ್ಕೆ ಅರ್ಹವಾದ ವಿಚಾರ.

## ಎಂ.ಜಿ.ಆರ್.-ಇಂದಿರಾ ಸೌಹಾರ್ದತೆ

ಕಾಂಗ್ರೆಸ್ಸೇತರ ಮುಖ್ಯಮಂತ್ರಿಗಳೊಂದಿಗಿನ ಇಂದಿರಾರ ಸಂಬಂಧ ಸ್ನೇಹಪೂರ್ಣವಾಗಿಯೇ ಇತ್ತು. ಜ್ಯೋತಿಬಸು ಮತ್ತು ರಾಮಕೃಷ್ಣ ಹೆಗಡೆ ಮುಖ್ಯಮಂತ್ರಿಗಳಾಗುವುದಕ್ಕಿಂತ ಎಷ್ಟೋ ಮುಂಚಿನಿಂದಲೂ ಇಂದಿರಾಜಿಗೆ ಪರಿಚಿತರು. ಹೀಗಾಗಿ ಅವರೊಂದಿಗಿನ ಸ್ನೇಹಪೂರ್ಣ ಸಂಬಂಧದ ಮುಂದುವರಿಕೆಗೆ ಯಾವ ಬಾಧೆಯೂ ಇರಲಿಲ್ಲ. ಆದರೆ ರಾಜಕಾರಣಕ್ಕೆ ಆಗಷ್ಟೇ ಕಾಲಿರಿಸಿ, ಆಂಧ್ರಪ್ರದೇಶದ ಮುಖ್ಯಮಂತ್ರಿಯಾಗಿದ್ದ ಎನ್.ಟಿ. ರಾಮರಾವ್ ಪ್ರಧಾನಿಗೆ ಅಪರಿಚಿತ ವ್ಯಕ್ತಿಯಾದರೂ ಅಲ್ಪಾವಧಿಯಲ್ಲೇ ಅವರಿಬ್ಬರಲ್ಲಿ ವಿಶ್ವಾಸಪೂರ್ಣ ಸಂಬಂಧ ಬೆಳೆಯಿತು. ಫರೂಕ್ ಅಬ್ದುಲ್ಲಾರಂತೂ ಇಂದಿರಾಜಿಯಿಂದ ಕುಟುಂಬದ ಸದಸ್ಯರಲ್ಲೊಬ್ಬರೆಂಬಂಥ ಆದರಣೆ ಪಡೆದವರು. ಕೆಲವು ದಿನಗಳ ಮಟ್ಟಿಗೆ ಅವರಿಬ್ಬರಲ್ಲಿ ಬಿರುಕುಂಟಾದದ್ದೇನೂ ಸುಳ್ಳಲ್ಲ.

ಆದರೆ, ಎಂ.ಜಿ.ಆರ್.- ಇಂದಿರಾರ ಸೌಹಾರ್ದತೆಗೆ ವಿಶಿಷ್ಟ ಸ್ಥಾನವೇ ಇದೆ. ೧೯೮೦ ಶುರುವಾತಿಗೆ ಇಬ್ಬರಲ್ಲೂ ಒಡಕುಂಟಾದದ್ದೇನೋ ನಿಜ. ಕೆಲವು ಭೇಟಿಗಳು, ಮುಕ್ತ ಚರ್ಚೆಗಳ ನಂತರ ಅವರಿಬ್ಬರಲ್ಲಿ ಪರಸ್ಪರ ಗೌರವ-ನಂಬಿಕೆಗಳು ಬಲಗೊಂಡವು. ಆ ಭೇಟಿ-ಮಾತುಕತೆಗಳಿಗೆ ಸಾಕ್ಷಿಯಾಗಿರುವ ನಾನು 'ತಪ್ಪು ಕಲ್ಪನೆ'ಗಳನ್ನು ನಿವಾರಿಸಿಕೊಳ್ಳುವುದಕ್ಕಾಗಿ ನಡೆದ ಆ ಪ್ರಯತ್ನಗಳನ್ನು ಬಹುಮುಖ್ಯ ಘಟನೆ ಎನ್ನುತ್ತೇನೆ.

ಜನತಾ ಆಡಳಿತದ ಸಂದರ್ಭ. ಇಂದಿರಾಜಿ ತಮಿಳುನಾಡಿನ ತಂಜಾವೂರು ಮತ ಕ್ಷೇತ್ರದಿಂದ ಲೋಕಸಭಾ ಉಪಚುನಾವಣೆಗೆ ಸ್ಪರ್ಧಿಸಬಯಸಿದ್ದರು. ಎಂ.ಜಿ.ಆರ್. ತಮ್ಮ ಪಕ್ಷದ ಸಂಪೂರ್ಣ ಬೆಂಬಲವನ್ನೀಯಲು ಮುಂದಾದರು. ಆದರೆ ಅಂದಿನ ಪ್ರಧಾನಿ ಮೊರಾರ್ಜಿಯವರ ಒತ್ತಾಯದ ಮೇರೆಗೆ ಬೆಂಬಲವನ್ನು ಹಿಂತೆಗೆದುಕೊಂಡರೆಂದು ಹೇಳಲಾಗುತ್ತದೆ. ಇಂದಿರಾ ಸ್ಪರ್ಧಿಸುವ ವಿಚಾರವನ್ನೇ ಕೈಬಿಟ್ಟರು. ಎಂ.ಜಿ.ಆರ್. ತಮಗೆ ಕೈ ಕೊಟ್ಟರೆಂಬುದು ಮಾತ್ರ ಇಂದಿರಾರ ಮನಸ್ಸಿನಲ್ಲಿ ಗಟ್ಟಿಯಾಗುಳಿಯಿತು. ತಮಿಳುನಾಡಿನ ಮುಖ್ಯಮಂತ್ರಿಯಷ್ಟೇ ಅಲ್ಲ, ಕೆಲ ಪ್ರಮುಖ ಮಂತ್ರಿಗಳು

# ಪುಸ್ತಕ ವಿಭಾಗ

ಎಡೆಬಿಡದೆ ಇಂದಿರಾಜಿಯ ಟೀಕೆಯಲ್ಲಿ ನಿರತರಾದರು. ಭಾಷಣಗಳಲ್ಲಿ, ಪತ್ರಿಕಾ ಹೇಳಿಕೆಗಳಲ್ಲಿ 'ಇಂದಿರಾ ಭರ್ತ್ಸನೆ'ಯೇ ಅವರ ಮೂಲ ಉದ್ದೇಶ ಹಾಗೂ ಮುಖ್ಯ ಗುರಿಯಾಗಿರುತ್ತಿತ್ತು. ಇಂದಿರಾ ಮತ್ತೆ ಪ್ರಧಾನಿಯಾದ ಮೇಲೆಯೂ ಅದು ಮುಂದುವರಿಯುತ್ತಲೇ ಹೋಯಿತು. ತಮಿಳುನಾಡು ಕಾಂಗ್ರೆಸ್ ಪಕ್ಷದ ಕೆಲವು ಸದಸ್ಯರಿಗೆ ಎಂ.ಜಿ.ಆರ್. ಎಂದಿಗೂ ಇಂದಿರಾರಿಗೆ ಸಮೀಪದವರಾಗಬಾರದು ಎಂಬ ಹಟ. ಹೀಗಾಗಿ ಅವರೆಲ್ಲ ಪತ್ರಿಕೆಗಳಲ್ಲಿ ಪ್ರಕಟವಾಗುವ ಇಂದಿರಾ ವಿರೋಧಿ ಹೇಳಿಕೆಗಳನ್ನು, ಕಾಂಗ್ರೆಸ್ ವಿರೋಧಿ ವರದಿಗಳನ್ನು ತಮಿಳಿನಿಂದ ಇಂಗ್ಲೀಷಿಗೆ ಅನುವಾದಿಸಿ, ಇವೆಲ್ಲ ಎಂ.ಜಿ.ಆರ್. ಬಯಕೆಯಂತೆಯೇ ಮಾಡಲಾದ ಭಾಷಣಗಳು ಎಂದು ಇಂದಿರಾಜಿಗೆ ಬಿಂಬಿಸುವ ಪ್ರಯತ್ನಕ್ಕೆ ತೊಡಗಿದರು.

೧೯೮೭ರ ಸಪ್ಪೆಂಬರ್. ಇಂದಿರಾ ಮದ್ರಾಸಿಗೆ ಹೊರಟಿದ್ದರು. ಅದೇ ವಿಮಾನದಲ್ಲಿ ತಮಿಳುನಾಡಿನ ಒಬ್ಬ ಕಾಂಗ್ರೆಸ್ ಎಂ.ಪಿ.ಯೂ ಇದ್ದರು. ಎಂ.ಜಿ.ಆರ್.ರ ಸಂಪುಟದ ಮಂತ್ರಿಯೊಬ್ಬ ಮಾಡಿದ್ದ ಕಾಂಗ್ರೆಸ್ಸನ್ನೂ ಪ್ರಧಾನಿಯನ್ನೂ ಹೀನಾಯವಾಗಿ ತೆಗಳಿದ್ದಂಥ ಪತ್ರಿಕಾ ವರದಿಗಳ ಇಂಗ್ಲೀಷ್ ಅನುವಾದಗಳನ್ನು ಇಂದಿರಾಜಿಗೆ ಕೊಟ್ಟರು. ರಾಜ್ಯವೊಂದರ ಮಂತ್ರಿಯೊಬ್ಬ ಪ್ರಧಾನಿಯನ್ನು ಹೀಗೆ ವಾಚಾಮಗೋಚರವಾಗಿ ಬೈದದ್ದು, ಅವರ ವಿರುದ್ಧ ವೈಯಕ್ತಿಕವಾಗಿ ಇಲ್ಲಸಲ್ಲದ ಆಪಾದನೆಗಳನ್ನು ಮಾಡಿದ್ದು ಇಂದಿರಾಜಿಯನ್ನು ಕೆರಳಿಸಿತು. ನನ್ನನ್ನು ತಮ್ಮ ಕ್ಯಾಬಿನ್ನಿಗೆ ಕರೆಸಿಕೊಂಡು ಆ ಕಾಗದಗಳನ್ನು ಚಾಚಿದರು.

ಮದ್ರಾಸಿನಲ್ಲಿ ಇಂದಿರಾಜಿಯನ್ನು ಸ್ವಾಗತಿಸಲು ಎಂ.ಜಿ.ಆರ್. ವಿಮಾನ ನಿಲ್ದಾಣದಲ್ಲಿ ಕಾದಿದ್ದರು. ಪ್ರಧಾನಿ ಯಾಕೋ ತಮ್ಮನ್ನು ಸೌಜನ್ಯಕ್ಕಾದರೂ ಸರಿಯಾಗಿ ಮಾತನಾಡಿಸಲಿಲ್ಲವೆಂಬುದು ಎಂ.ಜಿ.ಆರ್. ಗಮನಕ್ಕೆ ಬಂತು. ಅಲ್ಲಿಂದ ಪ್ರಧಾನಿ ರಾಜಭವನಕ್ಕೆ ತೆರಳಬೇಕು. ಎಂ.ಜಿ.ಆರ್. ತೀರ ಮುಂದೆ- ಮಾರ್ಗದರ್ಶಕ ಕಾರುಗಳ ಜೊತೆಗಿದ್ದ ತಮ್ಮ ಕಾರಿನಲ್ಲಿದ್ದರು. ಪ್ರಧಾನಿಗಳ ಕಾರು ಇದ್ದದ್ದು ತೀರ ಹಿಂದೆ. ಏರ್‌ಪೋರ್ಟಿನ ಮುಖ್ಯ ದ್ವಾರವನ್ನು ಸಮೀಪಿಸುತ್ತಿದ ಹಾಗೆಯೇ ತಮ್ಮ ಕಾರನ್ನು ನಿಲ್ಲಿಸಲು ಹೇಳಿದರು ಇಂದಿರಾಜಿ. ಮುಖ್ಯಮಂತ್ರಿಗಳೂ ತಮ್ಮ ಕಾರಿನಲ್ಲಿಯೇ ಬರಲಿ ಎಂಬ ಇಚ್ಛೆ ವ್ಯಕ್ತಪಡಿಸಿದರು. ಎಂ.ಜಿ.ಆರ್.ಗೆ ಇದೊಂದು ದೊಡ್ಡ ಅಚ್ಚರಿ. ಅವರು ಕೂಡಲೇ ಪ್ರಧಾನಿಯ ಕಾರನ್ನೇರಿದರೆನ್ನಿ.

ಪತ್ರಿಕಾ ವರದಿಗಳ ಪ್ರಸ್ತಾಪವೆತ್ತಿದ್ದ 'ಇಂದಿರಾ ಇಂಥದಕ್ಕೆಲ್ಲ ಯಾಕೆ ಕುಮ್ಮಕ್ಕು ಕೊಡುತ್ತಿದ್ದೀರೆಂದು ಕೇಳಿದರೆ ಎಂ.ಜಿ.ಆರ್. ಏನು ಉತ್ತರಿಸಬೇಕು? ಮೊದಲೇ ಕೋಪದ ಮುದ್ದೆಯಾಗಿ ಕೂತ ಪ್ರಧಾನಿಯೆದುರು ಅದೂ ತಮಗೆ ಮಾತಾಡಲು ಅಡ್ಡಿಯಾಗುವ ಇಂಗ್ಲೀಷಿನಲ್ಲಿ ಮುಖ್ಯಮಂತ್ರಿ ಮಾತನಾಡಿಯಾರಾದರೂ ಹ್ಯಾಗೆ? ಕಾರಿನಲ್ಲಿ ಆ ವಿಷಯವಾಗಿ ಹೆಚ್ಚು ವಾದ-ವಿವಾದವನ್ನು ಬೆಳೆಯಗೊಡುವ ಮನಸ್ಸಿರಲಿಲ್ಲ ಎಂ.ಜಿ.ಆರ್.ಗೆ.. ರಾಜಭವನ ತಲಪಿದ ಮೇಲೆ ನನ್ನೆದುರು ಎಂ.ಜಿ.ಆರ್. ತಮಗೆ ಪ್ರಧಾನಿಯ ಮಾತಿನ ಧಾಟಿ ಹಿಡಿಸಲಿಲ್ಲವೆಂದು ಸ್ಪಷ್ಟವಾಗಿ ಹೇಳಿಬಿಟ್ಟರು. ಒಮ್ಮಿಂದೊಮ್ಮೆಲೆ ತಮ್ಮ ಮೇಲೆ ಅವರು ಹರಿಹಾಯ್ದದ್ದರಿಂದ ಇಕ್ಕಟ್ಟಿಗೆ ಸಿಲುಕಿದೆನೆಂದೂ, ಪರಿಸ್ಥಿತಿಯನ್ನು ಇನ್ನಷ್ಟು ವಿಕೋಪಕ್ಕೊಯ್ಯಬಾರದೆನ್ನುವ ಕಾರಣದಿಂದ ಸುಮ್ಮನುಳಿಯಬೇಕಾಯಿತೆಂದೂ ಎಂ.ಜಿ.ಆರ್. ಬೇಸರದಿಂದ ನುಡಿದರು. ಪತ್ರಿಕಾ ವರದಿಗಳ ವಿಷಯವಾಗಿ ತಾವೆಂದೂ ತಮ್ಮ ಯಾವುದೇ ಮಂತ್ರಿಗಾಗಲಿ, ಪಕ್ಷದ ಕಾರ್ಯಕರ್ತನಿಗಾಗಲಿ ಅಂಥದಕ್ಕೆ ಎಂದೂ ಪ್ರೋತ್ಸಾಹವಿತ್ತಿಲ್ಲ- ಮುಂದೆಂದೂ ಪ್ರೋತ್ಸಾಹವೀಯುವುದಿಲ್ಲ ಎಂದುದಲ್ಲದೆ ಹೀಗೆ ಮಾಡಿದವರು ಖಂಡಿತ ತಮ್ಮ ಜನ ಅಲ್ಲ ಎಂದು ಸ್ಪಷ್ಟವಾಗಿ ಹೇಳಿದರು. ಒಂದು ವೇಳೆ ಇಂಥದರಲ್ಲಿ ತಮ್ಮ ಪಕ್ಷದ ಯಾರೇ ತೊಡಗಿದ್ದರೂ ಖಂಡಿತ ತರಾಟೆಗೆ ತೆಗೆದುಕೊಳ್ಳುತ್ತೇನೆಂದರು. ತಮ್ಮ ಹಾಗೂ ಪ್ರಧಾನಿಯ ನಡುವೆ

ವಿಷಬೀಜ ಬಿತ್ತುವ ಯತ್ನದಲ್ಲಿ ಕೆಲವರು ತೊಡಗಿದ್ದರೆ ಅರಿವು ತಮಗಿದೆ ಎಂದ ಎಂ.ಜಿ.ಆರ್. ಇಂಥವರ ಕುರಿತು ಇಂದಿರಾಜಿ ಎಚ್ಚರದಿಂದಿರುವಂತೆ ಸೂಚಿಸಿ ಎಂದು ನನ್ನನ್ನು ಕೇಳಿಕೊಂಡರು. ತಾವೆಂದಿಗಾದರೂ ಇಂದಿರಾಜಿಯನ್ನು ಗೌರವದಿಂದಲೆ ಕಂಡಿರುವುದಾಗಿಯೂ, ಅವರೊಂದಿಗೆ ಸೌಹಾರ್ದದಿಂದಲೇ ಇರುವ ಪ್ರಾಮಾಣಿಕ ಕಳಕಳಿ ತಮ್ಮದೆಂದೂ ಎಂ.ಜಿ.ಆರ್. ಹೇಳಿದಾಗ ಅದು ಹೃದಯದಿಂದಲೇ ಬಂದ ಮಾತು ಎಂದು ನನಗನ್ನಿಸದೆ ಇರಲಿಲ್ಲ.

"ನಾನು ಅವರ ಒಳ್ಳೆಯ ಸ್ನೇಹಿತನಾಗಿರಬಯಸಿದ್ದೇನೆ. ಅವರೊಂದಿಗೆ ನೇರವಾಗಿ ಸಂವಾದಿಸುವ ಬಯಕೆ ನನಗೆ. ಇದರಲ್ಲಿ ನನ್ನನ್ನು ಕಂಡರಾಗದ ತಮಿಳುನಾಡಿನ ಕಾಂಗ್ರೆ ಮುಂದಾಳುಗಳ ಮಧ್ಯಸ್ಥಿಕೆ ಇರಲೇಬಾರದು," ಎಂಬ ಎಂ.ಜಿ.ಆರ್. ವಿಚಾರಗಳನ್ನು ನಾನು ಪ್ರಧಾನಿಯ ಗಮನಕ್ಕೆ ತಂದೆ. "ನೀವು ನೇರವಾಗಿ ಅವರೊಂದಿಗೆ ವ್ಯವಹರಿಸುವುದಾದರೆ ಇಂಥ ತೊಂದರೆಯೇ ಇರುವುದಿಲ್ಲ" ಎಂದೂ ಸೂಚಿಸಿದೆ. ತಮಗೆ ಎಂ.ಜಿ.ಆರ್.ರ ಕುರಿತ ಅಂಥ ತಪ್ಪುಕಲ್ಪನೆಯೇನಿಲ್ಲ. ಅವರ ಬಗ್ಗೆ ಒಳ್ಳೆಯ ಮನುಷ್ಯನೆಂಬ ಅಭಿಪ್ರಾಯ ತಮಗಿದೆ. ಅವರಿಚ್ಛೆಯಂತೆಯೇ ಆಗಲಿ ಎಂಬರ್ಥದ ಮಾತನ್ನಾಡಿದರು ಇಂದಿರಾ.

ಇದನ್ನು ಕೇಳಿದಾಗ ಎಂ.ಜಿ.ಆರ್. ಸಮಾಧಾನದ ನಿಟ್ಟುಸಿರು ಬಿಟ್ಟರು. ಅವರ ಮುಖ ಅರಳಿದ್ದನ್ನು ಕಂಡೆ. ಆದರೆ ಆ ಭೇಟಿಯಲ್ಲಿ ಸಂಬಂಧ ಸುಧಾರಣೆಯ ದಿಶೆಯಲ್ಲಿ ಹೆಚ್ಚಿನದೇನೂ ಸಾಧ್ಯವಾಗಲಿಲ್ಲ.

ನಂತರದ ತಿಂಗಳುಗಳಲ್ಲಿ ಅವರಿಬ್ಬರಲ್ಲಿ ಆದ ಅನೇಕ ಭೇಟಿಗಳ ಪರಿಣಾಮವಾಗಿ ಪರಸ್ಪರರಲ್ಲಿದ್ದ ವೈಷಮ್ಯದ ತೆರೆ ಸರಿದುಹೋಯಿತು. ಮೊದಮೊದಲು ತಮ್ಮ ಸಂಪುಟದ ವಿದ್ಯುತ್ ಮಂತ್ರಿ ಎಸ್.ರಾಮಚಂದ್ರನ್ ಜತೆಗೆ ಬರುತ್ತಿದ್ದ ಎಂ.ಜಿ.ಆರ್. ನಂತರ ತಾವೊಬ್ಬರೇ ಇಂದಿರಾರನ್ನು ಕಾಣತೊಡಗಿದರು. ಈ ಭೇಟಿ ಹಾಗೂ ಮಾತುಕತೆಗಳು ತೀರ ಖಾಸಗಿಯಾದವುಗಳೆಂಬ ಕಾರಣದಿಂದಲೂ, ಅವು ಗುಟ್ಟಾಗಿಯೇ ಇರಲೆಂಬ ಉದ್ದೇಶದಿಂದಲೂ ಎಂ.ಜಿ.ಆರ್. ಅವರು ತಮ್ಮ ತೀರ ನಂಬಿಗಸ್ಥರೆನಿಸಿದ್ದ ಎಸ್. ರಾಮಚಂದ್ರನ್‌ರನ್ನು ಬಿಟ್ಟು ಬರತೊಡಗಿದ್ದು ನನ್ನ ಗಮನಕ್ಕೆ ಬಂತು.

ಆದರೆ ಯಾವುದೇ ಭೇಟಿಯಲ್ಲೂ 'ಚುನಾವಣಾ ಮೈತ್ರಿ'ಯ ಪ್ರಸ್ತಾಪವಿರುತ್ತಿರಲಿಲ್ಲವೆಂಬುದು ಮುಖ್ಯ ಅಂಶ. ಇಂಥ ವಿಷಯಗಳಲ್ಲಿ ನೇರವಾಗಿ ವ್ಯವಹರಿಸುವ ಜಾಯಮಾನದವರಲ್ಲ ಇಂದಿರಾಜಿ. ಕೇವಲ ವಾತಾವರಣವನ್ನು ತಿಳಿಗೊಳಿಸಿಕೊಳ್ಳುವುದಕ್ಕೆ ಮತ್ತು ಪರಸ್ಪರರಲ್ಲಿ ವಿಶ್ವಾಸ ಹೆಚ್ಚುವುದಕ್ಕೆ ಮಾತ್ರ ಮಾತುಕತೆಗಳು ಸಹಾಯಕವೆಂಬುದು ಅವರ ನಂಬಿಕೆ. ಎಂ.ಜಿ.ಆರ್. ತುಂಬ ಸೂಕ್ಷ್ಮಮತಿ. ಇಂದಿರಾಜಿಗೆ ಕಾಂಗ್ರೆ ಮತ್ತು ಎ.ಐ.ಎ.ಡಿ.ಎಂ.ಕೆ. ಪಕ್ಷಗಳಲ್ಲಿ ಚುನಾವಣಾ ಮೈತ್ರಿಯು ಬೇಕಾಗಿದೆಯೆಂಬುದನ್ನವರು ಗ್ರಹಿಸಿದರು. ಕಾಲಾಂತರದಲ್ಲಿ ಉಭಯ ಬಣಗಳವರೂ ಅಂಥ ಮೈತ್ರಿಯನ್ನು ತುಂಬ ಸಂತೋಷದಿಂದ ಸ್ವಾಗತಿಸಿದರೆಂಬುದನ್ನು ಬೇರೆ ಹೇಳಬೇಕೆ ?

## 'ಮೌಂಟ್ ಎವರೆಸ್ಟ್-ಇರುವೆ ಹುತ್ತ'

ಒಂದು ಸಂದರ್ಭದ ಮಾತುಕತೆ ನನ್ನ ನೆನಪಲ್ಲಿ - ಅದು ಕುತೂಹಲಕಾರಿಯಾದ ಕಾರಣದಿಂದ-ಗಟ್ಟಿಯಾಗಿ ಕುಳಿತಿದೆ. ೧೯೮೩ರ ಎಪ್ರಿಲ್ ತಿಂಗಳು. ಮದ್ರಾಸಿನ ರಾಜಭವನದಲ್ಲಿ ಆ ಇಬ್ಬರು ಮಹನೀಯರಲ್ಲಿ ಸ್ನೇಹಪೂರ್ಣ ಸಂಭಾಷಣೆ ನಡೆದಿತ್ತು. ಇಂದಿರಾ ಒಳ್ಳೆಯ ಮೂಡಿನಲ್ಲಿದ್ದರು. ಎಂ.ಜಿ.ಆರ್. ಕೂಡ ಗೆಲುವಿನ ಬುಗ್ಗೆಯಂತಿದ್ದರು. ಅದಾವುದೋ ಒಂದು ಸೂಕ್ಷ್ಮ ರಾಜಕೀಯ ಸಂಗತಿಯ ಪ್ರಸ್ತಾಪ ಬಂತು. ಅದಕ್ಕೊಂದು ಪರಿಹಾರ ಕಂಡುಕೊಳ್ಳಬೇಕಿತ್ತು. ಎಷ್ಟೊತ್ತಾದರೂ ಅಂಥ ಪರಿಹಾರವೇ ಕಂಡುಬರಲಿಲ್ಲ. ಇಂದಿರಾಜಿ ನಗುನಗುತ್ತ ಇಂಗ್ಲೀಷಿನಲ್ಲಿ ಹೇಳಿದರು: "ಇದರಲ್ಲಿ

ಯಾಕೋ ನನ್ನ ತಲೆ ಓಡ್ತಾನೇ ಇಲ್ಲ. ಮುಖ್ಯಮಂತ್ರಿಗಳೆ, ನೀವು ತುಂಬ ನುರಿತ ರಾಜಕಾರಣಿ. ಅಷ್ಟೇ ಘಾಟಿ ಮನುಷ್ಯ ಕೂಡ. ನಿಮ್ಮಿಂದಲೇ ಪರಿಹಾರಾತ್ಮಕ ಸಲಹೆ ಬರಲಿ..." ನಾನು ಅದನ್ನು ಇದ್ದಕಿದ್ದ ಹಾಗೆಯೇ ತಮಿಳಿಗೆ ಇಳಿಸಿದೆ. ಎಂ.ಜಿ.ಆರ್. ಕೂಡಲೇ ದೊಡ್ಡದಾಗಿ ನಗುತ್ತ ತಮಿಳಿನಲ್ಲಿ ಉತ್ತರಿಸಿದರು- "ನಾನು ನುರಿತ ರಾಜಕಾರಣಿ ಮತ್ತು ಅಷ್ಟೇ ಘಾಟಿ ಮನುಷ್ಯ ಅಂತ ಅಮ್ಮಾ ಅಭಿಪ್ರಾಯವೆ ? ರಾಜಕಾರಣಕ್ಕೆ ಸಂಬಂಧಿಸಿದಂತೆ ಈ ಮೌಂಟ್ ಎವರೆಸ್ಟ್ ಎದುರು ನಾನೊಂದು ಇರುವೆ ಹುತ್ತ ಅಷ್ಟೇ." ಅವರ ಮಾತಿನ ಇಂಗ್ಲೀಷ್ ಅನುವಾದ ಕೇಳಿದಾಗ ಇಂದಿರಾಜಿ ನಿಜಕ್ಕೂ ಬೆಟ್ಟದಷ್ಟೆತ್ತರದ ನಗೆ ಚೆಲ್ಲಿದರು. ಎಂ.ಜಿ.ಆರ್.ರ. ಮಾತಿನ ಚಾತುರ್ಯಕ್ಕೆ ತಲೆದೂಗಿದರು. ಕೊನೆಗೆ ಆ ಇರುವೆ ಹುತ್ತವೇ ಪರಿಹಾರವೊಂದನ್ನು ಸೂಚಿಸಿತೆನ್ನಿ.

ಅವರಿಬ್ಬರ ಮಾತುಕತೆಗಳಲ್ಲಿ ಕೇವಲ ತಮಿಳುನಾಡಿನ ಪ್ರಸ್ತಾಪವಿರುತ್ತಿತ್ತೆಂದು ಭಾವಿಸಬೇಡಿ. ಅಥವಾ ಶ್ರೀಲಂಕಾದ ತಮಿಳರ ಸಮಸ್ಯೆಯಷ್ಟೆ ಚರ್ಚಿಸಲ್ಪಡುತ್ತಿತ್ತೆಂದೂ ಅಂದುಕೊಳ್ಳಬೇಡಿ. ಪ್ರಮುಖ ರಾಷ್ಟ್ರಿಯ ಸಮಸ್ಯೆಗಳಾದ ಅಕಾಲಿಗಳ ಧಾಂಧಲೆ, ಅಸ್ಸಾಮಿನ ವಿದ್ಯಾರ್ಥಿ ಚಳವಳಿಗಳವರೆಗೂ ಇರುತ್ತಿತ್ತು ಚರ್ಚೆಯ ವಿಷಯ ವ್ಯಾಪ್ತಿ. ಎಂ.ಜಿ.ಆರ್. ಇಂಥ ಅನೇಕ 'ತಲೆನೋವು'ಗಳಿಗೆ ತಮ್ಮದೇ ಆದ ಶಮನೋಪಾಯಗಳನ್ನು ಹೇಳುತ್ತಿದ್ದರು.

## "ಸಿ.ಎಂ.... ಗೆದೆಯುತ್ತೀರಿ"

೧೯೮೪ರ ಅಕ್ಟೋಬರ್ ೧೬. ಪ್ರಧಾನಿ ತಮ್ಮ ಕಚೇರಿಯಲ್ಲಿದ್ದರು. ಎಂ.ಜಿ.ಆರ್.ಗೆ ಪಕ್ಷಾಘಾತವಾಗಿದೆ ಎಂಬ ಸುದ್ದಿಯಿಂದ ಕಳವಳಗೊಂಡರು ಇಂದಿರಾ. ತತ್‌ಕ್ಷಣ ಅವರು ಅಮೆರಿಕ, ಇಂಗ್ಲೆಂಡ್‌ಗಳಲ್ಲಿ ಲಭ್ಯವಾಗಬಹುದಾದ ತಜ್ಞ ವೈದ್ಯರ ಸೇವೆಯ ಕುರಿತು ವಿಚಾರಿಸತೊಡಗಿದರು. ತಾವು ತುರ್ತಾಗಿ ಮದ್ರಾಸಿಗೆ ಹೋಗಲೇಬೇಕು, ವ್ಯವಸ್ಥೆ ಮಾಡಿ ಎಂದು ನಮಗೆಲ್ಲ ಆದೇಶವಿತ್ತರು.

ನಾನು ಮತ್ತು ಜಿ.ಪಾರ್ಥಸಾರಥಿ ಅಂದು ಮಧ್ಯಾಹ್ನ ೧-೩೦ಕ್ಕೆ ಹೊರಟ ವಿಮಾನದಲ್ಲಿ ಪ್ರಧಾನಿಯೊಂದಿಗೆ ಮದ್ರಾಸಿಗೆ ಪಯಣಿಸಿದೆವು. ಹೊರಡುವ ಮುನ್ನವೆ ಅವರ ಸೂಚನೆಯಂತೆ ನಾನು ಮದ್ರಾಸಿಗೆ ಫೋನ್ ಮಾಡಿ ರಾಜ್ಯಪಾಲ ಖುರಾನಾರಿಗೂ ಇತರ ಮಂತ್ರಿಗಳಿಗೂ ವಿಮಾನ ನಿಲ್ದಾಣದಲ್ಲಿ ಸ್ವಾಗತ ಸಮಾರಂಭವಾಗಲಿ, ಹೂ ಹಾರ-ತುರಾಯಿ, ಜಯಘೋಷಗಳಾಗಲಿ ಇರದಂತೆ ನೋಡಿಕೊಳ್ಳಬೇಕೆಂದು ತಿಳಿಸಿದ್ದೆ.

ಏರ್‌ಪೋರ್ಟಿನಿಂದ ನೇರವಾಗಿ ಅಪೋಲೋ ಹಾಸ್ಪಿಟಲ್‌ಗೆ ಕಾರು ಓಡಿಸಲು ಹೇಳಿದರು ಇಂದಿರಾ. ಆಸ್ಪತ್ರೆಯ ಹೊರಗೆ ತಮ್ಮ ಕಣ್ಮಣಿ ಎಂ.ಜಿ.ಆರ್.ರ ಸ್ಥಿತಿಯನ್ನರಿಯಲು ಜನಸಾಗರ ಸೇರಿತ್ತು. ಇಂದಿರಾಜಿಯೊಂದಿಗೆ ನಾನು ಮತ್ತು ಪಾರ್ಥಸಾರಥಿ ಮುಖ್ಯಮಂತ್ರಿ ಮಲಗಿದ್ದ ಕೋಣೆಗೆ ನಡೆದೆವು. ತಮ್ಮ ಬಳಿ ಬಂದ ಪ್ರಿಯದರ್ಶಿನಿಯನ್ನು ಕಂಡ ಕೂಡಲೇ ಎಂ.ಜಿ.ಆರ್. ಹಾಸಿಗೆಯಲ್ಲೇ ಎದ್ದು ಕುಳಿತು ಸ್ವಾಗತಿಸಲು ಬಯಸಿದರು. ಆದರೆ ಇಂದಿರಾ, ಅವರಿಗೆ ಹೆಚ್ಚು ಶ್ರಮವಾಗದಿರಲೆಂಬ ಉದ್ದೇಶದಿಂದ ಮಲಗಿಕೊಂಡೇ ಇರುವಂತೆ ಸನ್ನೆ ಮಾಡಿದರು. "ಸಿ.ಎಂ.... ಬದುಕಿನಲ್ಲಿ ಎಷ್ಟೆಲ್ಲಾ ಹೋರಾಟಗಳನ್ನು ನಡೆಸಿದ್ದೀರಿ. ಗೆದ್ದಿದ್ದೀರಿ. ಈ ಹೋರಾಟದಲ್ಲೂ ಗೆದೆಯುತ್ತೀರಿ ಬಿಡಿ. ನಿಮ್ಮ ಆರೋಗ್ಯದ ಕಡೆ ಗಮನಕೊಡಿ...." ಎಂಬ ಇಂದಿರಾಜಿಯ ಮಾತು ಎಂ.ಜಿ.ಆರ್. ಅವರ ಹೃದಯವನ್ನು ತಟ್ಟಿತು. ಏನೋ ಹೇಳಬೇಕೆಂದುಕೊಂಡರು. ಆದರೆ ಮಾತನಾಡಲು ಆಗಲೇ ಇಲ್ಲ. ನಂತರ ಶ್ರೀಮತಿ ಜಾನಕಿ ರಾಮಚಂದ್ರನ್ ಜತೆಗೊಂದಷ್ಟು ಕಾಲ ಕಳೆದರು ಇಂದಿರಾ. ಆಮೇಲೆ ಅಲ್ಲಿಯ ಡಾಕ್ಟರುಗಳೊಂದಿಗೆ ಮಾತನಾಡಿದರು. ಅಲ್ಲಿಂದ ನೇರವಾಗಿ ರಾಜಭವನಕ್ಕೆ. ತಮಿಳುನಾಡಿನ ಮಂತ್ರಿಗಳೊಂದಿಗೆ ಭೇಟಿ.

ಅಂದು ಸಂಜೆಯೇ ದಿಲ್ಲಿಗೆ ಮರಳಿದರು ಇಂದಿರಾ....

ಆದರೆ ಎಂ.ಜಿ.ಆರ್.ರೊಂದಿಗೆ ಅದು ತಮ್ಮ ಕೊನೆಯ ಭೇಟಿಯಾಗುತ್ತದೆಂದು ಖಂಡಿತ ಅವರು ಅಂದುಕೊಂಡಿರಲಿಲ್ಲ.

## ಚಾಡಿಕೋರರ ಚಿತಾವಣೆ

ಇಂದಿರಾ ಗಾಂಧಿ ಅಧಿಕಾರಕ್ಕೆ ಮರಳಿದಾಗ ಹೊಸ ಲೋಕಸಭೆ, ಹೊಸ ಸಚಿವ ಸಂಪುಟ, ಬಹುತೇಕ ರಾಜ್ಯಗಳಲ್ಲಿ ಹೊಸ ವಿಧಾನಸಭೆಗಳು ಮತ್ತು ಹೊಸ ಮಂತ್ರಿ ಮಂಡಳಗಳು. ಎಲ್ಲ ಹೊಸವೇ ಆದರೂ ರಾಷ್ಟ್ರಪತಿ ಮಾತ್ರ ಹಳಬರೇ. ನೀಲಂ ಸಂಜೀವ ರೆಡ್ಡಿ. ಒಂದೊಮ್ಮೆ ರಾಷ್ಟ್ರಪತಿಯಾಗುವ ಅವಕಾಶವನ್ನು ಇಂದಿರಾಗಾಂಧಿಯ ಕಾರಣದಿಂದಲೇ ಕಳೆದುಕೊಂಡು ನಂತರ ಜನತಾ ಪಕ್ಷದಿಂದ ಆ ಅವಕಾಶವನ್ನು ಪಡೆದವರು. ಅದೇ ಜನತಾ ಸರಕಾರದ 'ಆಡಳಿತ ವೈಖರಿ'ಯನ್ನು ಕಂಡು ಭ್ರಮನಿರಸನಗೊಂಡಿದ್ದ ಸಂಜೀವ ರೆಡ್ಡಿಯವರಿಗೆ, ಮತ್ತೆ ಅಧಿಕಾರಕ್ಕೆ ಬಂದ ಇಂದಿರಾ ಪರಿಣಾಮಕಾರಿ ಆಡಳಿತ ನಡೆಸಬಲ್ಲವರೆಂಬ ವಿಶ್ವಾಸವಿತ್ತಾದರೂ ಆ ಇಬ್ಬರಲ್ಲೂ ಹಿಂದಿನ ಕಟು ಅನುಭವಗಳ ನೆನಪು ಮಾಸಿರಲಿಲ್ಲ.

ತಮ್ಮ ಕಾರ್ಯವಿಧಾನವನ್ನು ಸಾರ್ವಜನಿಕವಾಗಿ ಟೀಕಿಸುತ್ತಲೇ ನಡೆದಿದ್ದ ರಾಷ್ಟ್ರಪತಿಯೊಂದಿಗೆ ಇನ್ನಷ್ಟು ಮನಸ್ತಾಪ ಕೈಡೆಗೊಡದ ರೀತಿಯಲ್ಲಿದ್ದುಬಿಡಲು ಇಂದಿರಾ ನಿರ್ಧರಿಸಿದಂತಿತ್ತು. ಸಂಜೀವ ರೆಡ್ಡಿಯವರ ಅವಧಿ ಕೆಲ ತಿಂಗಳುಗಳಲ್ಲೇ ಮುಗಿಯಲಿತ್ತು. ಎರಡನೆ ಅವಧಿಗೆ ಅವರನ್ನು ರಾಷ್ಟ್ರಪತಿ ಸ್ಥಾನಕ್ಕೆ ಇಂದಿರಾ ಸೂಚಿಸುವುದಾಗಲಿ ಬೆಂಬಲಿಸುವುದಾಗಲಿ ಅಸಾಧ್ಯದ ಮಾತು ಎಂಬುದು ಎಲ್ಲರಿಗೂ ತಿಳಿದಿದ್ದ ವಿಷಯ. ಸಂಜೀವ ರೆಡ್ಡಿಯವರೂ ಮತ್ತೊಂದು ಅವಧಿಯನ್ನು ಆಶಿಸಲಿಲ್ಲ. ಆದರೆ ಚಾಡಿಕೋರರಿಗೆ ಮಾತ್ರ ಈ ಇಬ್ಬರ ನಡುವೆ ಇನ್ನಷ್ಟು ಬೆಂಕಿ ಹೊತ್ತಿಸುವ ಚಪಲ. ೧೯೮೨ರ ಜನವರಿ ಹೊತ್ತಿಗೆ ಈ ಜನ ಇಂದಿರಾಜಿಯ ಕಿವಿಯೂದುವ ಕೆಲಸವನ್ನು ಚುರುಕುಗೊಳಿಸಿದರು. "ರಾಷ್ಟ್ರಪತಿ ಸಂಜೀವ ರೆಡ್ಡಿಯವರು ಸದ್ಯದಲ್ಲೇ ಪ್ರಕಟ ಸಮರ ನಡೆಸುವ ಸನ್ನಾಹದಲ್ಲಿದ್ದು, ಇಂದಿರಾರಿಂದ ರಾಜೀನಾಮೆ ಕೇಳುತ್ತಾರೆ; ಒಂದು ವೇಳೆ ಆಕೆ ಒಪ್ಪದಿದ್ದರೆ ಪದಚ್ಯುತಗೊಳಿಸಲೂ ಹಿಂದೆ-ಮುಂದೆ ನೋಡುವುದಿಲ್ಲ"ವೆಂಬಷ್ಟರ ಮಟ್ಟಿಗೆ ಅವರ ಬಾಯಿ ಬಲಗೊಂಡಿತು. ಬರಲಿರುವ ಪ್ರಜಾರಾಜ್ಯೋತ್ಸವದ ಮುನ್ನಾದಿನ ರಾಷ್ಟ್ರಪತಿ ತಮ್ಮ ಬಾನುಲಿ ಭಾಷಣದಲ್ಲಿ ಇಂದಿರಾರ ಬಗೆಗಿನ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸುವರೇನೋ ಎಂಬ ನಿರೀಕ್ಷೆ ಎಲ್ಲರಿಗಿತ್ತು. ಆ ಕುರಿತು ಗಾಳಿಸುದ್ದಿಗಳು ರಾರಾಜಿಸುತ್ತಿದ್ದ ಹಿನ್ನೆಲೆಯಲ್ಲಿ ಅಂಥ ನಿರೀಕ್ಷೆ ಸಹಜವೆ. ರಾಷ್ಟ್ರಪತಿಗಳ ಬಾನುಲಿ ಭಾಷಣವನ್ನು ಅವರ ಕಾರ್ಯದರ್ಶಿಗಳು ಸಿದ್ಧಪಡಿಸಿ ಅದನ್ನು ಪ್ರಧಾನಿಗಳ ಅವಗಾಹನೆ ಹಾಗೂ ಒಪ್ಪಿಗೆಗೆ ಕಳಿಸುವುದು ವಾಡಿಕೆ. ಸಾಕಷ್ಟು ದಿನ ಮೊದಲೇ ಆ ಭಾಷಣದ ಕರಡನ್ನು ಪಡೆದು ಸೂಕ್ತ ತಿದ್ದುಪಡಿ ಸೂಚಿಸಲು ಅನುಕೂಲವಾಗುವಂತೆ ನೋಡಿಕೊಳ್ಳಿ ಎಂದು ಇಂದಿರಾಜಿ ನನಗೆ ಹೇಳಿದ್ದರು. ಜನವರಿ ೨೩ರ ಸಂಜೆ ಏಳೂವರೆಗೆ ಬಾನುಲಿ ಭಾಷಣದ ಕರಡು ಪ್ರತಿ ನನ್ನ ಕೈಸೇರಿತು. ನಾನು ಅಂದುಕೊಂಡಿದ್ದಂತೆಯೇ ಅದರಲ್ಲಿ ಇಂದಿರಾ ಸರಕಾರದ ಒಂದು ವರ್ಷದ ಕಾರ್ಯವೈಖರಿಯ ಕುರಿತ ಟೀಕೆಗಳಿದ್ದವು. ಇಂದಿರಾಜಿ ಇದನ್ನು ಇದ್ದಕಿದ್ದಂತೆಯೇ ಪ್ರಸಾರವಾಗಲು ಬಿಡಲಾರರೆಂಬುದು ಯಾರು ಬೇಕಾದರೂ ಊಹಿಸುವ ಸಂಗತಿ. ನಾನು ಭಾಷಣದ ಕರಡು ಪ್ರತಿಯೊಂದಿಗೆ ಪ್ರಧಾನಿಗಳ ನಿವಾಸಕ್ಕೆ ಧಾವಿಸಿದೆ.

ನನ್ನನ್ನು ನೋಡುತ್ತಲೇ ಇಂದಿರಾಜಿ ಎಲ್ಲವನ್ನೂ ಊಹಿಸಿಕೊಂಡುಬಿಟ್ಟರು. ಭಾಷಣದ ಕರಡು ಪ್ರತಿಯನ್ನು ಅವರಿಗಿತ್ತೆ. ಅದನ್ನವರು ಕೇವಲ ಪರಿಕಿಸಿ ನನಗೆ ಮರಳಿಸಿ, "ಓದುವ ಅವಶ್ಯಕತೆಯೇ ಇಲ್ಲ. ನಿಮ್ಮ ಮುಖವೇ ಇದರಲ್ಲಿರುವುದೇನು ಎಂಬುದನ್ನು ಹೇಳುತ್ತಿದೆಯಲ್ಲ" ಎಂದರು. ಜತೆಗೆ, "ಇದು

ಹೀಗೆಯೇ ಪ್ರಸಾರವಾಗುವುದಂತೂ ಸಾಧ್ಯವಿಲ್ಲ. ಸೂಕ್ತ ಬದಲಾವಣೆಗಳನ್ನು ಮಾಡಿಬಿಡಿ" ಎಂದು ಹೇಳಿ, ಆ ಕರಡು ಪ್ರತಿಯನ್ನು ಕೂಡಲೇ ಪಿ.ವಿ. ನರಸಿಂಹರಾಯರಿಗೂ, ಆರ್. ವೆಂಕಟರಾಮನ್ನರಿಗೂ ತೋರಿಸಿ ಅವರ ಅಭಿಪ್ರಾಯ ಪಡೆದು ಬಂದು ತಮ್ಮನ್ನು ಕಾಣಲು ತಿಳಿಸಿದರು.

ನಂತರದ ಪ್ರತಿ ಗಳಿಗೆಯೂ ನನ್ನ ಮಟ್ಟಿಗೆ ಗಂಭೀರವೆ. ಶಾರದಾ ಪ್ರಸಾದರೊಂದಿಗೆ ಚರ್ಚಿಸಿದೆ. ರಾಷ್ಟ್ರಪತಿಗಳ ಬಾನುಲಿ ಭಾಷಣದಲ್ಲಿನ ಆಪಾದನಾ ಸ್ವರೂಪದ ಅಂಶಗಳನ್ನೆಲ್ಲ ತೆಗೆದು ಹಾಕಿದರೂ ಮೂಲ ಕರಡು ಪ್ರತಿಗೆ ನಮ್ಮ ತಿದ್ದುಪಡಿ ಸಮೀಪವಾಗಿರುವಂತೆ ನೋಡಿಕೊಳ್ಳಬೇಕಿತ್ತು. ಶಾರದಾ ಪ್ರಸಾದ್ ಇಂಥ ವಿಷಯದಲ್ಲಿ ನಿಷ್ಣಾತ. ಜನೆವರಿ ೨೪ರ ಮುಂಜಾನೆ ಸೇರಿದ 'ರಾಜಕೀಯ ವ್ಯವಹಾರಗಳ ಸಂಪುಟ ಸಮಿತಿ'ಯ (ಸಿಸಿಪಿಎ) ಸಭೆಯಲ್ಲಿ ಈ ಪರಿಷ್ಕೃತ ಕರಡು ಒಪ್ಪಿತವಾಯಿತು.

ಇಂದಿರಾಜಿ ತುರ್ತಾಗಿ ರಾಷ್ಟ್ರಪತಿಗಳೊಂದಿಗೆ ಮಾತುಕತೆಯಾಡಬಯಸಿದರು. ಮಧ್ಯಾಹ್ನ ಒಂದು ಗಂಟೆಗೆ ಭೇಟಿ ನಿಗದಿಯಾಯಿತು. ಪ್ರಧಾನಿಯವರೊಂದಿಗೆ ನಾನೂ ರಾಷ್ಟ್ರಪತಿ ಭವನಕ್ಕೆ ತೆರಳಿದೆ. ಆದರೆ ನಾನು ಹೊರಗಿನ ಕೋಣೆಯಲ್ಲೇ ಆತಂಕದಿಂದ ಕಾಯಬೇಕಾಯಿತು. ೧.೪೦ರ ಸುಮಾರಿಗೆ ಪ್ರಧಾನಿ ಮತ್ತು ರಾಷ್ಟ್ರಪತಿಗಳು ಮಾತುಕತೆ ಮುಗಿಸಿ ಹೊರಗೆ ಬಂದರು. ಇಬ್ಬರ ಮುಖಗಳಲ್ಲೂ ಸಮಾಧಾನ ಕಂಡು ನಾನು ಗೆಲುವಾದೆ. ವಾಪಸ್ಸು ಕಾರಿನಲ್ಲಿ ಪ್ರಧಾನಿ ನಿವಾಸದೆಡೆ ಹೊರಟಾಗ ಇಂದಿರಾಜಿ, "ಎಲ್ಲವೂ ನಿಯಂತ್ರಣದಲ್ಲಿದೆ" ಎಂದಷ್ಟೇ ಹೇಳಿದರು.

ಜನೆವರಿ ೨೫ರ ರಾತ್ರಿ ಬಾನುಲಿ ಭಾಷಣವನ್ನು ಅತಿ ಕುತೂಹಲದಿಂದ ಆಲಿಸಲು ಕುಳಿತವರಿಗೆ ಅದರಲ್ಲಿ ನಿರೀಕ್ಷಿಸಿದ ಅಂಶಗಳಾವೂ ಇರದಿದ್ದುದು ಅಚ್ಚರಿಯುಂಟು ಮಾಡಿರಬೇಕು. ಕೆಲವರಿಗೆ ನಿರಾಶೆಯೂ ಆಗಿರಬೇಕು.

## ಎರಡು ಘಟನೆಗಳು

೧೯೮೨ರ ಮೇ ೧೦ ರಂದು ರಾಷ್ಟ್ರಪತಿ ಐರ್ಲ್ಯಾಂಡ್ ಪ್ರವಾಸ ಮುಗಿಸಿ ದಿಲ್ಲಿಗೆ ಬಂದಾಗ ಅವರನ್ನು ಎದುರುಗೊಳ್ಳಲು ಏರ್‌ಪೋರ್ಟಿನಲ್ಲಿ ಪ್ರಧಾನಿಯ ಬದಲು ಅವರ ಪತ್ರದೊಂದಿಗೆ ನಾನು ಹಾಜರಿದ್ದೆ. ಚುನಾವಣಾ ಪ್ರಚಾರಕ್ಕಾಗಿ ಅವಿರತವಾಗಿ ಓಡಾಡಿ ಅಂದೇ ಮುಂಜಾನೆ ಬಂದಿದ್ದ ಇಂದಿರಾಜಿ ವಿಶ್ರಾಂತಿ ಬಯಸಿ, ತಮ್ಮ ಗೈರುಹಾಜರಿಗೆ ರಾಷ್ಟ್ರಪತಿಗಳ ಕ್ಷಮೆಕೋರಿದ ಆ ಪತ್ರವನ್ನು ನನ್ನ ಕೈಗಿತ್ತಿದ್ದರು. ನಾನು ಪತ್ರವನ್ನೇನೋ ರೆಡ್ಡಿಯವರಿಗೆ ನೀಡಿ ವಿಷಯವನ್ನು ವಿವರಿಸಿದೆ. ಆದರೆ ಅವರು ಅದರಿಂದ ಸಮಾಧಾನಗೊಂಡಂತೆ ಕಾಣಲಿಲ್ಲ.

ಒಂದು ವಾರಕ್ಕೆ ಮುಂಚೆ ಇನ್ನೊಂದು ಘಟನೆ ನಡೆದಿತ್ತು. ಅಧಿಕೃತ ಪ್ರವಾಸಕ್ಕೆ ಬಂದಿದ್ದ ನೇಪಾಳದ ದೊರೆಯ ಗೌರವಾರ್ಥ ರಾಷ್ಟ್ರಪತಿಗಳು ಭೋಜನಕೂಟ ಏರ್ಪಡಿಸಬಯಸಿದರು. ಅದೇ ದಿನ ಇಂದಿರಾಜಿ ಕೂಡ ಒಂದು ಭೋಜನಕೂಟದ ವ್ಯವಸ್ಥೆ ಮಾಡಿದ್ದರು. ಇಂಥ ಸಂದರ್ಭಗಳಲ್ಲಿ ಎಲ್ಲವೂ ತಮ್ಮ ಕಣ್ಣೆದುರಲ್ಲೇ ಏರ್ಪಾಡಾಗಬೇಕೆಂಬ ಪ್ರಧಾನಿಯ ಇಚ್ಛೆಯ ಕುರಿತು ಹಿಂದೊಮ್ಮೆ ಹೇಳಿದ್ದೇನಷ್ಟೆ. ಹೀಗಾಗಿ ರಾಷ್ಟ್ರಪತಿಗಳು ನೀಡುವ ಔತಣಕೂಟದಲ್ಲಿ ಭಾಗವಹಿಸಲು ಇಂದಿರಾಗೆ ಸಾಧ್ಯವಾಗಿರಲಿಲ್ಲ. ಸಂಜೀವ ರೆಡ್ಡಿಯವರಿಗೆ ಈ ಎರಡೂ ಘಟನೆಗಳು ಇರಿಸು ಮುರಿಸು ಉಂಟುಮಾಡಿದವು.

ಆದರೆ ಸಂಜೀವ ರೆಡ್ಡಿಯವರ ಬೆಂಬಲಿಗರಿಗೆ ಆಕಾಂಕ್ಷೆಯೊಂದಿತ್ತು. ನಿವೃತ್ತಿಗೊಳ್ಳಲಿರುವ ರಾಷ್ಟ್ರಪತಿಗೆ 'ಭಾರತ ರತ್ನ' ಪದವಿ ದೊರೆಯುವ ದಿಶೆಯಲ್ಲಿ ಇಂದಿರಾ ಪ್ರಯತ್ನಿಸಬೇಕು ಎಂದು. ನಾನಿದನ್ನು ಪ್ರಧಾನಿಯ ಗಮನಕ್ಕೆ ತಂದೆ. ಅವರು ಸುಮ್ಮನಿದ್ದುಬಿಟ್ಟರು.

## ಪುಸ್ತಕ ವಿಭಾಗ

ಝೈಲ್‌ಸಿಂಗ್ ರಾಷ್ಟ್ರಪತಿಯಾದರು. ಎಲ್ಲವೂ ಸರಳವಾಗಿ, ಸುರಳೀತವಾಗಿ ಸಾಗೀತೆಂದರೆ ಧುತ್ತೆಂದು ಎದ್ದು ನಿಂತದ್ದು ಪಂಜಾಬಿನ ಮುಖ್ಯಮಂತ್ರಿ ದರ್ಬಾರಾ ಸಿಂಗರ ಕೋಪ. ದಿಲ್ಲಿಯಲ್ಲಿದ್ದುಕೊಂಡೇ ಗ್ಯಾನೀಜಿ ಪಂಜಾಬನ್ನು ನಿಯಂತ್ರಿಸುವ ಪ್ರಯತ್ನದಲ್ಲಿ ತೊಡಗಿದ್ದಾರೆಂದು ದರ್ಬಾರಾ ಸಿಂಗ್ ಪ್ರಧಾನಿಯೆದುರು ದೂರನ್ನಿಡುತ್ತಲೇ ನಡೆದರು. ಅಕಾಲಿಗಳ ಆಂದೋಲನ ಮತ್ತು ಉಗ್ರಗಾಮಿಗಳ ಚಟುವಟಿಕೆಗಳನ್ನು ನಿಯಂತ್ರಿಸುವಲ್ಲಿ ದರ್ಬಾರಾ ಸಿಂಗ್ ವಿಫಲರಾಗಿದ್ದಾರೆಂಬುದು ಝೈಲ್‌ಸಿಂಗರ ಅಭಿಪ್ರಾಯ. ಇವರಿಬ್ಬರ ದುಸುಮುಸುಗುಡುವಿಕೆಯಲ್ಲಿ ಪಂಜಾಬ ಸಮಸ್ಯೆ ಪ್ರಬಲವಾಗತೊಡಗಿತು.

ದರ್ಬಾರಾ ಸಿಂಗರ ಕೈ ಬಲಪಡಿಸುವಲ್ಲಿ ಇಂದಿರಾ ಹೆಚ್ಚು ಆಸಕ್ತರಾದದ್ದು ಗ್ಯಾನೀಜಿಗೆ ಅತೃಪ್ತಿಯ ವಿಷಯವಾಯಿತು. ಪಂಜಾಬ್ ಕುರಿತಂತೆ ಪ್ರಧಾನಿ ತಮ್ಮ ಸಲಹೆ ಕೇಳುತ್ತಿಲ್ಲವೆಂಬುದು ಅವರ ಆಕ್ಷೇಪ. ಅದನ್ನವರು ಕೆಲವು ಕೇಂದ್ರ ಸಚಿವರು ಹಾಗೂ ಕಾಂಗ್ರೆಸ್ ಧುರೀಣರ ಮುಂದೆ ವ್ಯಕ್ತಪಡಿಸಿಯೂ ಇದ್ದರು. ಆದರೆ ತಾವು ತೆಗೆದುಕೊಳ್ಳುವ ಪ್ರತಿಯೊಂದು ಕ್ರಮದ ಬಗ್ಗೆಯೂ ರಾಷ್ಟ್ರಪತಿಗಳಿಗೆ ತಿಳಿಸುತ್ತಲೇ ಇದ್ದಾಗ್ಯೂ ಉಗ್ರಗಾಮಿ ಗುಂಪುಗಳೊಂದಿಗೆ ರಾಷ್ಟ್ರಪತಿ ಕಚೇರಿಯ ಕೆಲವರು ಸಂಪರ್ಕವಿಟ್ಟುಕೊಂಡಿದ್ದರೆಂಬ ವರದಿಗಳು ಇಂದಿರಾ ಅವರನ್ನು ಕಂಗೆಡಿಸಿದವು. ಪಂಜಾಬ್ ಕುರಿತ ತಮ್ಮ ನಿಲುವು-ಕ್ರಮಗಳ ಕುರಿತು ರಾಷ್ಟ್ರಪತಿಗಳಿಗೆ ತಿಳಿಸುವ ವಿಷಯದಲ್ಲಿ ಇಂದಿರಾ ಹೆಚ್ಚೆಚ್ಚು ಗೌಪ್ಯ ಕಾಪಾಡಿಕೊಳ್ಳತೊಡಗಿದರು. ಇದರಿಂದ ವಾತಾವರಣ ಇನ್ನಷ್ಟು ಬಿಗಡಾಯಿಸಿತು.

೧೯೮೩ರಲ್ಲಿ ಪಂಜಾಬಿನಲ್ಲಿ ಉಗ್ರಗಾಮಿಗಳು ನರಮೇಧಕ್ಕೆ ನಿಂತರು. ಅಕ್ಟೋಬರ್ ೫ ರಂದು ಆರು ಜನ ಹಿಂದುಗಳ ಕೊಲೆಯಾಯಿತು. ಇದರಿಂದಾಗಿ ದರ್ಬಾರಾ ಸಿಂಗ್ ಬಲಗುಂದಿದ್ದು ಸ್ಪಷ್ಟವಾಯಿತು. ಮರುದಿನವೇ ದರ್ಬಾರಾ ದಿಲ್ಲಿಗೆ ಕರೆಯಲ್ಪಟ್ಟರು. ಪಂಜಾಬಿನಲ್ಲಿ ರಾಷ್ಟ್ರಪತಿ ಆಡಳಿತವನ್ನು ಹೇರದೇ ಅನ್ಯ ವಿಧಿಯಿರಲಿಲ್ಲ. ದರ್ಬಾರಾ ಧೃತಿಗೆಟ್ಟರು. ಸ್ಥಿತಿ ಸುಧಾರಣೆಗೆ ಇನ್ನಷ್ಟು ಸಮಯ ಕೊಡಿ ಎಂದರು. ಆದರೆ ನಿರ್ಧಾರವೆಂದರೆ ನಿರ್ಧಾರ. ಅಂದೇ ರಾತ್ರಿ ೮-೧೫ಕ್ಕೆ ಪ್ರಧಾನಿಯ ಆದೇಶದಂತೆ ನಾನು ರಾಷ್ಟ್ರಪತಿಗಳನ್ನು ಕಂಡೆ. ಪಂಜಾಬ್ ಕುರಿತ ಉದ್ದೇಶವನ್ನು ವಿವರಿಸಿದೆ. ಅದೇ ರಾತ್ರಿ ಸಂಪುಟ ಸಭೆ. ರಾಷ್ಟ್ರಪತಿ ಆಡಳಿತಕ್ಕಾಗಿ ಶಿಫಾರಸಾಯಿತು. ಗ್ಯಾನೀಜಿ ಘೋಷಣಾ ಪತ್ರಕ್ಕೆ ಮುಂದೆ ಕೆಲ ನಿಮಿಷಗಳಲ್ಲೇ ಸಹಿ ಹಾಕಿದರು. ಅವರಿಗೆ ಸಂತೋಷವಾಗಿದ್ದದ್ದು ಮುಖದಲ್ಲೇ ಎದ್ದುಕಾಣುತ್ತಿತ್ತು.

ಆದರೂ ಪಂಜಾಬ್ ತಣ್ಣಗಾಗಲಿಲ್ಲ. ಹಿಂಸೆ ಹೆಚ್ಚಿತು. ಅಕಾಲಿ ದಳದ ಹಿರಿಯರನ್ನು ಉಗ್ರಗಾಮಿಗಳು ಬದಿಗೆ ಸರಿಸಿದರು. ಸ್ವರ್ಣ ಮಂದಿರದಲ್ಲೂ ಅವರದೇ ದಬ್ಬಾಳಿಕೆ. ಸೈನಿಕ ಕಾರ್ಯಾಚರಣೆಯ ಅನಿವಾರ್ಯತೆಯವರೆಗೂ ಸರಕಾರ ಯೋಚಿಸಬೇಕಾಯಿತು. ಪ್ರತಿ ವಿಷಯವನ್ನೂ ರಾಷ್ಟ್ರಪತಿಗಳಿಗೆ ಪ್ರಧಾನಿ ತಿಳಿಸುತ್ತಲೇ ಇದ್ದರು. ಆದರೆ ಗ್ಯಾನೀಜಿ ತಮ್ಮ ಅಸಮಾಧಾನ ವ್ಯಕ್ತಪಡಿಸಿದರೇ ಹೊರತು ಯಾವುದೇ ಸಲಹೆ ನೀಡಲಿಲ್ಲ.

### ಗ್ಯಾನೀಜಿಯೊಂದಿಗೆ....

ಸೈನಿಕ ಕಾರ್ಯಾಚರಣೆಯೂ ಆಯಿತು. ಇದರಿಂದ ಗ್ಯಾನಿಯವರಿಗೆ ತುಂಬ ಆಘಾತವಾಯಿತೆಂಬುದೂ, ಅಕಾಲ್ ತಖ್ತ್‌ಗೆ ಹಾನಿ ತಟ್ಟಿದ ಹಾಗೂ ಸ್ವರ್ಣ ಮಂದಿರದಲ್ಲಿ ಮುಗ್ಧರ ಕೊಲೆಗಳಾದ ವರದಿಗಳಿಂದ ಅವರು ದುಃಖಿತರಾಗಿದ್ದಾರೆಂಬುದೂ ಇಂದಿರಾಗೆ ಗೊತ್ತಾಯಿತು. ಮಿಲಿಟರಿ ಕಾರ್ಯಾಚರಣೆಯ ಆದೇಶವನ್ನು ಸ್ವತಃ ರಾಷ್ಟ್ರಪತಿಗಳೇ ಹೊರಡಿಸಿದ್ದರೆಂಬ ತಿಳಿವಳಿಕೆ ಸಿಖ್ ಸಮುದಾಯದ ಶ್ರೀಸಾಮಾನ್ಯರದು. (ಮೂರೂ ಸೇನಾಪಡೆಗಳ ವರಿಷ್ಠರಲ್ಲವೆ ರಾಷ್ಟ್ರಪತಿ..) ಸೈನ್ಯವನ್ನು ಸ್ವರ್ಣಮಂದಿರದಿಂದ ಹಿಂತೆಗೆದುಕೊಂಡು ಅದನ್ನು ಸಿಖ್ ಧಾರ್ಮಿಕ ಮುಖಂಡರಿಗೆ ಒಪ್ಪಿಸುವ ಪ್ರಕ್ರಿಯೆ ಶುರುವಾಯಿತು.

# ಪುಸ್ತಕ ವಿಭಾಗ

ಅದೇ ವರ್ಷ ಅಕ್ಟೋಬರ್ ೨೨ ರಂದು ರಾಷ್ಟ್ರಪತಿ ಮೌರಿಶಿಯಸ್‌ಗೆ ಅಧಿಕೃತ ಪ್ರವಾಸಕ್ಕೆ ಹೊರಟರು. ಇಂದಿರಾರೊಂದಿಗೆ ಅವರ ಸಂಬಂಧವೇನೂ ಅಷ್ಟು ಸುಧಾರಿಸಿರಲಿಲ್ಲ. ಆದರೂ ಗ್ಯಾನೀಜಿಯನ್ನು ಬೀಳ್ಕೊಡಲು ಇಂದಿರಾ ಏರ್‌ಪೋರ್ಟಿಗೆ ಹೋದರು. ರಾಷ್ಟ್ರಪತಿಗಳೊಂದಿಗೆ ಹೆಜ್ಜೆ ಹಾಕುತ್ತಿದ್ದ ಪ್ರಧಾನಿಯನ್ನು ಹಿಂದಿನಿಂದ ಗಮನಿಸಿದೆ. ಅವರಿಬ್ಬರಲ್ಲೇನೋ ಬಿಸಿ ಚರ್ಚೆ ನಡೆದಿದ್ದುದು ತಿಳಿಯಿತು. ಆದರೆ ಕೆಲವು ಹೆಜ್ಜೆಗಳ ನಂತರ ಇಂದಿರಾ ನಿಂತಲ್ಲೇ ನಿಂತುಬಿಟ್ಟರು. ರಾಷ್ಟ್ರಪತಿ ವಿಮಾನದೆಡೆ ಸಾಗಿದರು. ಅಂದೇ ಪ್ರಧಾನಿ ಉತ್ತರ ಪ್ರದೇಶಕ್ಕೆ ತೆರಳಿದರಾದ್ದರಿಂದ ನನಗೆ ಅಲ್ಲಿ ನಡೆದದ್ದೇನೆಂದು ಊಹಿಸಲೂ ಆಗಲಿಲ್ಲ. ಅಲ್ಲಿಂದ ಕಾಶ್ಮೀರಕ್ಕೆ ಹೋಗಿ ಅಕ್ಟೋಬರ್ ೨೮ ರಂದು ಮರಳಿದ ಇಂದಿರಾರನ್ನು ನಾನು ಒಮ್ಮೆ ಕೇಳಿಯೇಬಿಟ್ಟೆ. ಇಂದಿರಾ ಗಾಂಭೀರ್ಯ ಧರಿಸಿದರು. "ನಿಮ್ಮೊಂದಿಗೆ ಒಂದಷ್ಟು ಮಾತಾಡಬೇಕಿದೆ ಎಂದೆ. 'ಸಾಕಷ್ಟು ಮಾತಾಡಿಯಾಗಿದೆ, ಇನ್ನೇನು ಬಾಕಿ ಉಳಿದಿದೆ?' ಎಂದು ವ್ಯಂಗ್ಯವಾಡಿದರು. ನಾನು ಸುಮ್ಮನಿದ್ದೆ. ಆದರೆ ಅವರೇ 'ಒಂದುವೇಳೆ ನಾನು ಈ ಯಾತ್ರೆಯ ನಂತರ ಜೀವಂತ ಮರಳಿದರೆ ಮಾತಾಡಬಹುದು ಎಂದರು. ಆ ಪದಗಳು ನನ್ನನ್ನು ನಡುಗಿಸಿದವು. ಅಂಥ ಗಟ್ಟಿ ಸ್ವಾಸ್ಥ್ಯದ ಮನುಷ್ಯ ಹೀಗೆ ಆಡುವುದೆಂದರೆ?" ಎಂದು ವಿವರಿಸಿದ ಇಂದಿರಾ, "ಅವರೊಂದಿಗೆ ಮನಸ್ಸು ಬಿಚ್ಚಿ ಮಾತಾಡಬೇಕು. ಮಾತಾಡೇತೀರುವೆ" ಎಂದರು.

ಅಕ್ಟೋಬರ್ ೨೮ ರಂದು ನಾನು ಅವರನ್ನು ಭೇಟಿಯಾದೆ. ಮರುದಿನವೇ ಅವರು ಒರಿಸ್ಸಾ ರಾಜ್ಯಕ್ಕೆ ಒಂದುದಿನದ ಪ್ರವಾಸ ಹೊರಟರು. ಅಕ್ಟೋಬರ್ ೩೦ರ ರಾತ್ರಿ ೮.೪೫ಕ್ಕೆ ದಿಲ್ಲಿಗೆ ಮರಳಿದರು. ನಂತರ ೯-೧೦ಕ್ಕೆ ಅವರ ನಿವಾಸದ ಹೊರ ಕೋಣೆಯಲ್ಲಿ ಪ್ರಧಾನಿಯನ್ನು ಭೇಟಿಯಾದೆ. ಅದೇ ಕಿತ್ತಳೆ ಬಣ್ಣದ ಸೀರೆಯಲ್ಲಿದ್ದರು ಇಂದಿರಾ. "ನನ್ನ ರಕ್ತದ ಹನಿ ಹನಿಯೂ..." ಎಂದು ಹಿಂದಿನ ರಾತ್ರಿ ಒರಿಸ್ಸಾದಲ್ಲಿ ಉಗ್ಗಡಿಸುವಾಗ ಉಟ್ಟಿದ್ದ ಸೀರೆ. ದಣಿದಂತೆ ಕಂಡರಾದರೂ ಯಾರಾದರೂ ಹಾಗೆ ಹೇಳುವುದನ್ನವರು ಇಷ್ಟಪಡುತ್ತಿರಲಿಲ್ಲವಾದ್ದರಿಂದ ನನಗನ್ನಿಸಿದ್ದನ್ನು ಅದುಮಿಕೊಂಡೇ ಇದ್ದೆ. ಆದರೆ "ಹೆಲಿಕಾಪ್ಟರು, ಕಾರುಗಳಲ್ಲಿ ತಿರುತಿರುಗಿ ದಣಿದು ಹೋಗಿದ್ದೇನೆ" ಎಂದು ಅವರೇ ಹೇಳಿಬಿಟ್ಟರೆಂದ ಮೇಲೆ ನಿಜಕ್ಕೂ ಅವರು ಅದೆಷ್ಟು ಅವಿಶ್ರಾಂತವಾಗಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿರಬೇಕೆಂಬುದನ್ನು ಊಹಿಸಬಹುದು. ಆ ಮುಖದಲ್ಲಿ ಅದೇನೋ ಚಿಂತೆಯನ್ನೂ ಗುರುತಿಸಿದೆ. ಹಿಂದಿನ ದಿನ ಪ್ರಿಯಾಂಕಾ-ರಾಹುಲ್ ಕುಳಿತಿದ್ದ ಕಾರು ಮತ್ತೊಂದಕ್ಕೆ ಡಿಕ್ಕಿ ಹೊಡೆದದ್ದರ ಚಿಂತೆಯೆ? ಯಾಕೆಂದರೆ ಇಂದಿರಾಜಿಗೆ ತಮ್ಮ ಸುರಕ್ಷೆಗಿಂತ ತನ್ನ ಪರಿವಾರದ ಯಾರಿಗಾದರೂ ಸ್ವಲ್ಪ ಜ್ವರ ಕಂಡರೂ ಅದನ್ನು ತಲೆಗೆ ಹಚ್ಚಿಕೊಂಡು ಕೊರಗುವ ಸ್ವಭಾವ. ಹೀಗಾಗಿ ಐದು ನಿಮಿಷಗಳಲ್ಲೇ ಆ ಭೇಟಿ ಮುಗಿಸಿ ಅವರನ್ನು ವಿಶ್ರಾಂತಿಗೆ ಬಿಡಲು ಯೋಚಿಸಿದೆ. ಆದರೆ ಮಾತು ೨೫ ನಿಮಿಷಗಳವರೆಗೆ ಲಂಬಿಸಿತು. ನಾನು ಮರುದಿನ ಮುಂಬಯಿಯಲ್ಲಿ ನಡೆಯುವ ಅಣುಶಕ್ತಿ ಆಯೋಗದ ಸಭೆಗೆ ಹೊರಟಿರುವುದಾಗಿ ಅವರಿಗೆ ತಿಳಿಸಿದೆ. ಜತೆಗೆ ಸಂಪುಟ ಕಾರ್ಯದರ್ಶಿಯೂ ಬರುತ್ತಾರೆ ಎಂದೆ. ಇಂದಿರಾ ಕೂಡಲೇ ಆರ್.ಕೆ. ಧವನ್‌ರನ್ನು ಕರೆದು ಮರುದಿನ ತಾವು ಸೌಥ್ ಬ್ಲಾಕಿನ ಕಚೇರಿಗೆ ಹೋಗುವುದಿಲ್ಲ. ಅಲ್ಲಿಯ ಎಲ್ಲ ಮುಖ್ಯ ಕೆಲಸಗಳನ್ನು ಮುಂದೂಡಿಬಿಡಿ ಎಂದು ಆದೇಶವಿತ್ತರು.

## ನಾವಿಲ್ಲದ ಹೊತ್ತಿನಲ್ಲಿ....

ನಾನು ಕೃಷ್ಣಸ್ವಾಮಿ ರಾವ್‌ಸಾಹಿಬ್‌ರೊಂದಿಗೆ ಮುಂಬಯಿಗೇನೋ ಬಂದಿಳಿದೆ. ಆದರೆ ಹೀಗೆ ಏಕಕಾಲಕ್ಕೆ ಇಬ್ಬರೂ ದಿಲ್ಲಿಯಿಂದ ದೂರ ಬಂದುಬಿಟ್ಟದ್ದು ಯಾಕೋ ಮನಸ್ಸಿಗೆ ಹಳಹಳಿಯುಂಟುಮಾಡಿತು. ಕಳೆದ ಕೆಲವು ತಿಂಗಳುಗಳಲ್ಲಿ ನಮ್ಮಿಬ್ಬರ ಪೈಕಿ ಒಬ್ಬರಾದರೂ ಇಂದಿರಾರ ಜತೆಗಿರುತ್ತಿದ್ದೆವು. ಈಗ ನಾವಿಬ್ಬರೂ ದೂರ ಬಂದ ಸಂದರ್ಭದಲ್ಲಿ ಅಲ್ಲೇನಾದರೂ ಅಚಾತುರ್ಯ ನಡೆದರೆ? ಎಂಬ ಸಂಶಯ

ಬಲವಾಗಿ ಕಾಡತೊಡಗಿತು.

ಅಣುಶಕ್ತಿ ಆಯೋಗದ ಅಧ್ಯಕ್ಷ ರಾಜಾ ರಾಮಣ್ಣ ಸಭೆಯನ್ನುದ್ದೇಶಿಸಿ ಸ್ವಾಗತ ಭಾಷಣ ಮಾಡುತ್ತ ಸಂಪುಟ ಕಾರ್ಯದರ್ಶಿ ಮತ್ತು ಪ್ರಧಾನಿಗಳ ಪ್ರಧಾನ ಕಾರ್ಯದರ್ಶಿ ಇಬ್ಬರೂ ಜತೆಯಾಗಿ ಸಭೆಗೆ ಬಂದಿರುವುದು ದೇಶದಲ್ಲಿ ಶಾಂತಿ ನೆಲೆಗೊಂಡಿದೆ ಎಂಬುದರ ಸೂಚನೆಯಾಗಿರಬಹುದು ಎಂದು ನಗುತ್ತ ಹೇಳಿದರು. ಅದರ ನಂತರ ಎರಡು ಮೂರು ವಾಕ್ಯಗಳು ಅವರ ಬಾಯಿಂದ ಹೊರಬಿದ್ದಿದ್ದವೊ ಇಲ್ಲವೋ...ಅಷ್ಟರಲ್ಲಿ ಪರಿಚಾರಕನೊಬ್ಬ ಬಂದು ದಿಲ್ಲಿಯಿಂದ ನನಗೆ ಫೋನಿದೆ ಎಂದು ಹೇಳಿದ. ನಾನು ಸಭಾಂಗಣದ ಪಕ್ಕದ ಕೋಣೆಗೆ ಹೋಗಿ ಫೋನೆತ್ತಿಕೊಂಡೆ. ಅತ್ತಲಿಂದ ನನ್ನ ಆಪ್ತ ಸಹಾಯಕನ ಧ್ವನಿ. "ಸರ್, ತುಂಬ ದಾರುಣ ವಾರ್ತೆ. ಕೆಲ ನಿಮಿಷಗಳ ಹಿಂದಷ್ಟೆ ಪ್ರಧಾನಿ ಗುಂಡೇಟುಗಳನ್ನು ತಿಂದರು. ಅವರನ್ನು ಮೆಡಿಕಲ್ ಇನ್‌ಸ್ಟಿಟ್ಯೂಟಿಗೆ ಸೇರಿಸಿದ್ದಾರೆ. ಸ್ಥಿತಿ ತುಂಬ ನಾಜೂಕಾಗಿದೆ." ಆತನ ಮಾತು ನನ್ನನ್ನು ಮರಗಟ್ಟಿಸಿತು. ಛೆ, ನಾನು ತಪ್ಪಾಗಿ ಕೇಳಿಸಿಕೊಂಡಿರಬೇಕು. "ಇನ್ನೊಮ್ಮೆ ಹೇಳಿ..." ಎಂದೆ. ಆತ ಅದೇ ಸುದ್ದಿಯನ್ನು ಪುನರುಚ್ಚರಿಸಿದ. ಆದರೂ ಆಘಾತ-ಅರೆನಂಬಿಕೆಗಳ ಅವಸ್ಥೆಯಲ್ಲಿ ರಾವ್‌ಸಾಹಿಬ್‌ರೆಡೆ ಬಂದು ಸುದ್ದಿ ತಿಳಿಸಿದೆ. ಸಭೆಯಲ್ಲೂ ವಿದ್ಯಮಾನವನ್ನು ದೊಡ್ಡ ಧ್ವನಿಯಲ್ಲಿ ಹೇಳಿದೆ. ಕೂಡಲೇ ನಮ್ಮನ್ನು ಏರ್‌ಪೋರ್ಟಿಗೆ ತಲುಪಿಸಲು ಹೆಲಿಕಾಪ್ಟರ್ ಸಿದ್ಧಗೊಂಡಿತು. ಛೆ...ಅಲ್ಲಿ ದಿಲ್ಲಿಯಲ್ಲಿ ಈ ಸಂದರ್ಭದಲ್ಲಿ ರಾಷ್ಟ್ರಪತಿಗಳು, ಗೃಹಮಂತ್ರಿ, ವಿತ್ತಮಂತ್ರಿ ಕೊನೆಗೆ ಪ್ರಧಾನಿ ಪುತ್ರ ರಾಜೀವರೂ ಇಲ್ಲವಲ್ಲ ಎಂಬುದು ನನ್ನನ್ನು ಇನ್ನಷ್ಟು ದಿಕ್ಕೇಡಿಯನ್ನಾಗಿಸಿತು. ಹೆಲಿಕಾಪ್ಟರಿಗಾಗಿ ಕಾಯುತ್ತಲೇ ಇದ್ದಾಗ ಆಯೋಗದ ಟೆಲಿಪ್ರಿಂಟರ್ ನಮಗಷ್ಟು ಆಶಾದಾಯಕ ಸುದ್ದಿ ಹೇಳಿತು- 'ಇಂದಿರಾರ ಸ್ಥಿತಿ ಸುಧಾರಿಸುತ್ತಿದೆ.'

## ದಿಲ್ಲಿಗೆ ಧಾವಿಸಿದೆ

ಏರ್‌ಪೋರ್ಟಿನಲ್ಲಿ ಹೆಲಿಕಾಪ್ಟರು ಇಳಿಯುತ್ತಿದ್ದಂತೆ ದಿಲ್ಲಿಯ ವಿಮಾನ ರನ್‌ವೇಯಲ್ಲಿ ಓಡಿ ಆಕಾಶದತ್ತ ಏರುತ್ತಿರುವುದು ಕಂಡಿತು. ಕೈಕೈ ಹಿಸುಕಿಕೊಂಡೆ. ವಿಮಾನ ನಿಲ್ದಾಣದಿಂದಲೇ ದಿಲ್ಲಿಗೆ ಸಂಪರ್ಕವೇರ್ಪಡಿಸಿಕೊಳ್ಳುವ ಯತ್ನವೂ ಸಫಲವಾಗಲಿಲ್ಲ.

ಇಂಡಿಯನ್ ಏರ್‌ಲೈನ್ಸ್ ತುರ್ತಾಗಿ ವಿಶೇಷ ವಿಮಾನವನ್ನು ನಮಗಾಗಿ ವ್ಯವಸ್ಥೆ ಮಾಡಿತು. ಆದರೆ ಮುಂಬಯಿ-ದಿಲ್ಲಿಗಳ ದಾರಿ ಮುಗಿಯಲಾರದ್ದು ಎಂಬ ಅನಿಸಿಕೆ ಮೂಡುವಂಥ ಉದ್ವೇಗ ನಮಗೆ. ವಿಮಾನದಲ್ಲೇ ದಿಲ್ಲಿಯ ಸಮಾಚಾರ ಪಡೆಯುವ ಯತ್ನಕ್ಕಿಳಿದೆವು. "ಶಸ್ತ್ರಚಿಕಿತ್ಸೆ ನಡೆದಿದೆ" ಎಂಬ ಸುದ್ದಿ ಒಂದಷ್ಟು ಉಸಿರಾಡುವಂತೆ ಮಾಡಿತು.

ಮಧ್ಯಾಹ್ನ ೧ ಗಂಟೆಗೆ ದಿಲ್ಲಿ ತಲಪಿ ಕೂಡಲೇ ಅಖಿಲ ಭಾರತ ವೈದ್ಯಕೀಯ ಸಂಸ್ಥೆಗೆ ಧಾವಿಸಿದೆವು. ಅಲ್ಲಿ ಎಲ್ಲೆಲ್ಲೂ ಸುದ್ದಿ ತಿಳಿಯಲು ಕಾತರಿಸಿ ನಿಂತ ಜನ...ತಮ್ಮ ನೆಚ್ಚಿನ ನಾಯಕಿಗಾದ ಪಾಡಿನಿಂದ ಕಂಗಾಲಾಗಿ ನಿಂತ ಜನ....

ಎಂಟನೆಯ ಮಹಡಿಗೇರುವವರೆಗೂ ಎದೆ ಹೊಡೆದುಕೊಳ್ಳುತ್ತಲೇ ಇತ್ತು. ಶಸ್ತ್ರಕ್ರಿಯಾ ತಜ್ಞರು ಇನ್ನೂ ಕಾರ್ಯಮಗ್ನರಾಗಿಯೇ ಇದ್ದರು. ಇಂದಿರಾಜಿಯ ವೈಯಕ್ತಿಕ ವೈದ್ಯಾಧಿಕಾರಿ ಕೆ.ಪಿ. ಮಾಥೂರ್ ನನ್ನನ್ನು ಕಂಡವರೆ ಓಡಿಬಂದರು. ಅಳುತ್ತಲೇ ಅಪ್ಪಿಕೊಂಡರು. "ಎಲ್ಲಾ ಮುಗಿದು ಹೋಯಿತು ಅಲೆಕ್ಸಾಂಡರ್" ಎಂದು ಭೋರಾಡಿ ಅತ್ತರು. "ಕಳೇವರಕ್ಕೆ ಹೊಲಿಗೆ ಹಾಕಲಾಗುತ್ತಿದೆ" ಎಂಬ ಅವರ ಮಾತು ಕಿವಿಯಲ್ಲಿ ಕಾದಕಬ್ಬಿಣ ಸುರಿದಂತಾಯಿತು.

ಹಿಂದಿನ ರಾತ್ರಿಯಷ್ಟೇ ನನ್ನೊಂದಿಗೆ ಮಾತನಾಡಿದ್ದ ನನ್ನ ಮೆಚ್ಚಿನ ಇಂದಿರಾ ಇನ್ನೆಂದಿಗೂ ಮಾತನಾಡಲಾರರೆಂಬಂತೆ ಮಲಗಿಕೊಂಡಿದ್ದರು...ಅಲ್ಲಲ್ಲ, ಕಾಯಬೇಕಾದ ಕೈಗಳಿಂದಲೇ ಕೊಲ್ಲಲ್ಪಟ್ಟಿದ್ದರು....

## ಆರೋಗ್ಯದಂಗಳ





# ಅಲರ್ಜಿ

## ನಿಮಗೂ ಕಾಡುತ್ತಿದೆಯೆ ?

• ಶ್ರೀಕಾಂತರಾವ್

# ಅಲರ್ಜಿ !

## ನಿಮಗೂ ಕಾಡುತ್ತಿದೆಯೆ ?

ಅವರಿಬ್ಬರೂ ಕೆಲಸಮಾಡುತ್ತಿದ್ದುದು ಒಂದೇ ಡಿಪಾರ್ಟ್‌ಮೆಂಟಿನಲ್ಲಿ. ಡಿಪಾರ್ಟ್‌ಮೆಂಟ್ ಬಹು ದೊಡ್ಡದಾದುದರಿಂದ ಕೆಲಸ ಮಾಡುವವರ ಸಂಖ್ಯೆಯೂ ಜಾಸ್ತಿ. ಅವನಿದ್ದುದು ಒಂದನೆಯ ಅಂತಸ್ತಿನಲ್ಲಿ. ಅವಳು ಕೆಲಸಮಾಡುತ್ತಿದ್ದುದು ಐದನೆಯ ಅಂತಸ್ತಿನಲ್ಲಿ. ಪ್ರಸಂಗವಶಾತ್ ಇಬ್ಬರಲ್ಲೂ ಪರಿಚಯವಾಗಿ, ಪರಿಚಯ ಕ್ರಮೇಣ ಪ್ರೇಮಕ್ಕೆ ತಿರುಗಿತು. ಅವರಿಬ್ಬರೂ ಒಂದು ದಿನ ತೋಟದಲ್ಲಿ ಭೇಟಿಯಾಗಲು ನಿರ್ಧರಿಸಿದರು. ಆಕೆ ಸಮಯಕ್ಕೆ ಸರಿಯಾಗಿ ತೋಟಕ್ಕೆ ಹೋದಳು. ಅವನು ಬರುವುದು ತಡವಾಯಿತು. ತಡವಾಗಿ ಬಂದರೂ ತಲೆನೋವಿನಿಂದಾಗಿ ಹೆಚ್ಚು ಸಮಯ ಮಾತನಾಡಲಾಗಲಿಲ್ಲ. ಇನ್ನೊಂದು ಸಲ ಭೇಟಿಯಾಗುವುದಾಗಿ ನಿರ್ಧರಿಸಿ ಅವರಿಬ್ಬರೂ ಹೊರಟುಹೋದರು. ಮುಂದಿನ ಸಲ ಭೇಟಿಯಾದಾಗ ಮತ್ತೆ ತಲೆನೋವಿನ ಪುನರಾವರ್ತನೆ. ಸತತ ಮೂರು ನಾಲ್ಕು ಸಲ ಹೀಗಾದಾಗ ಈ ತಲೆನೋವು ಅವರಿಗೆ ಒಂದು ರಹಸ್ಯಾತ್ಮಕವಾದ ಸಮಸ್ಯೆಯೇ ಆಯಿತು. ಅವರಿಬ್ಬರಿಗೂ ಪರಿಚಯದವರಾದ ಡಾಕ್ಟರರೊಬ್ಬರು ಮೇಕಪ್ ಮಾಡಿಕೊಳ್ಳದೆ ಅವನನ್ನು ಭೇಟಿಯಾಗಲು ಆಕೆಗೆ ಸೂಚಿಸಿದರು. ಏನಾಶ್ಚರ್ಯ ! ಮುಂದಿನ ಸಲ ಅವರಿಬ್ಬರೂ ಭೇಟಿಯಾದಾಗ ಗಂಟೆಗಟ್ಟಲೆ ವೇಳೆಕಳೆದರೂ ಆತನಿಗೆ ತಲೆನೋವು ಬರಲೇ ಇಲ್ಲ.

ಆಕೆ ಪುಟ್ಟ ಹುಡುಗಿ. ಒಬ್ಬಳೇ ಮಗಳು. ಪ್ರತಿ ವರ್ಷ ತಂದೆತಾಯಿಗಳು ಹುಟ್ಟುಹಬ್ಬವನ್ನು ವಿಜೃಂಭಣೆಯಿಂದ ಆಚರಿಸುವರು. ಸಂಜೆ ಅವಳ ಸಹಪಾಠಿಗಳಿಗೆಲ್ಲ ಉಪಾಹಾರ ಏರ್ಪಡಿಸುವರು. ಸಹಪಾಠಿಗಳು ಆಗ ಸಂತೋಷದಿಂದ ಅವಳಿಗೆ ಪುಷ್ಪಗುಚ್ಛಗಳನ್ನರ್ಪಿಸುವರು. ಸಂತೋಷಕೂಟ ಮುಗಿದ ನಂತರ ಹುಡುಗಿಗೆ ಸಂಕಟದ ಕಾಲ ಆರಂಭ. ರಾತ್ರಿಯೆಲ್ಲ ಜ್ವರ. ನಾಲ್ಕಾರು ದಿನ ಅದರಿಂದ ಮುಕ್ತಿಯೇ ಇಲ್ಲ. ಪ್ರತಿವರ್ಷವೂ ಹುಟ್ಟು ಹಬ್ಬದ ದಿನವೇ ಆಕೆಗೆ ಏಕೆ ಜ್ವರ ಬರಬೇಕೆನ್ನುವುದು ಅವಳ ತಂದೆ ತಾಯಿಗಳಿಗೆ ಬಿಡಿಸಲಾರದ ಪ್ರಶ್ನೆ. ಕೊನೆಗೆ ಅವರು ಈ ಪ್ರಶ್ನೆಯನ್ನು ಡಾಕ್ಟರರ ಮುಂದಿಟ್ಟಾಗ ಅವರು, ಸ್ವಲ್ಪ ಹೊತ್ತು ಯೋಚಿಸಿ, 'ಪುಷ್ಪಗುಚ್ಛದ ಬದಲು ಒಂದೊಂದು ಚಾಕೋಲೇಟ್ ತರಲು ಆ ಪುಟಾಣಿ' ಮಕ್ಕಳಿಗೆ ಹೇಳಿ; ಮುಂದೇನಾಗುತ್ತದೋ ನೋಡೋಣ,' ಎಂದರು. ಡಾಕ್ಟರರ ಸಲಹೆ ಕೆಲಸ

ಮಾಡಿತು. ಮುಂದಿನ ವರ್ಷ ಹುಟ್ಟುಹಬ್ಬವನ್ನಾಚರಿಸುವಾಗ ಆ ಹುಡುಗಿಗೆ ಜ್ವರ ಬರಲೇಇಲ್ಲ.

ಕೆಲ ವರ್ಷಗಳ ಹಿಂದೆ ಅಮೇರಿಕದ ಮೆಡಿಕಲ್ ಅಸೋಶಿಯೇಶನ್ನಿನ ಜರ್ನಲ್ಲಿನಲ್ಲಿ ಬಂದ ಘಟನೆಯೊಂದನ್ನು 'ಮಿರರ್' ಪತ್ರಿಕೆ ಲೇಖನವೊಂದರಲ್ಲಿ ವರದಿ ಮಾಡಿತ್ತು. ಗಂಡ ಹೆಂಡಿರಿಬ್ಬರು ನ್ಯೂಯಾರ್ಕಿನ ಹೊಟೇಲಿನಲ್ಲಿ ಆಮ್ಲೆಟ್ ತಿನ್ನುತ್ತಿರುವಾಗ ಗಂಡ ಏಕಾಏಕಿ ಎಚ್ಚರತಪ್ಪಿಬಿದ್ದ. ಬಹುಶಃ ಹೆಂಡತಿ ಡಾಕ್ಟರಳಾಗಿದ್ದಿರಬೇಕು, ಇಂಥಾ ಪ್ರಸಂಗದಲ್ಲಿ ಏನು ಮಾಡಬೇಕೆಂಬುದು ತಿಳಿದಿತ್ತು. ಅವಳು ಕೂಡಲೆ ಸನಿಹದಲ್ಲಿದ್ದ ಔಷಧಿಯ ಅಂಗಡಿಗೆ ಧಾವಿಸಿ ಅಡ್ರೆನಾಲಿನ್ನಿನ ಚಿಕ್ಕ ಶೀಶೆಯೊಂದನ್ನು ತಂದು ಚುಚ್ಚುಮದ್ದನ್ನಿತ್ತಳು. ಈ ಸಕಾಲಿಕ ನೆರವು ದೊರೆಯದಿದ್ದರೆ ಆತ ಸತ್ತೇಹೋಗುತ್ತಿದ್ದ. ಆಮ್ಲೇಟ್‌ನಲ್ಲಿದ್ದ ಒಂದು ಅನಿಷ್ಟ ಪದಾರ್ಥವೇ ಈ ಅವಾಂತರಕ್ಕೆ ಕಾರಣವೆಂದು ಆಮೇಲೆ ತಿಳಿದು ಬಂತು.

ಇದು ನಮ್ಮ ಸಂಬಂಧಿಕರೊಬ್ಬರಲ್ಲಿ ನಡೆದಿದ್ದು. ಮನೆಯಲ್ಲೆ ಹೆರಿಗೆಯಾಗಿತ್ತು. ಚಿಕ್ಕಮನೆ. ಕತ್ತಲಿನ ವಾತಾವರಣ. ಹಾಸಿಗೆಯ ತುಂಬಾ ತಗಣೆಗಳು. ಸಾಲದ್ದಕ್ಕೆ ಸೊಳ್ಳೆಗಳ ಕಾಟ ಬೇರೆ. ಸೊಳ್ಳೆಗಳಿಂದಾದರೂ ಮಗುವಿಗೆ ರಕ್ಷಣೆ ಸಿಗಲಿ ಎಂದು ತಾಯಿ ಮಗುವಿಗೆ ಸೊಳ್ಳೆ ನಿರೋಧಕವಾದ ಮುಲಾಮನ್ನು ಹಚ್ಚುವುದೇ ತಡ, ಮೈಯೆಲ್ಲಾ ಕೆಂಪಾಗಿ ಬಾತುಕೊಂಡಿತು. ಡಾಕ್ಟರರನ್ನು ತುರ್ತಾಗಿ ಕರೆಸುವ ಮಟ್ಟಿಗೆ ಪರಿಸ್ಥಿತಿ ವಿಕೋಪಕ್ಕೆ ಹೋಯಿತು.

ಇವೆಲ್ಲ ಅಲರ್ಜಿಯಿಂದುಂಟಾದ ಅವಾಂತರಗಳು. ಕಾಂಗ್ರೆಸ್ ಹುಲ್ಲನ್ನು ಮುಟ್ಟುವುದಿರಲಿ, ಅದರ ಸನಿಹಕ್ಕೆ ಹೋದರೂ ತುರಿಕೆಯುಂಟಾಗುವವರನ್ನು ನಾವೆಷ್ಟು ಸಲ ನೋಡಿಲ್ಲ?

ಹಾಗಾದರೆ ಅಲರ್ಜಿಯೆಂದರೇನು? ಎಲ್ಲ ವಸ್ತುಗಳನ್ನು ಶರೀರ ಹಾರ್ದಿಕವಾಗಿ ಸ್ವಾಗತಿಸುವುದಿಲ್ಲ. ಕೆಲ ಪದಾರ್ಥಗಳನ್ನು ಅದು ತಗಾದೆಯಿಲ್ಲದೆ ಸ್ವೀಕರಿಸಿದರೆ ಇನ್ನು ಕೆಲ ವಸ್ತುಗಳನ್ನು ಸ್ವೀಕರಿಸುವಾಗ ಇಡೀ ಶರೀರಕ್ಕೆ ಕಿರಿಕಿರಿಯಾಗುತ್ತದೆ. ಒಂದು ವಸ್ತುವು ಒಬ್ಬರಿಗೆ ಒಗ್ಗಿದರೆ ಇನ್ನೊಬ್ಬರಿಗೆ ಒಗ್ಗುವುದಿಲ್ಲ. ಅನೇಕರಿಗೆ ಸಾಮಾನ್ಯವಾಗಿ ಒಗ್ಗದಿರುವ ಪದಾರ್ಥಗಳನ್ನೇ ನಮ್ಮ ಹಿರಿಯರು ಬರ್ಜಣವೆಂದು ಪೃಥಃಕ್ಕರಿಸಿದರು. ಹೀಗೆ ಶರೀರದಲ್ಲಿ ಹೊರಗಿನಿಂದ ಬಂದು ಸೇರಿಕೊಂಡು ಕಿರಿಕಿರಿಯುಂಟುಮಾಡುವ ಸ್ಥಿತಿಗೇ ವೈದ್ಯಕೀಯದಲ್ಲಿ ಅಲರ್ಜಿಯೆಂದು ಹೆಸರು. ಕಿರಿಕಿರಿಯುಂಟುಮಾಡುವ ವಸ್ತುಗಳಿಗೆ ಡಾಕ್ಟರರು ಅಲರ್ಜನ್ ಎಂದು ಕರೆಯುತ್ತಾರೆ. ಈ ಅಲರ್ಜಿಯೆಂಬ ಪದವನ್ನು ೧೯೦೬ರಲ್ಲಿ ಮೊದಲ ಸಲ ಬಳಕೆಗೆ ತಂದ ಕೀರ್ತಿ

ಆಸ್ಟ್ರಿಯದ ಫಾನ್ ಪಿರ್ಕೆ ಎಂಬ ವಿಜ್ಞಾನಿಗೆ ಸಲ್ಲಬೇಕು.

ಅಲರ್ಜಿಯ ಕಲ್ಪನೆ ನಮ್ಮ ಪೂರ್ವಜರಿಗಿತ್ತು ಎನ್ನುವುದಕ್ಕೆ ಪುರಾಣೇತಿಹಾಸಗಳಲ್ಲಿ ಬರುವ ಕತೆಗಳೇ ಸಾಕ್ಷಿ. ಇದಕ್ಕೊಂದು ಉದಾಹರಣೆ: ನಾರದರೊಮ್ಮೆ ಪುಷ್ಪಮಾಲೆಯಿಂದ ಅಲಂಕೃತರಾಗಿ ಸಂಚರಿಸುತ್ತಿದ್ದಾಗ ಜೋರಾಗಿ ಗಾಳಿ ಬೀಸಿದ್ದರಿಂದ ಮಾಲೆ ಹಾರಿ ಅಜರಾಜನ ಹೆಂಡತಿಯಾದ ಇಂದುಮತಿಯ ಬಳಿಗೇ ಹೋಗಿಬಿದ್ದಿತಂತೆ. ಅದರ ಸುವಾಸನೆಯನ್ನು ತಾಳಲಾರದೆ ಇಂದುಮತಿ ಎಚ್ಚರದಪ್ಪಿಬಿದ್ದಳಂತೆ.

ಅಲರ್ಜಿಗೆ ಕಾರಣವಾದ ವಸ್ತುಗಳನ್ನು ಕಂಡು ಹಿಡಿದು ನಿದಾನಿಸುವುದಕ್ಕಾಗಿಯೆ ಮೀಸಲಾದ ಅಲರ್ಗೋಲಾಜಿ ಎಂಬ ವೈದ್ಯಕೀಯ ಶಾಖೆ ಹುಟ್ಟಿಕೊಂಡಿದೆ. ಅದನ್ನು ಆಳವಾಗಿ ಅಭ್ಯಸಿಸಿದ ಅಲರ್ಜಿತಜ್ಞರು (ಅಲರ್ಗೋಲಾಜಿಸ್ಟ್) ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಪ್ರಾಕ್ಟೀಸು ಮಾಡುತ್ತಿದ್ದಾರೆ.

ಹಾಗಾದರೆ ಅಲರ್ಜಿಯೆಂಬ ಶಬ್ದ ಹುಟ್ಟಿಕೊಂಡಿದ್ದಾದರೂ ಹೇಗೆ? ಇದೊಂದು ಗ್ರೀಕ್ ಮೂಲದ ಪದ. ಗ್ರೀಕ್ ಭಾಷೆಯಲ್ಲಿ ಅಲ್ಲೋಸ್ ಎಂದರೆ ಇನ್ನೊಂದು ಎಂದೂ ಎರ್ಗೋಸ್ ಎಂದರೆ ಕೆಲಸ ಎಂದೂ ಅರ್ಥ. ಪರಕೀಯ ವಸ್ತುವಿಗೆ ಸಾಮಾನ್ಯವಾಗಿ ತೋರುವುದಕ್ಕಿಂತ ವಿಭಿನ್ನವಾದ ಪ್ರತಿಕ್ರಿಯೆಯನ್ನು ಶರೀರ ತೋರಿಸಿದಾಗ ಆ ವಿಭಿನ್ನ ಪ್ರತಿಕ್ರಿಯೆಯೇ ಅಲರ್ಜಿ.

ದೇಶದ ಗಡಿಯಲ್ಲಿ ಸದಾ ಕಾವಲು ಕಾಯ್ದು ಸೈನಿಕರು ನಮ್ಮ ದೇಶವನ್ನು ರಕ್ಷಿಸುವುದಿಲ್ಲವೆ? ನಮ್ಮ ಶರೀರದ ರಕ್ಷಣಾ ವ್ಯವಸ್ಥೆಯೂ ಹಾಗೆಯೇ ಇದೆ. ದೇಹಕ್ಕೆ ಒಗ್ಗದ ರೋಗಾಣುಗಳಾಗಲಿ ವೈರಸ್ಸುಗಳಾಗಲಿ ದೇಹಕ್ಕೆ ಅವಾಂಛಿತವಾದ ಸೇಂದ್ರಿಯ ಮೂಲದ ಇತರ ಯಾವುದೇ ವಸ್ತುವಾಗಲಿ ದೇಹವನ್ನು ಪ್ರವೇಶಿಸಿದರೆ ಅದನ್ನೆದುರಿಸಲು ಶರೀರದ ರಕ್ಷಣಾವ್ಯವಸ್ಥೆ ಸದಾ ಸನ್ನದ್ಧವಾಗಿರುತ್ತದೆ. ಈ ರಕ್ಷಣಾವ್ಯವಸ್ಥೆ ಎರಡು ಬಗೆಯದು. ಇವುಗಳಲ್ಲಿ ರಕ್ತದಲ್ಲಿರುವ ಇಮ್ಯುನೋಗ್ಲೋಬ್ಯುಲಿನ್ನುಗಳೆಂಬ ಪ್ರೋಟೀನ್ ಕಣಗಳು ಒಂದು ಬಗೆಯವಾದರೆ ರೋಗಾಣುಗಳನ್ನೆದುರಿಸುವ ವಿಶಿಷ್ಟ ಬಗೆಯ ಜೀವಕೋಶಗಳು ಇನ್ನೊಂದು ಬಗೆಯವು. ಈ ಪ್ರೋಟೀನ್ ಕಣಗಳಲ್ಲಿ ಐದು ವಿಧ. ಅವುಗಳಲ್ಲಿ ಅಲರ್ಜಿಯುಂಟಾದಾಗ ಮುಖ್ಯಪಾತ್ರ ವಹಿಸುವುದು ಐಜಿಈ ಎನ್ನುವುದು.

ಶರೀರ ತನಗೆ ಒಗ್ಗದ ವಸ್ತುವಿಗೆ ಹೇಗೆ ಪ್ರತಿಕ್ರಿಯಿಸುತ್ತದೆನ್ನುವುದಕ್ಕೆ ಈ ಲೇಖನದ ಮೊದಲಲ್ಲಿ ಕೊಟ್ಟ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಆಕೆ ಉಪಯೋಗಿಸುತ್ತಿದ್ದ ಫೇಸ್‌ಪೌಡರಿನಲ್ಲಿನ ಸುಗಂಧ ಅವನ ದೇಹಕ್ಕೆ ಒಗ್ಗುತ್ತಿರಲಿಲ್ಲ. ಆ ಸುಗಂಧದ ಕಣಗಳು ಅತ್ಯಲ್ಪ



ತುಪ್ಪಳಗಳುಳ್ಳ ಪ್ರಾಣಿಯ ಸಾಮೀಪ್ಯ ಇಲ್ಲವೆ ಒಗ್ಗದ ಮಾತ್ರೆ-ಔಷಧಿಯ ಪರಿಣಾಮ?

ಪ್ರಮಾಣದಲ್ಲಿ- ಹತ್ತು ಸಾವಿರದಲ್ಲಿ ಒಂದು ಪಾಲಾದರೂ ಸರಿ- ವಾತಾವರಣದ ಮೂಲಕ ಅವನ ಮೂಗಿನ ಒಳಪದರದಲ್ಲಿರುವ ತೆಳುಪದರದ ಮೇಲ್ಭಾಗದಲ್ಲಿರುವ ಮಾಸ್ಟ್ ಜೀವಕೋಶವೆಂಬ ವಿಶಿಷ್ಟ ಜೀವಕೋಶಗಳನ್ನು ತಲುಪಿದ ಕೂಡಲೆ ಐಜಿಈಗಳೊಡನೆ ಸಂಪರ್ಕ ಏರ್ಪಟ್ಟು ತತ್ಪರಿಣಾಮವಾಗಿ ಮಾಸ್ಟ್ ಜೀವಕೋಶಗಳೊಳಗಿಂದ ಹಲವಾರು ರಾಸಾಯನಿಕಗಳು ಹೊರಬಂದವು. ಅವುಗಳ ಪೈಕಿ ಮುಖ್ಯವಾದದ್ದೆಂದರೆ ಹಿಸ್ಟಮೈನ್ ಎನ್ನುವುದು. ಇದರಿಂದಾಗಿ ಕ್ಷಣಕಾಲ ಅವನ ಮೂಗು ಕಟ್ಟಿಕೊಂಡಿತು. ಪದೆ ಪದೆ ಸೀನು ಬರಲಾರಂಭಿಸಿತು. ಮೂಗು ಉರಿಯತೊಡಗಿತು. ಈ ಎಲ್ಲ ಪ್ರತಿಕ್ರಿಯೆಗಳ ಪರಿಣಾಮವಾಗಿ ಅವನಿಗೆ ತಲೆನೋವು ಬಂತು. ಅವರಿಬ್ಬರಿಗೂ ಬೇಕಾದ ಡಾಕ್ಟರ್ ಬಲು ಜಾಣ. ಕಾರಣವನ್ನು ಕೂಡಲೇ ಕಂಡುಹಿಡಿದ. ಆಕೆ ಫೇಸ್‌ಪೌಡರ್ ಉಪಯೋಗಿಸುವುದನ್ನು ಬಿಟ್ಟದ್ದರಿಂದ ಸುಗಂಧ ಕಣಗಳ ಸಂಪರ್ಕ ಅವನಿಗೆ ಬರಲಿಲ್ಲ. ಹೀಗಾಗಿ ತಲೆನೋವನ್ನು ತಂದುಕೊಳ್ಳುವ ಪ್ರಮೇಯವೂ ಅವನಿಗೆ ಬರಲಿಲ್ಲ.

ಎಲ್ಲರಿಗೂ ಒಗ್ಗುವ ವಸ್ತುಗಳು ಕೆಲವರಿಗೆ ಮಾತ್ರ ಏಕೆ ಒಗ್ಗುವುದಿಲ್ಲ? ಅವರೇಕೆ ಆ ಕೆಲವು ವಸ್ತುಗಳಿಗೆ ಅಷ್ಟು ಸಂವೇದನಾಶೀಲರಾ

ಗಿರುತ್ತಾರೆ ? ಎನ್ನುವುದು ವೈದ್ಯಕೀಯಕ್ಕೆ ಇನ್ನೂ ಗೊತ್ತಾಗದ ಚಿದಂಬರ ರಹಸ್ಯ. ಆದರೆ ಒಂದು ಮಾತು ಮಾತ್ರ ನಿಜ. ಅಲರ್ಜಿಯ ರೂಪದಲ್ಲಿ ಶರೀರದಿಂದ ವ್ಯಕ್ತವಾಗುವ ಪ್ರತಿಕ್ರಿಯೆ ಎಲ್ಲ ಕಾಲದಲ್ಲೂ ಒಂದೇ ತೆರನಾಗಿರುವುದಿಲ್ಲ. ಬಾಲ್ಯದಲ್ಲಿ ವ್ಯಕ್ತವಾದ ಪ್ರತಿಕ್ರಿಯೆ ವಯಸ್ಸಾದ ಹಾಗೆಲ್ಲ ಕಡಿಮೆಯಾಗುತ್ತ ನಡೆದು ಮುಂದೊಂದು ದಿನ ಇಲ್ಲವಾಗಲೂಬಹುದು.

ಹಾಗೆಂದು ಅಲರ್ಜಿಯನ್ನು ಉಪೇಕ್ಷಿಸುವಂತಿಲ್ಲ. ಸುಗಂಧದ ಕಣಗಳಿಗೆ ಪ್ರತಿಕ್ರಿಯೆಯಾಗಿ ಬಂದ ಪ್ರಲೇಪಕ ಜ್ವರ (hay fever ಅರ್ಥಾತ್ allergic rhinitis) ವನ್ನು ಹಾಗೆಯೆ ಬಿಟ್ಟರೆ ಅದು ಅಸ್ತಮಾಕ್ಕೆ ತಿರುಗಿ ತತ್ಪರಿಣಾಮವಾಗಿ ಅವನ ಶ್ವಾಸನಳಿಕೆಗೂ ಶ್ವಾಸಕೋಶಗಳಿಗೂ ಶಾಶ್ವತವಾದ ಧಕ್ಕೆಯುಂಟಾದೀತು ! ಸಕಾಲದಲ್ಲಿ ಹಾಕಿದ ಒಂದು ಹೊಲಿಗೆ ಮುಂದೆ ಒಂಭತ್ತು ಹೊಲಿಗೆಗಳನ್ನು ಹಾಕುವ ಪ್ರಮೇಯವನ್ನು ತಪ್ಪಿಸುತ್ತದೆಂಬ ಆಂಗ್ಲಗಾದೆ ನೆನಪಿನಲ್ಲಿರಲಿ.

ಪ್ರೋಟೀನ್ ಮೂಲದ ವಸ್ತುಗಳು ಮಾತ್ರ ಅಲರ್ಜಿಯನ್ನುಂಟುಮಾಡುತ್ತವೆಂಬ ವಿಚಾರ ಒಂದಾನೊಂದು ಕಾಲದಲ್ಲಿ ವೈದ್ಯಕೀಯವಲಯದಲ್ಲಿ ಸಾರ್ವತ್ರಿಕವಾಗಿತ್ತು. ಆದರೆ ಈ ವಿಚಾರ ನಿರಾಧಾರವೆಂಬುದಾಗಿ ಈಗ ಸಿದ್ಧವಾಗಿದೆ. ಅಲರ್ಜಿಕಾರಕ ವಸ್ತುಗಳು ಪ್ರೋಟೀನ್ ಮೂಲದ್ದಾಗಿರಬಹುದು, ಶರ್ಕರಪಿಷ್ಟದ್ದಾಗಿರಬಹುದು ಅಥವಾ ಅಪರೂಪಕ್ಕೆಂಬಂತೆ ಕೆಲವು ವಸ್ತುಗಳು ರಾಸಾಯನಿಕವಾಗಿ ಸ್ನಿಗ್ಧ ಪದಾರ್ಥಗಳಿಗೆ ಸಂಬಂಧಿಸಿದ್ದಾಗಿರಲೂಬಹುದು ಯಾವ ಪದಾರ್ಥದಿಂದಲೇ ಅಲರ್ಜಿಯುಂಟಾಗಲಿ, ಅದರಿಂದಾಗಿ ಶರೀರ ಪ್ರತಿವಿಷವಸ್ತುಗಳನ್ನು ಹೆಚ್ಚು ಪ್ರಮಾಣದಲ್ಲಿ ಉತ್ಪಾದಿಸುತ್ತದೆನ್ನುವುದು ಸಾಮಾನ್ಯ ಲಕ್ಷಣ.

ಅಲರ್ಜಿಗೆ ಕಾರಣವಾಗುವ ವಸ್ತುಗಳು ಹಲವಾರು. ಆದರೆ ಒಬ್ಬರಿಗೆ ಅಲರ್ಜಿಯನ್ನುಂಟುಮಾಡುವ ಪದಾರ್ಥ ಇನ್ನೊಬ್ಬರಿಗೆ ಅಲರ್ಜಿಯನ್ನುಂಟುಮಾಡುವುದೆಂದು ಹೇಳಲಾಗುವುದಿಲ್ಲ. ಉದಾಹರಣೆಗೆ ಪರಿಮಳ ದ್ರವ್ಯಗಳನ್ನೇ ತೆಗೆದುಕೊಳ್ಳಿ. ಒಂದು ಪರಿಮಳವನ್ನು ನೀವು ಆಘ್ರಾಣಿಸಿ ಆನಂದಿಸಬಹುದು. ಆದರೆ ಅದೇ ಪರಿಮಳ ಇನ್ನೊಬ್ಬರಲ್ಲಿ ಅಲರ್ಜಿಯನ್ನುಂಟುಮಾಡಬಹುದು. ಹೀಗಾಗಿ ಎಷ್ಟೋ ಜನರಿಗೆ ಕೆಲವು ಹೂಗಳ ಸುಗಂಧ ಆಗುವುದಿಲ್ಲ. ತಂಬಾಕದ ಹೊಗೆಯೂ ಹಾಗೆಯೆ. ಕಾರಖಾನೆಗಳಿಂದ ಹೊರಬರುವ ರಾಸಾಯನಿಕಯುಕ್ತವಾದ ಹೊಗೆಯೂ ಕೆಲವರಿಗೆ ಅಲರ್ಜಿಯುಂಟುಮಾಡುತ್ತದೆ. ಹೊರಗಿನ ಹವೆ ಫಿಲ್ಟರ್ ಮಾಡಲ್ಪಟ್ಟು ಒಳಬರುವ ವಾತಾನುಕೂಲಿತ ವ್ಯವಸ್ಥೆಯನ್ನು ಮನೆಗೆ ಅಳವಡಿಸಿಕೊಳ್ಳುವ ಮೂಲಕ ಈ ಸಮಸ್ಯೆಯನ್ನು ಬಗೆಹರಿಸಬಹುದಾದರೂ ಮನೆಯನ್ನೇ ಬದಲಿಸುವುದು ಅದಕ್ಕಿಂತ

ಸುಲಭೋಪಾಯ. ಊದುಕಡ್ಡಿಯಿಂದ ಬರುವಂತಹ ಅತಿಯಾದ ಸುಗಂಧವಾಗಲಿ ರಾಸಾಯನಿಕಗಳ ದುರ್ವಾಸನೆಯಾಗಲಿ ಅಲರ್ಜಿಗೆ ಕಾರಣವಾಗಬಹುದು.

ಇನ್ನು ಕೆಲವರಿಗೆ ಧೂಳೆಂದರೇ ಆಗುವುದಿಲ್ಲ. ವಾತಾವರಣದಲ್ಲಿನ ಧೂಳಿನ ಕಣಗಳು ಶರೀರದಲ್ಲಿ ಸೇರುವುದೇ ತಡ, ಅಲರ್ಜಿಕ್ ಪ್ರಕ್ರಿಯೆ ಏರ್ಪಟ್ಟು ಸೀನು ಬರಲಾರಂಭಿಸುವುದು, ಕಣ್ಣಿನಿಂದ ನೀರು ಒಸರಲಾರಂಭಿಸುವುದು, ಕೆಲವೊಮ್ಮೆ ಜ್ವರವೂ ಬರಬಹುದು. ಅಸ್ತಮಾ ಪ್ರಕೃತಿಯವರಿಗಂತೂ ಇಂತಹ ಪ್ರಸಂಗದಲ್ಲಿ ದೇವರೇ ಗತಿ. ಅಂಥವರು ಧೂಳಿನಿಂದ ದೂರ ಇರುವುದೇ ಅಲರ್ಜಿಯಿಂದ ಬಚಾವಾಗಲು ಇರುವ ಉಪಾಯ. ವಾಸ್ತವವಾಗಿ ಧೂಳಿನ ಕಣಗಳಿಂದ ಅಲರ್ಜಿ ಉಂಟಾಗುತ್ತದೆಂದು ಈ ವರೆಗೆ ಭಾವಿಸಲಾಗಿತ್ತು. ಆದರೆ ಈ ಧೂಳಿನ ಕಣಗಳಲ್ಲಿ ಜೀವಿಸಿ ಸದಾ ವೃದ್ಧಿಸುತ್ತಿರುವ ಒಂದು ಬಗೆಯ ಬ್ಯಾಕ್ಟೀರಿಯಗಳು ವಿಸರ್ಜಿಸುವ ಉಚ್ಛಿಷ್ಟದ ಕಣಗಳು ವಾತಾವರಣದಲ್ಲಿ ತೇಲಿಕೊಂಡು ಬಂದು, ಶರೀರದಲ್ಲಿ ಪ್ರವೇಶಿಸಿ ಅಲರ್ಜಿಯುಂಟುಮಾಡುವವೆಂದು ವೈಜ್ಞಾನಿಕ ಸಂಶೋಧನೆಗಳಿಂದ ವ್ಯಕ್ತವಾಗಿದೆ. ಈ ಉಚ್ಛಿಷ್ಟದ ಕಣಗಳನ್ನು ಪ್ರತ್ಯೇಕಿಸಿದ ಹವೆಯನ್ನು ಉಸಿರಾಡಿಸುವುದು ವ್ಯಾವಹಾರಿಕವಾಗಿ ಅಸಾಧ್ಯವಾದುದರಿಂದ ಧೂಳಿಗೆ ಅಲರ್ಜಿಯಿರುವವರು ಧೂಳಿಲ್ಲದ ವಾತಾವರಣದಲ್ಲಿರುವುದೇ ಒಳ್ಳೆಯದು. ಪೇಂಟಿನ ಕಾರಖಾನೆಗಳಲ್ಲಿ ಕೆಲಸಮಾಡುವ ಅಥವಾ ಸದಾ ಪೇಂಟಿನ ಸಂಪರ್ಕ ಬರುವ ಅಲರ್ಜಿಕ್ ಪ್ರವೃತ್ತಿಯವರಿಗೂ ಇದೇ ಮಾತು ಅನ್ವಯಿಸುತ್ತದೆ.

ಯಾವ ಯಾವ ಆಹಾರ ಪದಾರ್ಥಗಳಿಂದ ಅಲರ್ಜಿಯುಂಟಾಗುತ್ತದೆಂದು ಹೇಳುವುದೇ ಕಷ್ಟ. ಒಬ್ಬರಿಗೆ ಅಮೃತವಾದದ್ದು ಇನ್ನೊಬ್ಬರಿಗೆ ವಿಷವಾಗುತ್ತದೆಂಬ ಮಾತು ಇಲ್ಲಿ ಎಲ್ಲಕ್ಕೂ ಹೆಚ್ಚು ಅನ್ವಯಿಸುತ್ತದೆ. ಕೆಲವರಿಗೆ ಹಾಲಿನಿಂದಲೂ ಅಲರ್ಜಿಯಾಗಬಹುದು. ಅಂಥವರು ಬೆಣ್ಣೆ, ಮೊಸರುಗಳ ಮಾತಂತೂ ದೂರ ಉಳಿಯಿತು, ಹಾಲು ಬೆರೆಸಿದ ಚಹ-ಕಾಫಿಗಳನ್ನೂ ಕುಡಿಯುವಂತಿಲ್ಲ. ಇನ್ನು ಕೆಲವರಿಗೆ ಗೋದಿ ಅಥವಾ ಗೋದಿಯಿಂದ ಉತ್ಪನ್ನವಾದ ಪದಾರ್ಥಗಳೆಂದರೆ ಆಗಲಿಕ್ಕಿಲ್ಲ. ಮತ್ತೆ ಕೆಲವರಿಗೆ ಮೊಟ್ಟೆಯಿಂದ ಅಲರ್ಜಿಯುಂಟಾಗಬಹುದು. ಅಮೇರಿಕದ ಆ ನರ್ಸ್* ನರಸಿಂಹಯ್ಯನವರಿಗೆ ಮೊಟ್ಟೆಯಿಂದ ಅಲರ್ಜಿ ಉಂಟಾಗುತ್ತಿರಬಹುದೆಂದು ಶಂಕಿಸಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ.

ಇನ್ನು ಕೆಲವರಿಗೆ ಚಾಕೋಲೇಟ್ ಎಂದರೇ ಆಗದು. ಅಪರೂಪ

* ನೋಡಿ, ೧೯೯೪ರ ಅಕ್ಟೋಬರ್ ಸಂಚಿಕೆ ಪುಟ ೭೪



▲ ಪೆನ್‌ಸಿಲಿನ್ ದೇಹಕ್ಕೆ ಒಗ್ಗದಾಗ ಪ್ರತಿಕ್ರಿಯೆಯಾಗಿ ಮೈಮೇಲೆ ಕೆಂಪಾದ ಗುಳ್ಳೆಗಳು ಮೂಡಬಹುದು.

ಕ್ಕೆಂಬಂತೆ ಹಣ್ಣಿನ ಜಾಮ್‌ನಿಂದ ಅಲರ್ಜಿಗೆ ಒಳಗಾಗುವವರೂ ಇದ್ದಾರೆ.

ಕೆಲವರಿಗೆ ಔಷಧಿಗಳಿಂದ ಅಲರ್ಜಿ ಉಂಟಾಗಬಹುದು. ಬಹುಪಯೋಗಿಯಾದ, ಆದರೆ ಕದಾಚಿತ್ ಕೆಲವರಲ್ಲಿ ಅಲರ್ಜಿಯನ್ನುಂಟು ಮಾಡುವ ನೂರು ಬಗೆಯ ಔಷಧಗಳು ಪೇಟೆಯಲ್ಲಿವೆ. ಅವುಗಳಲ್ಲಿ ಪೆನ್‌ಸಿಲಿನ್ ಹಾಗೂ ಆಸ್ಪಿರಿನ್ ಮುಖ್ಯ. ಪೆನ್‌ಸಿಲ್ಲಿನ್ನನ್ನು ಸುಲಭವಾಗಿ ಗುರುತಿಸಬಹುದು. ಇಷ್ಟಕ್ಕೂ ಅಲರ್ಜಿಯ ತೊಂದರೆಯನ್ನು ಬಹುಮಟ್ಟಿಗೆ ನಿವಾರಿಸುವ ಸಂಯುಕ್ತವನ್ನೊಳಗೊಂಡ ಪೆನ್‌ಸಿಲಿನ್ನೇ ಹೆಚ್ಚಾಗಿ ಪೇಟೆಯಲ್ಲಿ ಲಭ್ಯವಾಗಿರುವುದರಿಂದ ಈಗ ಅದರಿಂದ ಮೊದಲಿನಷ್ಟು ಅಪಾಯವೂ ಇಲ್ಲ ನಿಜ; ಆದರೆ ಆಸ್ಪಿರಿನ್ನಿನ ಬಗೆಗೆ ಇದೇ ಮಾತನ್ನು ಹೇಳಲಾಗದು. ಅಸಿಟಿಲ್ ಸ್ಯಾಲಿಸಿಲಿಕ್ ಆ್ಯಸಿಡ್ ಎನ್ನುವುದು ಆ್ಯಸ್ಪಿರಿನ್ನಿನ ರಾಸಾಯನಿಕ ಹೆಸರು. ಬೇರೆ-ಬೇರೆ ಔಷಧಿಗಳಲ್ಲಿ ಅದರಲ್ಲೂ- ವಿಶೇಷವಾಗಿ ನೋವು ನಿವಾರಕ ಔಷಧಿಗಳಲ್ಲಿ - ಅದು ಬೆರೆತಿರುವ ಸಂಭವ ಹೆಚ್ಚು. ಅತ್ಯಲ್ಪ ಪ್ರಮಾಣದಲ್ಲಿ ಬೆರೆತಿದ್ದರೂ ಅಲರ್ಜಿಕ್ ಪ್ರವೃತ್ತಿಯುಳ್ಳವರಲ್ಲಿ ಅದು ಬಹಳ ಕಿರಿಕಿರಿಯುಂಟುಮಾಡಬಲ್ಲದು. ಸಲ್ಫೋನಮೈಡುಗಳೂ ಅಲರ್ಜಿಯುಂಟುಮಾಡತಕ್ಕಂತಹವೇ. ಆದ್ದ

ರಿಂದ ಡಾಕ್ಟರರ ಸಲಹೆಯಿಲ್ಲದೆ ಯಾವ ಔಷಧವನ್ನೂ ಸೇವಿಸಬೇಡಿ. ಇಲ್ಲವಾದರೆ ಒಂದು ಕೆಟ್ಟ ಪರಿಣಾಮವನ್ನು ಕಳೆದುಕೊಳ್ಳಲು ಹೋಗಿ ಅದಕ್ಕಿಂತ ಹೆಚ್ಚು ಭೀಕರವಾದ ಪರಿಣಾಮವನ್ನು ಎದುರಿಸಬೇಕಾದೀತು !

ತಲೆಯಿಂದ ಉದುರುವ ಹೊಟ್ಟನಿಂದಲೂ ಅಲರ್ಜಿ ಬರಬಹುದು. ಆದ್ದರಿಂದ ಅಲರ್ಜಿಯುಂಟಾದಾಗ ಮನೆಯಲ್ಲಿ ಯಾರ ತಲೆಯಿಂದಾದರೂ ಹೊಟ್ಟು ಉದುರುತ್ತದೆಯೆ ? ಎನ್ನುವುದನ್ನು ಪರಿಶೀಲಿಸಿ. ಹೊಟ್ಟನ್ನು ನಿವಾರಿಸುವ ಔಷಧಗಳು, ಶಾಂಪೂಗಳು, ಈಗ ಪೇಟೆಯಲ್ಲಿ ಸಾಕಷ್ಟು ಲಭ್ಯ. ಅದರಿಂದ ಹೊಟ್ಟಿಗೂ ಮುಕ್ತಿ; ಅಲರ್ಜಿಗೂ ವಿದಾಯ. ಮನೆಯಲ್ಲಿ ಸಾಕಿದ ನಾಯಿ, ಬೆಕ್ಕುಗಳಂತಹ ಪ್ರಾಣಿಗಳ ಚರ್ಮದಿಂದ ಉದುರಿದ ನಿರ್ಜೀವ ಜೀವಕಣಗಳು ಹವೆಯಲ್ಲಿ ತೇಲಿಕೊಂಡು ಬಂದು ಅಲರ್ಜಿಯುಂಟುಮಾಡಿರಲೂ ಬಹುದು. ಕಾರಣ ಇಂತಹುದೆಂದು ತಿಳಿಯದಾಗ ಆ ಸಾಕುಪ್ರಾಣಿಗಳನ್ನು ತಾತ್ಕಾಲಿಕವಾಗಿಯಾದರೂ ದೂರ ಇರಿಸಿ. ಅವುಗಳಿಂದ ಅಲರ್ಜಿಯುಂಟಾದದ್ದೇ ನಿಜವಾದರೆ ಆ ಸಾಕು ಪ್ರಾಣಿಗಳನ್ನು ಯಾರಿಗಾದರೂ ಕೊಟ್ಟು ಬಿಡಿ. ಪ್ರಾಣಿಯ ಮೇಲಿನ ಪ್ರೀತಿಗಿಂತ ಆರೋಗ್ಯ ಮುಖ್ಯ.

ಕೆಲವು ಬ್ಯಾಕ್ಟೀರಿಯಗಳು ಅಂಗಾಂಶದಲ್ಲಿ ಸೇರಿ, ಬೆಳೆದು ಅಲರ್ಜಿಕ್ ಪ್ರತಿಕ್ರಿಯೆಯನ್ನುಂಟುಮಾಡಬಲ್ಲವು. ಅವುಗಳನ್ನು ಗುರುತಿಸಿ, ನಿದಾನಿಸುವುದು ತಜ್ಞರಿಗೇ ಬಿಟ್ಟದ್ದು.

ಘ್ರಾಣೇಂದ್ರಿಯದ ಸೂಕ್ಷ್ಮ ಪದರದ ಅಥವಾ ಚರ್ಮದ ಸಂಪರ್ಕಕ್ಕೆ ಬರುವುದೇ ತಡ, ಕೆಲವು ಪರಾಗದ ಕಣಗಳು, ಸಸ್ಯದ ಬೀಜಗಳು ಅಥವಾ ಸಸ್ಯದ ಎಲೆಗಳು, (ಚಿಕ್ಕಂದಿನಲ್ಲಿ ಸಹಪಾಠಿಗಳು ಗುರುಗಳಿಗೆ ನಸಗುನ್ನಿ ಪುಡಿಯನ್ನು ಹಾಕುತ್ತಿದ್ದುದು ನೆನಪಿಲ್ಲವೆ ?) ತಕ್ಷಣ ಅಲರ್ಜಿಯುಂಟುಮಾಡಬಲ್ಲವು. ಹಕ್ಕಿಗಳ ಗರಿ ಅಥವಾ ತುಪ್ಪಳಗಳೂ ಅಲರ್ಜಿಕಾರಕವೆ. ಹಂಸತೂಲಿಕಾತಲ್ಪದಲ್ಲಿ ಪವಡಿಸುವ ಯೋಗ ಎಲ್ಲರಿಗಿರುವುದಿಲ್ಲ ನಿಜ. ಆದರೆ ಆಕಸ್ಮಾತ್ತಾಗಿ ಆ ಯೋಗ ದಕ್ಕಿದರೂ ಅದರಲ್ಲಿ ಮಲಗಿ ಸುಖವಾಗಿ ನಿದ್ರಿಸಲು ಸಾಧ್ಯವೆಂದು ಖಂಡಿತ ಹೇಳಲಾಗುವುದಿಲ್ಲ. ಪ್ಲಾಸ್ಟಿಕ್ಕುಗಳೂ ಅಲರ್ಜಿಕಾರಕವೇ. ಸೌಂದರ್ಯ ಪ್ರಸಾಧನಗಳೂ ಹಾಗೆಯೆ. ಲೋಹಗಳನ್ನಾಗಲಿ ಕಟ್ಟಿಗೆಯನ್ನಾಗಲಿ ಕೊರೆಯುವ ಕೆಲಸ ಮಾಡುವವರಲ್ಲಿ ಆಯಾ ಕಣಗಳು ತೂರಿಕೊಂಡು ಬಂದು ಅಲರ್ಜಿಯುಂಟುಮಾಡಬಲ್ಲವು. ರಬ್ಬರಿನಿಂದ, ಚರ್ಮದಿಂದ ತಯಾರಿಸಲ್ಪಟ್ಟ ಪದಾರ್ಥಗಳೂ ಅಲರ್ಜಿಯುಂಟುಮಾಡುವಂತಹವೇ. ಆದ್ದರಿಂದ ಅಲರ್ಜಿ ಉಂಟಾದಾಗ ಅದು ಪಾದರಕ್ಷೆಗಳಿಂದಾಗಲಿ

ವ್ಯಾನಿಟಿ ಬ್ಯಾಗಿನಿಂದಾಗಲಿ ಉಂಟಾಗಿದೆಯೆ ? ಎಂಬುದನ್ನು ಪರೀಕ್ಷಿಸಿ. ಆ ವಸ್ತುಗಳನ್ನು ನಾಲ್ಕಾರು ದಿನ ದೂರವಿರಿಸಿದಾಗ ಅಲರ್ಜಿಯ ಲಕ್ಷಣಗಳು ಶಮನಗೊಂಡರೆ ಆ ಪದಾರ್ಥಗಳಿಂದ ಅಲರ್ಜಿ ಬಂದಿದೆಯೆಂದೇ ಅರ್ಥ. ಅಲರ್ಜಿಯಿಂದ ಪಾರಾಗಬೇಕೆಂದರೆ ಅವುಗಳ ಉಪಯೋಗವನ್ನು ಶಾಶ್ವತವಾಗಿ ತ್ಯಜಿಸಲೇಬೇಕು.

ಹೆಚ್ಚು ಬೆಳೆ ಬರುವಂತಾಗಲು ರಾಸಾಯನಿಕ ಗೊಬ್ಬರಗಳನ್ನು ಬಳಸುವುದಿದೆ. ಅಲ್ಲದೆ ಬೆಳೆಗೆ ಹುಳುಗಳು ತಗುಲದಂತಾಗಲು ಬೆಳೆಗಳ ಮೇಲೆ ಕ್ರಿಮಿನಾಶಕಗಳನ್ನು ಸಿಂಪಡಿಸುವುದಿದೆ. ಈ ರಾಸಾಯನಿಕಗಳಲ್ಲಿನ ಎಷ್ಟೋ ಅಂಶಗಳು ಅಲರ್ಜಿಯುಂಟುಮಾಡಬಲ್ಲವು. ಅಲ್ಲದೆ ಈ ರಾಸಾಯನಿಕಗಳಿಂದ ಬೇರೆ ದುಷ್ಪರಿಣಾಮಗಳೂ ಉಂಟು. ಕೃಷಿಕರು ಕೈಗವಚಗಳನ್ನು ಧರಿಸಿಯೇ ಇವುಗಳನ್ನು ಬಳಸುವುದು ಮೇಲು. ಇಷ್ಟಾದರೂ ಅಲರ್ಜಿಕ್ ಪ್ರವೃತ್ತಿಯುಳ್ಳವರಿಗೆ ಇವುಗಳಿಂದ ಅಲರ್ಜಿ ಬರಬಹುದು. ಅಂಥವರು ಆ ಕೆಲಸವನ್ನು ಅಲರ್ಜಿಯ ಪ್ರವೃತ್ತಿ ಇಲ್ಲದವರಿಗೇ ವಹಿಸಿಕೊಡುವುದು ಉತ್ತಮ.

ಕೆಲವು ಸೂಕ್ಷ್ಮಾಣುಗಳು ರೋಗಕಾರಕವಾಗಿರುವುದಿಲ್ಲ ನಿಜ. ಆದರೆ ಅವು ಶರೀರವನ್ನು ಪ್ರವೇಶಿಸಿ, ಅಂಗಾಂಶದೊಳಗೆ ತೂರಿಕೊಂಡು ಹೋಗಿ, ಅಲ್ಲಿಯೆ ಬೆಳೆದು ಅಲರ್ಜಿಯ ಪ್ರತಿಕ್ರಿಯೆಯುಂಟುಮಾಡಬಲ್ಲವು. ಇದನ್ನು ಗುರುತಿಸುವುದು ಕಷ್ಟವಾದರೂ ಅಲರ್ಜಿಯ ತಜ್ಞರಿಗೇನೂ ಅದು ಅಷ್ಟು ಕಷ್ಟದ ಕೆಲಸವಲ್ಲ.

ಅಪರೂಪಕ್ಕೆಂಬಂತೆ ಚಳಿ, ಬಿಸಿಲುಗಳಂತಹ ಪ್ರಾಕೃತಿಕ ಕಾರಣಗಳಿಂದಲೂ ಅಲರ್ಜಿಯುಂಟಾಗಬಲ್ಲದು. ಪ್ರಲೇಪಕ ಜ್ವರ ಬಂದವರು ಪ್ರಖರವಾದ ಬಿಸಿಲಿನಲ್ಲಿ ಸ್ವಲ್ಪ ಕಾಲ ನಿಂತರೂ ಸೀನಲು ಪ್ರಾರಂಭಿಸುವುದನ್ನು ನೀವು ಗಮನಿಸಿರಬಹುದು.

ಬಟ್ಟೆಗಳನ್ನು ತೊಳೆಯಲು ಪೇಟೆಯಲ್ಲೀಗ ಸಾಕಷ್ಟು ಮಾರ್ಜಕಗಳು ಲಭ್ಯ. ನೋಡಲು ಒಂದೇ ತೆರನಾಗಿ ಕಂಡರೂ, ಅವಶ್ಯಕವಾದ ಕೆಲವು ಮೂಲಭೂತ ವಸ್ತುಗಳು ಒಂದೇ ಆದರೂ, ವಾಸ್ತವವಾಗಿ ಎಲ್ಲ ಮಾರ್ಜಕಗಳೂ ಒಂದೇ ಅಲ್ಲ. ಹೀಗಾಗಿ ಎಲ್ಲ ಮಾರ್ಜಕಗಳು ಎಲ್ಲರಿಗೂ ಒಗ್ಗುತ್ತದೆಂದು ಹೇಳಲಾಗದು. ಕೆಲವು ಮಾರ್ಜಕಗಳು ಕೆಲವರಿಗೆ ಅಲರ್ಜಿಯುಂಟು ಮಾಡಿದರೆ ಇನ್ನು ಕೆಲವು ಮಾರ್ಜಕಗಳು ಬೇರೆ ಕೆಲವರಲ್ಲಿ ಅಲರ್ಜಿಯುಂಟುಮಾಡಬಹುದು. ಅತ್ಯುನ್ನತ ದರ್ಜೆಯವೆಂದು ಪ್ರಚಾರಮಾಡಲ್ಪಡುವ ಕೆಲವು ಮಾರ್ಜಕಗಳಲ್ಲಿ ಕೊಳೆತಿನ್ನುವ ಕಿಣ್ವಗಳನ್ನು ಬೆರೆಸಲಾಗಿರುತ್ತದೆ. ಇವು ನೀರಿನಲ್ಲಿ ಕ್ಷಿಪ್ರವಾಗಿ ಬೆಳೆದು, ಕೊಳೆಯನ್ನು ತಿಂದು ಬಟ್ಟೆಯನ್ನು ಸ್ವಚ್ಛಗೊಳಿಸಬಲ್ಲವು. ಆದರೆ ಈ ಕಿಣ್ವಗಳೂ ಅಲರ್ಜಿಕಾರಕವೆ. ಎಲ್ಲ ಮಾರ್ಜಕಗಳು

ಎಲ್ಲರಲ್ಲಿ ಅಲರ್ಜಿಯುಂಟು ಮಾಡುವುದಿಲ್ಲ ನಿಜ; ಆದರೆ ಅಪರೂಪಕ್ಕೊಂಬಂತೆಯಾದರೂ ಕೆಲವರು ಈ ಮಾರ್ಜಕಗಳಿಗೆ ಅಲರ್ಜಿಕರಾಗಿರುತ್ತಾರೆನ್ನುವುದನ್ನು ಅಲಕ್ಷಿಸಲಾಗುವುದಿಲ್ಲ.

ಮೂಗುಕಟ್ಟುವ ಹಾಗೆ ಪರಿಮಳಬೀರುವ ಅಗರಬತ್ತಿಗಳು, ಸುಗಂಧದ್ರವ್ಯಗಳು, ಪೇಂಟುಗಳು, ಪೀಠೋಪಕರಣಗಳಿಗೆ ಬಳಿಯಲಾಗುವ ಪಾಲೀಶುಗಳು, ದುರ್ಗಂಧನಾಶಕಗಳು, ನೆಲವನ್ನು ಸ್ವಚ್ಛಗೊಳಿಸಲು ಬಳಸಲಾಗುವ ದ್ರವಗಳು, ಕೇಶತೈಲಗಳು ಮುಂತಾದವುಗಳೂ ಇದೇ ಜಾತಿಗೆ ಸೇರಿದವು.

ಡಬ್ಬೀಕರಿಸಿದ ಖಾದ್ಯವಸ್ತುಗಳನ್ನು ತಿನ್ನುವುದೇ ಇತ್ತೀಚೆಗೆ ಒಂದು ಹವ್ಯಾಸವಾಗಿ ಬೆಳೆದಿದೆ. ಇವುಗಳಲ್ಲಿನ ಆಹಾರ ಪದಾರ್ಥಗಳು ಹೆಚ್ಚು ಕಾಲ ಬಾಳಲು ರಕ್ಷಕದ್ರವ್ಯಗಳನ್ನು ಬಳಸುವುದಿದೆ. ಈ ರಕ್ಷಕ ದ್ರವ್ಯಗಳಲ್ಲಿ ಮುಖ್ಯವಾದವೆಂದರೆ ಎರಡು; ಒಂದು ಸೋಡಿಯಂ ಬೆಂಜೋಯೇಟ್; ಇನ್ನೊಂದು ಪೊಟ್ಯಾಶಿಯಂ ಮೆಟಬೈಸಲ್ಫೈಟ್. ದೀರ್ಘಕಾಲ ಇವನ್ನು ಬಳಸಿದರೆ ಅದು ಕ್ಯಾನ್ಸರಿಗೆ ಅನುವುಮಾಡಿಕೊಡುವುದೆಂಬ ಅಭಿಮತ ತಜ್ಞರಲ್ಲಿ ಉಂಟು. ಅಲ್ಲದೆ ಅಲರ್ಜಿಯ ಪ್ರವೃತ್ತಿಯಿರುವವರು ಅತ್ಯಲ್ಪ ಪ್ರಮಾಣದಲ್ಲಿ ಈ ರಕ್ಷಕ ದ್ರವ್ಯಗಳು ಬೆರೆತ ಆಹಾರ ಪದಾರ್ಥಗಳನ್ನು ಸೇವಿಸಿದರೂ ಅಲರ್ಜಿಗೆ ಈಡಾಗಬಹುದು. ಇಂಥವರು ಆದಷ್ಟು ಮಟ್ಟಿಗೆ ಈ ರಕ್ಷಕ ದ್ರವ್ಯಗಳಿಂದ ದೂರ ಇರುವುದು ಒಳಿತು.

ಪ್ರಲೇಪಕ ಜ್ವರ, ಅಸ್ತಮಾ, ಇಸಬು, ಪಿತ್ತಗಂಧ, (urticaria) ಒಂದೆ ಸಮನೆ ಹೊಟ್ಟೆ ಜಾಡಿಸುವುದು, ಬಿಟ್ಟುಬಿಡದೆ ಕಾರಿಕೊಳ್ಳುವುದು ಮೊದಲಾದವುಗಳು ಅಲರ್ಜಿಯ ಪ್ರತಿಕ್ರಿಯೆಯಾಗಿ ಅಭಿವ್ಯಕ್ತಿಗೊಳ್ಳಬಹುದು.

ಹಾಗಾದರೆ ಉಂಟಾಗಿದ್ದು ಅಲರ್ಜಿಯೋ ಅಲ್ಲವೋ ಎನ್ನುವುದನ್ನು ಹೇಗೆ ತಿಳಿದುಕೊಳ್ಳುವುದು ? ಅಂತಹ ಪ್ರಸಂಗದಲ್ಲಿ ವೈದ್ಯರು ಆ ವ್ಯಕ್ತಿ ಇರುವ ಪರಿಸರ, ಮಾಡುವ ವೃತ್ತಿ, ಮನೆಯಲ್ಲಿ ಸಾಕಿದ ಪ್ರಾಣಿಗಳು, ರೋಗಲಕ್ಷಣ ಉಂಟಾದ ಋತು, ಸೇವಿಸಿದ ಆಹಾರ ಪದಾರ್ಥಗಳು, ಔಷಧಗಳು ಈ ಬಗೆಗೆ ಕೂಲಂಕಷವಾಗಿ ವಿಚಾರಿಸುತ್ತಾರೆ. ಅನಂತರ ಅವನ ರಕ್ತದಲ್ಲಿ ಐಜಿಈ ಪ್ರತಿವಿಷಗಳಾಗಲಿ ಸೈನೋಫೈಲಿಸ್‌ಗಳೆಂಬ ರಕ್ತಕಣಗಳಾಗಲಿ ಸಾಧಾರಣಮಟ್ಟಕ್ಕಿಂತ ಹೆಚ್ಚಾಗಿವೆಯೆ ? ಎಂಬುದನ್ನು ಪರಿಶೀಲಿಸುತ್ತಾರೆ. ಇದಾದ ನಂತರ ಅಲರ್ಜಿಕಾರಕ ವಸ್ತುಗಳ ಅರ್ಕದಿಂದ ಕೆಲವೊಂದು ಚರ್ಮಪರೀಕ್ಷೆಗಳನ್ನು ನಡೆಸಿ ಖಚಿತವಾದ ಫಲಿತಾಂಶ ಕಂಡುಬಂದರೆ ವ್ಯಕ್ತವಾದ ಲಕ್ಷಣಗಳು ಅಲರ್ಜಿಯಿಂದ ಉಂಟಾದದ್ದೆಂದು ನಿರ್ಧರಿಸುತ್ತಾರೆ.



ಕೆಲವೊಮ್ಮೆ ಇಸುಬು ಅಲರ್ಜಿಯ ಪ್ರತಿಕ್ರಿಯೆಯಾಗಿ ವ್ಯಕ್ತಗೊಳ್ಳಲೂ ಬಹುದು.

ಅಲರ್ಜಿಯನ್ನೆದುರಿಸಲು ಡಾಕ್ಟರರು ನಾಲ್ಕು ಬಗೆಯ ಮಾರ್ಗೋಪಾಯಗಳನ್ನು ಅನುಸರಿಸುತ್ತಾರೆ:

ಅವುಗಳಲ್ಲೊಂದೆಂದರೆ ಯಾವ ವಸ್ತುವಿನಿಂದ ಅಲರ್ಜಿ ಉಂಟಾಗುತ್ತದೆಂಬುದನ್ನು ಕಂಡು ಹಿಡಿದು ಆ ವಸ್ತುವಿನಿಂದ ದೂರ ಉಳಿಯುವಂತೆ ರೋಗಿಗೆ ಸಲಹೆ ನೀಡುವುದು. ಉದಾಹರಣೆಗೆ ಪರಾಗ ಕಣಗಳಿಂದ ಪ್ರಲೇಪಕ ಜ್ವರ ಬರುತ್ತದೆಯೆನ್ನುವುದು ಖಚಿತವಾದಾಗ ಮನೆಯ ಸುತ್ತ ಹೇರಳವಾಗಿ ಸಸ್ಯಗಳು ಬೆಳೆದಿದ್ದರೆ ಅವುಗಳನ್ನು ನಾಶಪಡಿಸುವಂತೆ ಸೂಚಿಸುವುದು. ಅದು ಸಾಧ್ಯವಾಗದಿದ್ದರೆ ಸಸ್ಯಗಳು ಹೂ ಬಿಡುವ ಸಮಯದಲ್ಲಿ ಮನೆ ಬಿಡುವಂತೆ ಸಲಹೆ ನೀಡುವುದು ಅಥವಾ ಅವನು ಹೆಚ್ಚು ಹೂಗಳಿರುವ ಜಾಗದಲ್ಲಿ ಓಡಾಡುತ್ತಿದ್ದರೆ ಮಾರ್ಗ ಬದಲಿಸುವಂತೆ ಸೂಚಿಸುವುದು.

ಅಲರ್ಜಿ ಆಹಾರಜನ್ಯವಾಗಿದ್ದರೆ ರೋಗಿಯ ಆಹಾರಾಭ್ಯಾಸವನ್ನು ಡಾಕ್ಟರರು ವಿವರವಾಗಿ ಪರಿಶೀಲಿಸಿ ಆಹಾರದ ಪ್ರಮಾಣವನ್ನಲ್ಲದಿದ್ದರೂ ಆಹಾರ ಪದಾರ್ಥಗಳ ಸಂಖ್ಯೆಯನ್ನು ಕ್ರಮೇಣ ಮಿತಗೊಳಿಸುತ್ತ ಹೋಗುತ್ತಾರೆ. ಕೊನೆಗೊಮ್ಮೆ ಅಲರ್ಜಿಗೆ ಕಾರಣವಾದ ಪದಾರ್ಥ ಸಿಕ್ಕಿತೆಂದರೆ ಅದನ್ನು ಆಹಾರದಿಂದ ಸಂಪೂರ್ಣವಾಗಿ ವಿಸರ್ಜಿಸಲು

ಸಲಹೆ ನೀಡುತ್ತಾರೆ. ಆದರೆ ಅಲರ್ಜಿ ತತ್‌ಕ್ಷಣವೇ ವ್ಯಕ್ತವಾಗದೆ ಕೆಲವು ಕಾಲ ತೆಗೆದುಕೊಳ್ಳುವುದರಿಂದ ಯಾವ ಪದಾರ್ಥದಿಂದ ಅಲರ್ಜಿ ಉಂಟಾಗಿದೆಯೆಂಬ ಬಗ್ಗೆ ಕೆಲವೊಮ್ಮೆ ಡಾಕ್ಟರರೂ ಗೊಂದಲಕ್ಕೀಡಾಗುವುದುಂಟು.

ಅಲರ್ಜಿಗೆ ಒಳಗಾದವರನ್ನು ಉಪಚರಿಸಲು ಡಾಕ್ಟರರು ಬಳಸುತ್ತಿರುವ ಇನ್ನೊಂದು ವಿಧಾನ ಪಾಶ್ಚಾತ್ಯರಿಗೆ ಹೊಸದಾದರೂ ಭಾರತದ ವೈದ್ಯಕ ಪದ್ಧತಿಗೆ ಹಳೆಯದು. ಹಿಂದಿನ ಕಾಲದಲ್ಲಿ ರಾಜರಿಗೆ ವಿಷಪ್ರಾಶನದ ಭಯವಿದ್ದಾಗ ಅತಿ ಸಣ್ಣ ಪ್ರಮಾಣದಲ್ಲಿ ನಿಯತವಾಗಿ ವಿಷ ಸೇವಿಸುವ ಮೂಲಕ ವಿಷಕ್ಕೆ ಒಗ್ಗುವ ಹಾಗೆ ಶರೀರವನ್ನು ಪಳಗಿಸುತ್ತಿದ್ದರಂತೆ. ಅಲರ್ಜಿಯನ್ನು ಪಳಗಿಸುವಲ್ಲೂ ಡಾಕ್ಟರರು ಇದೇ ತಂತ್ರವನ್ನು ಬಳಸುತ್ತಿದ್ದಾರೆ. ಅಲರ್ಜಿಗೆ ಕಾರಣವಾದ ಪದಾರ್ಥವನ್ನು ಕಂಡುಹಿಡಿದ ನಂತರ ಆ ಪದಾರ್ಥದ ಅರ್ಕವನ್ನು ಚುಚ್ಚುಮದ್ದಿನ ರೂಪದಲ್ಲಿ ನೀಡಲು ಅವರು ಪ್ರಾರಂಭಿಸುತ್ತಾರೆ. ಅತ್ಯಲ್ಪ ಪ್ರಮಾಣದಿಂದ ಆರಂಭಿಸಿ, ಪ್ರಮಾಣವನ್ನು ಹೆಚ್ಚಿಸುತ್ತಾ ಚುಚ್ಚುಮದ್ದು ನೀಡುವ ಅವಧಿಯನ್ನೂ ವಿಸ್ತರಿಸುತ್ತಾ ಹೋಗುತ್ತಾರೆ. ಕ್ರಮೇಣವಾಗಿ ಅಲರ್ಜಿಕಾರಕ



▲ ಅಲರ್ಜಿಕಾರಕವೆಂದು ಭಾವಿಸಲ್ಪಟ್ಟ ಪದಾರ್ಥಗಳ ಅರ್ಕವನ್ನು ಡಾಕ್ಟರರು ಚರ್ಮದ ಕೆಳಭಾಗದಲ್ಲಿ ಸೇರಿಸಿ 'ಪ್ರತಿಕ್ರಿಯೆ ಕಂಡುಬರುತ್ತದೆಯೆ?' ಎನ್ನುವುದನ್ನು ಪರೀಕ್ಷಿಸುತ್ತಾರೆ. ಪ್ರತಿಕ್ರಿಯೆ ಕಂಡು ಬಂದರೆ ಸೇರಿಸಿದ ವಸ್ತುವಿನಿಂದ ಅಲರ್ಜಿಯುಂಟಾಗಿದೆಯೆಂದೇ ಅರ್ಥ.

ವಸ್ತುವಿಗೆ ದೇಹ ಒಗ್ಗುವುದರಿಂದ ರೋಗಿಯನ್ನು ಮುಂದೆಂದೂ ಅಲರ್ಜಿ ಅಷ್ಟಾಗಿ ಬಾಧಿಸದು.

ಆದರೆ ಯಾವ ವಸ್ತುವಿನಿಂದ ಅಲರ್ಜಿಯುಂಟಾಗುತ್ತದೆನ್ನುವುದನ್ನು ಕಂಡುಕೊಳ್ಳುವುದೇ ಕಷ್ಟ. ಒಮ್ಮೊಮ್ಮೆ ಒಂದಕ್ಕಿಂತ ಹೆಚ್ಚು ವಸ್ತುಗಳು ಅಲರ್ಜಿಯ ಪ್ರಕ್ರಿಯೆಯನ್ನೊಳಗೊಂಡಿರುತ್ತವೆಯಾದ್ದರಿಂದ ಅವೆಲ್ಲ ಅಲರ್ಜಿಕಾರಕಗಳನ್ನು ಕಂಡು ಹಿಡಿಯುವುದು ಇನ್ನೂ ಕಷ್ಟ. ಚಿಕಿತ್ಸೆಯ ಅವಧಿ ದೀರ್ಘವಾದದ್ದು- ಒಂದು ಒಂದೂವರೆ ವರ್ಷ ತಗಲುವುದುಂಟು. ಇಷ್ಟಕ್ಕೂ ಎಲ್ಲ ಬಗೆಯ ಅಲರ್ಜಿಗಳಿಗೂ ಈ ಚಿಕಿತ್ಸೆಯನ್ನು ಅನ್ವಯಿಸಲಾಗದು. ಹೂಗಳ ಪರಾಗ, ಧೂಳಿನ ಕಣಗಳಿಂದ ಅಲರ್ಜಿಯುಂಟಾದಾಗ ಮಾತ್ರ ಈ ವಿಧಾನ ಉಪಯುಕ್ತ. ಅಲರ್ಜಿಗೆ ಕಾರಣವಾದದ್ದು ರಾಸಾಯನಿಕ ಮೂಲದ್ದಾಗಿದ್ದರೆ ಶರೀರದ ಸಹನಾಶಕ್ತಿಯನ್ನು ಬೆಳೆಸುವ ಈ ಕ್ರಮ ತೀರಾ ನಿಷ್ಪ್ರಯೋಜಕ.

ರೋಗವನ್ನೆದುರಿಸುವ ಬದಲು ರೋಗ ಲಕ್ಷಣಗಳನ್ನೆದುರಿಸುವ ಮೂಲಕ ರೋಗಿಗೆ ಒಂದಿಷ್ಟು ಉಪಶಮನ ಒದಗಿಸಿಕೊಡುವುದು ಮತ್ತೊಂದು ವಿಧಾನ. ಈ ಬಗೆಯ ಚಿಕಿತ್ಸೆಯಲ್ಲಿ ಆ್ಯಂಟಿಹಿಸ್ಟಮೈನುಗಳ ಪಾತ್ರ ಮಹತ್ತರವಾದದ್ದು.

ಅಲರ್ಜಿಕಾರಕ ಪದಾರ್ಥಗಳು ದೇಹದಲ್ಲಿ ಸೇರಿಕೊಂಡಾಗ ಐ.ಜಿ.ಈ. ಎಂಬ ಪ್ರತಿವಿಷಗಳು ಹೆಚ್ಚು ಹೆಚ್ಚಾಗಿ ಉತ್ಪಾದನೆಗೊಳ್ಳುತ್ತವೆಯೆಂದು ಹಿಂದೆ ವಿವರಿಸಿದೆಯಷ್ಟೆ. ಈ ಅಲರ್ಜಿ ಮಾಧ್ಯಮಗಳಿಗೆ ರಾಸಾಯನಿಕವಾಗಿ ಹಿಸ್ಟಮೈನುಗಳೆಂದು ಹೆಸರು. ಈ ಹಿಸ್ಟಮೈನುಗಳ ಉತ್ಪಾದನೆಯನ್ನು ತಗ್ಗಿಸುವ ಮೂಲಕ ರೋಗಿಗೆ ತಾತ್ಕಾಲಿಕವಾಗಿ ಉಪಶಮನವನ್ನೊದಗಿಸಲು ಆ್ಯಂಟಿ ಹಿಸ್ಟಮೈನುಗಳೆಂಬ ಔಷಧಗಳು ಪೇಟೆಗೆ ಬಂದಿವೆ. ಒಂದು ಹಿಸ್ಟಮೈನು ಇನ್ನೊಂದನ್ನು ಹೋಲುವುದಿಲ್ಲ. ಆದ್ದರಿಂದ ಒಬ್ಬರಿಗೆ ಪ್ರಯೋಜನಕರವಾದ ಹಿಸ್ಟಮೈನು ಇನ್ನೊಬ್ಬರಿಗೆ ಪ್ರಯೋಜನಕರವಾಗಲಿಕ್ಕಿಲ್ಲ. ಡಾಕ್ಟರರು ಅನುಮಾನದ ಆಧಾರದ ಮೇಲೆ ಔಷಧಿಗಳನ್ನು ವಿಧಿಸುತ್ತಾ ಹೋಗಿ ಕೊನೆಗೆ ಅವರಿಗೆ ಒಗ್ಗುವ ಹಿಸ್ಟಮೈನನ್ನು ನಿರ್ಧರಿಸುತ್ತಾರೆ. ಶೀಘ್ರವಾಗಿ ಫಲವನ್ನು ನೀಡುತ್ತವೆಯಾದರೂ ರೋಗಿಯನ್ನು ತಂದ್ರಿತನನ್ನಾಗಿ ಮಾಡುವ ಗುಣವೂ ಇವಕ್ಕಿರುವುದರಿಂದ ಟ್ರಕ್ ಚಾಲಕರು, ವಿಮಾನ ಚಾಲಕರು, ಸದಾ ಚಲನೆಯಲ್ಲಿರುವ, ಗಮನವನ್ನು ಒಂದೇ ಕಡೆಗೆ ಕೇಂದ್ರಿತಗೊಳಿಸಿ ಕೆಲಸಮಾಡುವ ಅವಶ್ಯಕತೆಯಿರುವವರಿಗೆ ಸಾಮಾನ್ಯವಾಗಿ ಡಾಕ್ಟರರು ಇವುಗಳನ್ನು ವಿಧಿಸುವುದಿಲ್ಲ.

ಅಸ್ತಮಾದಂತಹ ಅಲರ್ಜಿ ಮೂಲವಾದ ರೋಗವು ಹವಾಮಾನದ ಬದಲಾವಣೆಯಿಂದಾಗಿ- ಅದರಲ್ಲೂ ವಿಶೇಷತಃ ಚಳಿಯಿಂದಾಗಿ-

ಉಲ್ಬಣಗೊಂಡಾಗ ಡಾಕ್ಟರರು ಕ್ರೋಮೋಲಿನ್ ಅಥವಾ ಬೆಕ್ಲೋಮೆ ಥಾರ್ಸೋನ್ ಒಳಗೊಂಡ ಆಘ್ರಾಣಕಗಳನ್ನೂ (inhaler) ಕೆಟೋಟಿ ಫೆನ್ ಮಾತ್ರೆಗಳನ್ನೂ ವಿಧಿಸುತ್ತಾರೆ.

ಅಲರ್ಜಿಯು ಇಸಬಿನ ರೂಪದಲ್ಲಿ ವ್ಯಕ್ತವಾದಾಗ ಇಸಬು ಉಂಟಾದ ಭಾಗಕ್ಕೆ ಬೆಕ್ಲೋಮೆಥಾರ್ಸೋನ್ ಬೆರೆತ ಮಲಾಮನ್ನು ಸವರಲು ಹಾಗೂ ಟೆರ್‌ಫೆನಾಡೈನ್ ಮಾತ್ರೆಗಳನ್ನು ತೆಗೆದುಕೊಳ್ಳಲು ಸೂಚಿಸುತ್ತಾರೆ.

## ಅಲರ್ಜಿ ಉಂಟಾದಾಗ ಏನು ಮಾಡಬೇಕು?

* ಅಲರ್ಜಿಕ್ ಪ್ರತಿಕ್ರಿಯೆ ಸೌಮ್ಯವೂ ಆಗಿರಬಹುದು; ಪೆನ್ಸಿಲಿನ್ನಿನಂತಹ ಪ್ರತಿಜೈವಿಕಗಳನ್ನು ತೆಗೆದುಕೊಂಡಾಗ ಪ್ರಬಲವೂ ಆಗಿರಬಹುದು. ಸೌಮ್ಯವಾಗಿದ್ದಾಗ ಏನು ಮಾಡಬೇಕೆಂಬುದನ್ನು ಈ ಕೆಳಗೆ ವಿವರಿಸಿದೆ. ಪ್ರಬಲವಾಗಿದ್ದಾಗ ಉಸಿರಾಡಲೂ ತೊಂದರೆಯಾಗಿ ಪ್ರಾಣಕ್ಕೆ ಅಪಾಯವೂ ಉಂಟಾಗಬಹುದು. ಇಂತಹ ಸ್ಥಿತಿಗೆ ವೈದ್ಯಕೀಯದಲ್ಲಿ ಫೈಲ್ಯಾಕ್ಟಿಕ್ ಷಾಕ್ ಎಂದು ಹೆಸರು. ಹೀಗಾದಾಗ ಸ್ವಲ್ಪವೂ ತಡಮಾಡದೆ ವೈದ್ಯರನ್ನು ಕರೆಸಿ ಚಿಕಿತ್ಸೆ ನೀಡಬೇಕು. ಸುದೈವದಿಂದ ಇಂತಹ ಪ್ರತಿಕ್ರಿಯೆ ತಲೆದೋರುವುದು ಕ್ವಚಿತ್ತಾಗಿ. ಜೇನ್ನೊಣದ ಕಡಿತದಿಂದಲೂ ಇಂತಹ ಪ್ರಬಲ ಪ್ರತಿಕ್ರಿಯೆ ವ್ಯಕ್ತವಾದ ನಿದರ್ಶನಗಳಿವೆ.

* ಅಲರ್ಜಿಗೆ ಕಾರಣವಾದ ವಸ್ತುವು ಪತ್ತೆಯಾದರೆ ಸಾಧ್ಯವಾದ ಮಟ್ಟಿಗೆ ಸಂಪೂರ್ಣವಾಗಿ ವರ್ಜಿಸಿರಿ. ಅಲ್ಲದೆ ಡಾಕ್ಟರರಿಂದ ಚಿಕಿತ್ಸೆ ಪಡೆಯಿರಿ.

* ಸ್ವಾಭಾವಿಕವಾಗಿ ಮಲವಿಸರ್ಜನೆಯಾಗಲು ಅನುಕೂಲವಾಗುವ ಉದ್ದೇಶ ದಿಂದ ಆದಷ್ಟು ಹೆಚ್ಚು ನೀರು ಕುಡಿಯಿರಿ. ತರಕಾರಿಗಳನ್ನು ಸೇವಿಸಿರಿ. ಆದರೆ ಕಿತ್ತಳೆ ಜಾತಿಗೆ ಸೇರಿದ ಹಣ್ಣುಗಳಿಗಾಗಲಿ ಟೊಮ್ಯಾಟೋಗಳಿಗಾಗಲಿ ಕೆಲವರು ಅಲರ್ಜಿತ ರಾಗಿರುವುದರಿಂದ ಆ ಕಾಲದಲ್ಲಿ ಅವುಗಳನ್ನು ಸೇವಿಸಬೇಡಿ.

* ಪಚನಕ್ಕೆ ಜಡವಾದ ಪದಾರ್ಥಗಳನ್ನು ವರ್ಜಿಸಿರಿ.

* ಚಾಕೊಲೇಟ್, ಕರಿದ ಪದಾರ್ಥಗಳು, ತತ್ತಿ, ಹಾಲು, ಮತ್ಸ್ಯಾಹಾರ ಹಾಗೂ ಸಿಹಿ ತಿಂಡಿಗಳನ್ನು ಸೇವಿಸಬೇಡಿ. ಉಪ್ಪಿನ ಸೇವನೆಯನ್ನು ಮಿತಗೊಳಿಸಿ.

* ಅಲರ್ಜಿಯಿರುವವರೆಗೂ ಚಹ, ಕಾಫಿ ಹಾಗೂ ಮದ್ಯಾರ್ಕ ಬೆರೆತ ಪೇಯಗಳನ್ನು ಸೇವಿಸಬೇಡಿ.

* ಇಸಬು ಉಂಟಾದಾಗ ಆ ಭಾಗವನ್ನು ತೊಳೆಯಲು ಸಾಧ್ಯವಾದ ಮಟ್ಟಿಗೆ ಸೋಪನ್ನಾಗಲಿ ಮಾರ್ಜಕಗಳನ್ನಾಗಲಿ ಉಪಯೋಗಿಸಬೇಡಿ.

* ಅಲರ್ಜಿಯಿಂದ ಮೈಕಡಿತ ಉಂಟಾದಾಗ ಒಂದು ಪರಿಮಾಣದಷ್ಟು ಬರೋಸ್ ದ್ರಾವಣಕ್ಕೆ ೧೫ ರಿಂದ ೨೦ ಪರಿಮಾಣದಷ್ಟು ನೀರು ಬೆರೆಸಿ ಆ ಭಾಗವನ್ನು ತೊಳೆಯಿರಿ. ಇಸಬು ಉಂಟಾದ ಭಾಗಕ್ಕೆ ಈ ದ್ರಾವಣದಲ್ಲಿ ನೆನೆಸಿದ ಬಟ್ಟೆಯನ್ನು ಕಟ್ಟಿ.

ಸ್ಪಿರ್ಯಾಡ್ ಹಾಗೂ ಇಪಿನೆಫ್ರೈನುಗಳನ್ನೊಳಗೊಂಡ ಪ್ರೆಡ್‌ನಿಸೋಲ್, ಹೈಡ್ರೋಕಾರ್ಟಿಸೋನ್, ಪ್ರೆಡ್‌ನಿಸೊಲೋನ್, ಬೀಟಾಮೆಥಾರ್ಸೋನ್ ಹಾಗೂ ಡಿಕ್ಸ್‌ಮೆಥಾರ್ಸೋನ್‌ಗಳನ್ನೊಳಗೊಂಡ ಔಷಧಗಳು ಅಲರ್ಜಿಯುಳ್ಳವರಿಗೆ ತುಂಬ ಪ್ರಯೋಜನಕರ. ಅದರಲ್ಲೂ ಶ್ವಾಸನಳಿಕೆಯ ಉಬ್ಬಸವುಳ್ಳವರಿಗೆ ಸ್ಪಿರ್ಯಾಡುಗಳು ಹೆಚ್ಚು ಪ್ರಯೋಜನಕರ. ಆದರೆ ಇವೆಲ್ಲ ಔಷಧಿಗಳು ತೀವ್ರ ಉಪಪರಿಣಾಮಗಳಿಗೆ ಎಡೆಮಾಡಿಕೊಡಬಹುದಾದ್ದರಿಂದ ಡಾಕ್ಟರರು ವಿಧಿಸಿದ ಹೊರತು ಇವಾವನ್ನೂ ಸೇವಿಸಕೂಡದು.

ಅಲರ್ಜಿಯು ವಿಕೋಪಕ್ಕೆ ತಿರುಗಿದಾಗ ಅಡ್ರೆನಾಲಿನ್ ಗ್ರಂಥಿಯಿಂದ ಬೇರ್ಪಡಿಸಿದ ಕೆಲವು ಬಗೆಯ ಸ್ಪಿರ್ಯಾಡುಗಳನ್ನು ಡಾಕ್ಟರರು ವಿಧಿಸುವುದುಂಟು. ಹಾರ್ಮೋನ್ ಮೂಲದ ಈ ಔಷಧಗಳು ಬಹಳ ತೀವ್ರತರ. ರೋಗಿಗೆ ಕೂಡಲೆ ಉಪಶಮನವನ್ನು ಒದಗಿಸಲ್ಲವು. ಆದರೆ ಅಷ್ಟೇ ತೀವ್ರವಾಗಿ ಉಪಪರಿಣಾಮಗಳನ್ನೂ ಬೀರಬಲ್ಲವು. ಅಲರ್ಜಿಗೆ ಸಂಬಂಧಿಸಿದ ರೋಗಗಳನ್ನು ತಹಬಂದಿಗೆ ತರುವುದರಲ್ಲಿ ಸಿದ್ಧಹಸ್ತರಾದವರು ಮಾತ್ರ ವಿಧಿಸುವ ಔಷಧಗಳಿವು.

ಕೆಲವರು ಮಾತ್ರ ಕೆಲವು ವಸ್ತುಗಳಿಗೆ ಏಕೆ ಸಂವೇದಿಗಳಾಗಿರುತ್ತಾರೆನ್ನುವುದನ್ನು ಇನ್ನೂ ಕಂಡುಹಿಡಿಯಲಾಗಿಲ್ಲ. ಅಲರ್ಜಿಯಲ್ಲಿ ಅನುವಂಶೀಯತೆಯು ಪಾತ್ರ ವಹಿಸುವುದಾದರೂ ಅದರ ಕಾರಣ ಇನ್ನೂ ರಹಸ್ಯಾತ್ಮಕವಾಗಿಯೇ ಇದೆ. ಅಲರ್ಜಿಯ ಮೂಲಕಾರಣವನ್ನು ಗೊತ್ತುಪಡಿಸಿ ಅದನ್ನು ನಿವೃತ್ತಿಗೊಳಿಸುವ ಔಷಧಗಳನ್ನು ಕಂಡು ಹಿಡಿಯಲಾಗಿಲ್ಲ. ವಂಶವಾಹಿಗಳ ತಂತ್ರಜ್ಞಾನ ಸಾಕಷ್ಟು ಮುಂದುವರೆಯುವವರೆಗೆ ಇಂಥ ಔಷಧಿಗಳನ್ನು ಕಂಡು ಹಿಡಿಯುವ ಸಂಭವವೂ ಕಡಿಮೆ. ಅಲ್ಲಿಯವರೆಗೆ ಅಲರ್ಜಿಕ್ ಪ್ರವೃತ್ತಿಯಳ್ಳವರಿಗೆ ತಾತ್ಕಾಲಿಕ ಉಪಶಮನವನ್ನು ಒದಗಿಸುವುದೊಂದೇ ಡಾಕ್ಟರರಿಗೆ ಇರುವ ದಾರಿ.



Printed and Published by S.K. KATOTE on behalf of Loka Shikshana Trust at Samyukta Kàrnataka Press, Koppikar Road, Hubli-580 020. (Phone: 364303): No. 2, Residency Road, Bangalore-560 025. (Phone: 2213265).

**Managing Editor: K. SHAMARAO**

Registerd with the Registrar of Newspapers for India under No. 3633/57.

'TURI, Kannada Digest Reg No KRNG-43,
nce No L2120- WPP No. 33 Price- Rs. 6-00




# ಲೋಕ ಶಿಕ್ಷಣ ಟ್ರಸ್ಟ್
# ಗ್ರಂಥ'ಮಾಲೆಯ ಪ್ರಕಟಣೆಗಳು
## ಹುಬ್ಬಳ್ಳಿ-ಬೆಂಗಳೂರು
## ಈಗ ಲಭ್ಯವಿರುವ ಪ್ರಕಟಣೆಗಳು

| ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|
| ೧. ಅತೀಂದ್ರಿಯ ಶಕ್ತಿ ಇರುವುದು ನಿಜವೇ ? | ಡಾ. ಸಿ.ಆರ್. ಚಂದ್ರಶೇಖರ್ | ರೂ. ೧೦.೦೦ |
| ೨. ಶ್ರೀ ರಾಮದಾಸರು ಹೇಳಿದ ಕಥೆಗಳು | ಶ್ರೀ ಬಿ.ಡಿ. ಜತ್ತಿ | ರೂ. ೧೫.೦೦ |
| ೩. ನನಗೆ ನಾನೇ ಮಾದರಿ | ಶ್ರೀ ಬಿ.ಡಿ. ಜತ್ತಿ | ರೂ. ೪೦.೦೦ |
| ೪. ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ | ಡಾ. ಸೂರ್ಯನಾಥ ಕಾಮತ | ರೂ. ೪೫.೦೦ |
| ೫. 'ವಂದೇಮಾತರಂ'ದಿಂದ 'ಜನಗಣಮನದ'ವರೆಗೆ | ಶ್ರೀ ವಿ.ಎಚ್. ದೇಸಾಯಿ | ರೂ. ೫೦.೦೦ |
| ೬. ಕೃಷ್ಣಾವತಾರ ಭಾಗ-೩ | ಮೂಲ: ಶ್ರೀ ಕೆ.ಎಂ. ಮುನ್ಷಿ ಅನುವಾದ: ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮ | ರೂ. ೨೦.೦೦ |
| ೭. ಕೃಷ್ಣಾವತಾರ ಭಾಗ-೪ | -"- | ರೂ. ೨೦.೦೦ |
| ೮. ಕೃಷ್ಣಾವತಾರ ಭಾಗ-೫ | -"- | ರೂ. ೨೫.೦೦ |
| ೯. ಕೃಷ್ಣಾವತಾರ ಭಾಗ-೬ | -"- | ರೂ. ೨೦.೦೦ |
| ೧೦. ಕೃಷ್ಣಾವತಾರ ಭಾಗ-೭ | -"- | ರೂ. ೨೦.೦೦ |
| ೧೧. ಕೃಷ್ಣಾವತಾರ ಭಾಗ-೮-೧೦ | -"- | ರೂ. ೨೦.೦೦ |
| ೧೨. ಗೀತಾ ನಿತ್ಯಪಾಠ | ಶ್ರೀ ರಂಗನಾಥ ದಿವಾಕರ | ರೂ. ೩.೦೦ |
| ೧೩. ಉಲ್ಲಾಸ ಮಾನಸ | ಡಾ. ಸಿ.ಆರ್. ಚಂದ್ರಶೇಖರ | ರೂ. ೩.೦೦ |
| ೧೪. ಕೃಷ್ಣಾವತಾರದ ಕೊನೆಯ ಗಳಿಗೆಗಳು | ಪ್ರೊ. ಕೆ.ಎಸ್. ನಾರಾಯಣಾಚಾರ್ಯ | ರೂ. ೨೦.೦೦ |

ವಿ.ಸೂ.: ಪುಸ್ತಕ ಮಾರಾಟಗಾರರಿಗೆ ಕನಿಷ್ಠ ೧೦ ಪ್ರತಿಗಳನ್ನು ತರಿಸಿದರೆ ಶೇ. ೨೫ರಷ್ಟು ಕಮೀಷನ್ ಕೊಡಲಾಗುವದು. ಪುಸ್ತಕಗಳು ಬೇಕಾದಲ್ಲಿ ತಕ್ಷಣ ಕೆಳಕಂಡ ವಿಳಾಸಕ್ಕೆ ಎಲ್ಲ ವಿವರಗಳೊಂದಿಗೆ ಡಿ.ಡಿ. ಅಥವಾ ಮನಿಯಾರ್ಡರ್ ಮೂಲಕ ಬರೆದು ತಿಳಿಸುವುದು. (ಅಂಚೆ ವೆಚ್ಚ ಪ್ರತ್ಯೇಕ. ವಿ.ಪಿ.ಪಿ. ಸೌಲಭ್ಯ ಇಲ್ಲ.)

### ಪ್ರಸಾರಾಂಗ ವ್ಯವಸ್ಥಾಪಕರು

ಸಂಯುಕ್ತ ಕರ್ನಾಟಕ,
ನಂ. ೨, ರೆಸಿಡೆನ್ಸಿ ರಸ್ತೆ,
ಬೆಂಗಳೂರು-೨೫.

ಸಂಯುಕ್ತ ಕರ್ನಾಟಕ,
ಕೊಪ್ಪೀಕರ ರಸ್ತೆ,
ಹುಬ್ಬಳ್ಳಿ-೨೦.

Cover Printed at: Bharat Photo Offset Works, Dharwad. Ph: 40545





# ಶ್ರೀ ಕೃಷ್ಣಾವತಾರದ ಕೊನೆಯ ಗಳಿಗೆಗಳು

ಪ್ರೊ. ಕೆ. ಎಸ್. ನಾರಾಯಣಾಚಾರ್ಯ





ಲೋಕ ಶಿಕ್ಷಣ ಟ್ರಸ್ಟ್ ಗ್ರಂಥ ಮಾಲೆ,
ಹುಬ್ಬಳ್ಳಿ-ಬೆಂಗಳೂರು.